# ಕಲಘಟಗಿಯ ಕಲೆ

## ಒಂದು ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಪ್ರಬಂಧ



ಸಂಶೋಧಕ
**ಶಶಿಕಾಂತ ಕೆ. ಬಸರಿಕಟ್ಟಿ**

ಮಾರ್ಗದರ್ಶಕರು
**ಡಾ.ಎಸ್.ಸಿ. ಪಾಟೀಲ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು





ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭



# ಕಲಘಟಗಿಯ ಕಲೆ

ಒಂದು ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಕಿರು ಸಂಶೋಧನ ಪ್ರಬಂಧ




ಸಂಶೋಧಕ
ಶಶಿಕಾಂತ ಕೆ. ಬಸರಿಕಟ್ಟಿ

ಮಾರ್ಗದರ್ಶಕರು
ಡಾ. ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಲಲಿತಕಲಾ ನಿಕಾಯ
ಶಿಲ್ಪ ಮತ್ತು ವರ್ಣ ಚಿತ್ರಕಲೆಗಳ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಶಾಖೆ : ಬನಶಂಕರಿ
೨೦೦೭





# ಪ್ರಮಾಣ ಪತ್ರ

**ಕಲಘಟಗಿಯ ಕಲೆ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

S.K. Basarikatti

**(ಶಶಿಕಾಂತ ಕೆ. ಬಸರಿಕಟ್ಟಿ)**
ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಜೂನ್ ೨೦೦೭
ಸ್ಥಳ : ಬನಶಂಕರಿ ಬಾದಾಮಿ

## ಪ್ರಮಾಣ ಪತ್ರ

ಶಶಿಕಾಂತ ಕೆ. ಬಸರಿಕಟ್ಟಿ ಇವರು ಬರೆದು ಸಾದರಪಡಿಸಿದ **ಕಲಘಟಗಿಯ ಕಲೆ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಡಾ.ಎಸ್.ಸಿ.ಪಾಟೀಲ)**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಜೂನ್ ೨೦೦೭
ಸ್ಥಳ : ಬನಶಂಕರಿ ಬಾದಾಮಿ

## ಪರಿವಿಡಿ

ಯಾವುದೆ ಕಲಾಕ್ರಿಯೆ ನಿಂತನೀರಲ್ಲ, ಹರಿಯುತ್ತಿರುವ ನದಿ, ನದಿಯು ಚಲನೆಯ ಸಂಕೇತ. ಚಲನೆ ಜೀವಂತಿಕೆಯ ಪ್ರತೀಕ. ಬೆಟ್ಟದ ಮೇಲೆ ಹುಟ್ಟುವ ನದಿಯು ತಗ್ಗು ಪ್ರದೇಶಗಳನ್ನು ಅರಸುತ್ತಾ ಹರಿಯುವಂತೆ, ಅದು ದಿಕ್ಕುಗಳನ್ನು ಬದಲಾಯಿಸುತ್ತದೆ. ನಾಡು-ಕಾಡು-ಪಟ್ಟಣಗಳಿಗೆ ತನ್ನ ಅಗತ್ಯವನ್ನು ತೋರಿಸುತ್ತ ಸಾರುತ್ತ ನಿರಾಂತಕವಾಗಿ ಸಾಗುತ್ತದೆ, ಹಲವು ತೊರೆಗಳು ಹಲವು ಚಿಕ್ಕ ಪುಟ್ಟ ನದಿಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ತಾನು ಹಿಗ್ಗುತ್ತಾ, ಬೇಸಿಗೆಯಲ್ಲಿ ಬತ್ತಿಹೋಗುತ್ತಾ, ಮಳೆಗಾಲದಲ್ಲಿ ಆಕ್ರಮಣಕಾರಿಯಾಗುತ್ತ, ವಿಶಾಲವಾದ ಸಮುದ್ರವನ್ನು ಸೇರುತ್ತದೆ. ಹಾಗೆಯೇ ಕಲಾಕ್ರಿಯೆಯೂ ಕೂಡಾ ಸಂಸ್ಕೃತಿ-ಪರಂಪರೆ ಎಂಬ ಅಗಾಧವಾದ ಅವಕಾಶದಲ್ಲಿ ವಿಲೀನವಾಗುತ್ತದೆ.

ಬದಲಾವಣೆ ಬೆಳವಣಿಗೆಯನ್ನು ನಿರ್ಧರಿಸುತ್ತದೆ. ಕಾಲಕಾಲಕ್ಕೂ, ಹಂತ ಹಂತಕ್ಕೂ ಬದಲಾಗುವ ನದಿಯಂತೆ- ಮಾನವನ ಭೌತಿಕ ವಿಕಾಸದಂತೆ, ಬುದ್ಧಿಯು ವಿಕಾಸವಾಗುವಂತೆ ಕಲಾವಿಕಾಸಕ್ಕೂ ಬದಲಾವಣೆಯೇ ತಳಹದಿ. "ಕಲೆ ಮಾನವನ ನಾಗರೀಕತೆಯ ಕುರುಹು ಅಭಿವ್ಯಕ್ತಿ ಪ್ರಕ್ರಿಯೆಯ ಮೂಲ ಸ್ವರೂಪ, ಪ್ರಕೃತಿದತ್ತ ಮಾನವೀಯ ಗುಣಗಳನ್ನು ರೂಪಿಸುವ ಪರಿಕ್ರಮ" ಪರಿಸರದ ಜತೆ- ಕಲ್ಲು, ಮಣ್ಣು, ನೆಲ, ಜಲ, ಮರ, ಕಾಡು, ಬೆಂಕಿ, ಗಾಳಿ, ಇತ್ಯಾದಿಯಾಗಿ ಸ್ಪಂದಿಸಲು ಕಲಿತುಕೊಂಡ ಮಾನವ ತನ್ನ ಸಂತೋಷಕ್ಕಾಗಿ ಅನುಭವಗಳನ್ನು ಅನುಭಾವವನ್ನಾಸುವ ಸ್ಥಿತ್ಯಂತರ ಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಲೆ ಬಂದಿದ್ದಾನೆ.

ಮಾನವ ನಡೆಸುವ ಎಲ್ಲಾ ಕ್ರಿಯೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ. ಅದು ವೈಯಕ್ತಿಕವಿರಬಹುದು, ಸಾರ್ವತ್ರಿಕವಿರಬಹುದು, ಇದು ವ್ಯಕ್ತಿಯಿಂದ ವ್ಯಕ್ತಿಗೆ ಸಮಾಜದಿಂದ ಸಮಾಜಕ್ಕೆ, ಕಾಲದಿಂದ ಕಾಲಕ್ಕೆ ಪರಿವರ್ತನೆಗೊಳಗಾಗುವ ಉದ್ದೇಶ. ಅಂತೆಯೇ ವ್ಯಕ್ತಿಯ. ಮಧ್ಯ ಇರುವ ಸಂಬಂಧ ಸಮಾಜದ ಮಧ್ಯ ರೂಪಗೊಳ್ಳುವ ಬಾಂಧವ್ಯ ಕಾಲ ಕಾಲದ ನಡುವೆ ಬೆಳೆಯುವ ಕೊಂಡಿ. ಒಂದು ಇನ್ನೊಂದನ್ನು ರೂಪಿಸುತ್ತದೆ. ಒಂದರಿಂದ ಇನ್ನೊಂದರ ಉದ್ದೇಶ ಸಾಧಿಸಲ್ಪಡುತ್ತದೆ. ಒಂದು ಇನ್ನೊಂದರ ಮಿಲನ ಮೂರನೇಯದರ ಹುಟ್ಟಿಗೆ ಕಾರಣವಾಗುತ್ತದೆ. ಇದು ಕಲಾ ಇತಿಹಾಸದ ಮೂಲಕ ಒಮ್ಮೆ ಕಣ್ಣು ಹಾಯಿಸಿದಾಗ ಸತ್ಯವಾಗುವ ವಿಚಾರ.[೧೧]ಎಂಬ ಮಾತುಗಳು ಸರಿಯಾದುದೆನಿಸುತ್ತದೆ.

ಕಲೆ ಮನುಷ್ಯನ ಮನಸ್ಸನ್ನು ಮುದಗೊಳಿಸಿ ಅವನಲ್ಲಿ ವಿಶಿಷ್ಟವಾದ ಸಂಸ್ಕಾರವನ್ನು ಮೂಡಿಸುತ್ತದೆ. ಭೌತಿಕ ಜೀವನದ ಹೋರಾಟದಲ್ಲಿ ಸದಾ ತೊಳಲುವ ಮಾನವ ಕಲೆಯನ್ನು ಆರಾಧಿಸದಿದ್ದರೆ ಅವನ ಪಾಲಿಗೆ ಮಾನಸಿಕ ಸೌಖ್ಯದೂರವಾಗುತ್ತದೆ. ಮಾನವ ಸಂಸ್ಕೃತಿಯಲ್ಲಿ ಕಲೆಗೆ ಅಗ್ರಸ್ಥಾನವಿದ್ದು ಆದಿ ಕಾಲದಿಂದಲೂ ಕಲೆ ಮನುಷ್ಯನ ಕೈ ಹಿಡಿದುಕೊಂಡೇ ಬಂದಿದೆ.[೧೨] ಕಲೆಯಲ್ಲಿ ಕಾಲಕಾಲಕ್ಕೆ ಕಾಣಿಸಿಕೊಳ್ಳುವ ಬದಲಾವಣೆಗಳು ಆಯಾ

೧೧. ನೇಮಿರಾಜ ಶೆಟ್ಟಿ : ಪೋಸ್ಟ್ ಮಾಡರ್ನಿಸಂ ಪು ೫ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೫
೧೨. ಪಿ. ಆರ್. ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ ಪು. ೩೦೯ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೩

ಕಾಲದ ಜನರ ಮಾನಸಿಕ ಸಾತ್ವಿಕಚೈತನ್ಯ ಮತ್ತು ಅಭಿರುಚಿಗಳಲ್ಲಿ ಆದ ಪರಿವರ್ತನೆಗಳಿಗೆ ಅನುಗುಣವಾಗಿರುತ್ತವೆ. ಹೀಗಾಗಿ ಕಲೆ ಸಮಾಜದ ಕನ್ನಡಿಯಾಗಬಲ್ಲದು. ಕೆಲವೊಮ್ಮೆ ಅದು Ahead of time ಸಹ ಆಗಿರಬಲ್ಲದು. ಜನರ ಮಾನಸಿಕ ದೈಹಿಕ, ಸಾತ್ವಿಕ ಚೈತನ್ಯಗಳು ಹಾಗೂ ಅಭಿರುಚಿಗಳು ಸುತ್ತಲಿನ ಆಗುಹೋಗುಗಳಿಂದ ಸಹಜವಾಗಿಯೇ ಪ್ರಭಾವಿಸಲ್ಪಡುತ್ತವೆ.[೩] ನಮ್ಮ ಇತರ ಇಂದ್ರಿಯಾನುಭವಗಳಿಗೆ ಹೋಲಿಸಿದರೆ ಕಣ್ಣಿನ ಅನುಭವವು ಹೆಚ್ಚು ಪ್ರಭಾವಶಾಲಿಯಾಗಿ ಕಂಡುಬಂದಿದ್ದು ಸುಂದರ ದೃಶ್ಯಗಳು ನಮ್ಮ ಗಮನವನ್ನು ಸೆರೆಹಿಡಿಯುತ್ತವೆ. ನಮ್ಮನ್ನು ಉನ್ನತ ವಿಚಾರಗಳ ಕಡೆಗೆ ನಡೆಸುತ್ತವೆ. ಹೆಚ್ಚು ಪರಿಪೂರ್ಣವಾದ ಪ್ರಮಾಣಜ್ಞಾನ ಮತ್ತು ಸಂಯೋಜನೆಗಳನ್ನು ಯಾವ ಶಿಕ್ಷಣವೂ ಇಲ್ಲದೇ ಗುರುತಿಸಬಹುದು.[೪] ಎಂಬ ಮಾತು ಅರ್ಥ ಪೂರ್ಣವಾದುದಾಗಿದೆ.

ಜನಾಂಗದ ಬದುಕು ಜೀವನ ಚರಿತ್ರೆಯನಿಸಿದರೆ, ಕಲೆಗಳು ಅದರ ಆತ್ಮಚರಿತ್ರೆಯನಿಸುತ್ತವೆ. ವ್ಯಾಪಕವಾದ ಅರ್ಥದಲ್ಲಿ "ಜನತೆ ಬದುಕಿದ ರೀತಿ ಅನುಸರಿಸಿದ ಧರ್ಮ ಕಟ್ಟಿದ ಕಲೆ ಅವರ ಜೀವನಸಮಸ್ಯೆ. ಜೀವನ ಮೌಲ್ಯ ಇತ್ಯಾದಿಗಳ ವಿವರಣೆಯೇ" ಇತಿಹಾಸದ ಒಳ ಚೌಕಟ್ಟಿನಲ್ಲಿ ಬೆಳೆದು ಬಂದ ಕಲೆಗಳು ಅದಕ್ಕೆ ಸುಂದರ ಸಂಸ್ಕಾರವನ್ನು ನೀಡುತ್ತವೆ.[೫]

ಚಿತ್ರಕಲೆ ಒಂದು ನಾಡಿನ ಒಂದು ಜನಾಂಗದ ಇತಿಹಾಸವನ್ನು ತಿಳಿಸುವ ಮಹತ್ವದ ಸಾಧನವಾಗಿ ಅದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಆನಂದವನ್ನು ನೀಡುತ್ತದೆ. ಒಂದು ಚಿತ್ರ ಇಲ್ಲವೆ ಶಿಲ್ಪಕೃತಿ ಸಾವಿರಾರು ವರ್ಷಗಳ ಇತಿಹಾಸವನ್ನು ನಮ್ಮ ಕಣ್ಮುಂದೆ ನಿಲ್ಲಿಸುವ ಶಕ್ತಿಯನ್ನು ಪಡೆದಿದೆ. ಮಾನವನ ಮೊದಲ ಭಾಷೆ ಚಿತ್ರಕಲೆಯಿಂದಲೇ ಆರಂಭವಾಯಿತು. ಹಾಗೆಯೇ ಲಿಪಿಯ ಉಗಮಕ್ಕಿಂತ ಮೊದಲೆ ಚಿತ್ರಕಲೆ ಬಳಕೆಯಲ್ಲಿತ್ತೆಂದೂ ತಿಳಿದುಬರುತ್ತದೆ.[೬] ಹೀಗೆ ಪ್ರಾಚೀನ ಕಾಲದಿಂದಲೂ ಈ ಅಭಿವ್ಯಕ್ತಿ ಮಾಧ್ಯಮ ಬೆಳೆದುಬಂದಿದೆ.

ಜಗತ್ತಿನ ಯಾವುದೇ ಸಂಸ್ಕೃತಿಯ ಮೂಲ ಸೆಲೆಯನ್ನು ಜಾನಪದ ಸಂಸ್ಕೃತಿಯಿಂದ ಗುರುತಿಸಲಾಗುತ್ತದೆ. ಈ ಅರ್ಥದಲ್ಲಿ ಜಾನಪದವು ಮಾನವ ಸಂಸ್ಕೃತಿಯ ಮೊದಲ ಪುಟವೆನ್ನಬಹುದು. ಅಗೋಚರ ಕಾಲವೊಂದರಲ್ಲಿ ರೂಪಗೊಂಡಿರಬಹುದಾದ ಜನಪದ ಕಲೆಗಳು ಆಯಾ ಸಂಸ್ಕೃತಿಯ ಜನಬದುಕಿನ ಆತ್ಮವಾಗಿ, ಜೀವವಾಗಿ ಜೀವಂತ ಅಸ್ತಿತ್ವವನ್ನು ಪಡೆದಿವೆಯಲ್ಲದೆ ಅವು ಜನಪದರ ಬದುಕಿನೊಡನೆ ಅರ್ಥಪೂರ್ಣ ಸಂಬಂಧವನ್ನು ಹೊಂದಿವೆ. ಅವರ ಆಚಾರ, ವಿಚಾರ, ರೀತಿನೀತಿ, ನಂಬಿಕೆಗಳು, ವಿಧಿಕ್ರಿಯೆಯಾಗಿ, ಸಾಂಪ್ರದಾಯವಾಗಿ, ಆಚರಣೆಯಾಗಿ ಹಲವಾರು ಸ್ಥಿತ್ಯಂತರಗಳೊಂದಿಗೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಿಂತಿವೆ. ಜನಪದರ ಇಂತಹ ನೂರಾರು ಕಲೆಗಳಲ್ಲಿ ಈ ಕುಶಲಕಲೆಗಳು ಮಹತ್ವದವುಗಳಾಗಿವೆ.[೭] ಅವು ಆಯಾ ಪ್ರದೇಶದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡು ಬೆಳೆದು ಬಂದಿವೆ.

ಮಾನವ ಪ್ರಕೃತಿಯ ಸಹಜ ನಿಯಮಗಳು ಎದುರಾದ ಎಲ್ಲ ಅಡಚಣೆಗಳನ್ನೂ ನುಂಗಿಕೊಳ್ಳುವ ಅದರ ಗಾಂಭೀರ್ಯ ಈ ವಿಸ್ಮಯದ ಬೆರಗಿನ ಭಾವನೆಗಳು ನಮ್ಮ ಕಾಲಕ್ಕೆ ಕಮ್ಮಿಯಾಗಿರುವದಕ್ಕೆ ಕಾರಣ ನಾವಿಂದು ಜೀವಿಸುವ ಇಕ್ಕಟ್ಟಿನ ಸಂಸ್ಕೃತಿ, ಜನವಸತಿ ನಿಬಿಡವಾದ, ಸಮೂಹ ಮಾಧ್ಯಮಗಳಿಂದ ತುಂಬಿ ತುಳುಕುತ್ತಿರುವ ಜನಾರಣ್ಯ. ಇಂದು ನಾವು ಸ್ವೀಕರಿಸುವ 'ಮಾಹಿತಿ' ಯ ಗುಣ ಲಕ್ಷಣಗಳು ಸಮೂಹ ಮಾಧ್ಯಮಗಳು ಇವು ನಮ್ಮ ಬದುಕಿನ ಕಲೆಯನ್ನು ಬದಲಾಯಿಸಿವೆ.[೮] ಇದು ಅನಿವಾರ್ಯ ಕೂಡಾ ಬದಲಾವಣೆಯನ್ನು ಯಾರಿಂದಲೂ ನಿಲ್ಲಿಸಲು ಸಾಧ್ಯವಿಲ್ಲ ಕಲೆಗಳು ಈ ಮಾತಿಗೆ ಹೊರತಾಗಿಲ್ಲ.

---

೦೩. ಕೆ.ವಿ. ಸುಬ್ರಹ್ಮಣ್ಯಂ : ಕಲಾಸಂವೇದನೆಯ ಒಳನೋಟಗಳು ಪು. ೦೧ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೭
೦೪. ಬಿ. ಆರ್ ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ ಪು. ೬೨೧ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೩
೦೫. ಡಾ. ಎಸ್. ಕೆ ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೦೧ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ, ೧೯೯೩
೦೬. ಸುಚಿತ್ರಾ ಲಿಂಗದಳ್ಳಿ : ವಿಜಯನಗರ ಭಿತ್ತಿಚಿತ್ರಕಲೆ ಪು. ೦೧ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬
೦೭. ಡಾ.ಎಸ್. ಕೆ ಪಾಟೀಲ : ಆಚರಣೆಯಲ್ಲಿ ಜನಪದ ವಾಸ್ತುಶಿಲ್ಪಗಳು ಪು. ೦೧ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೬
೦೮. ರವಿಕುಮಾರ ಕಾಶಿ : ಪಾಪ್ ಕಲೆ ಪು. ೦೧ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೭

ಮನುಷ್ಯ ಇತರ ಪ್ರಾಣಿಗಳಿಗಿಂತ ಭಿನ್ನವಾಗಿರುವನು ಮಾನಸಿಕವಾಗಿ ಬೆಳೆದಿರುವನು, ಭಾವನೆಗಳನ್ನು, ಹೊಂದಿರುವನು, ಅವನು ಸಹಜವಾಗಿ ಸಂಗ್ರಹಿಸಿಕೊಂಡ ಶಕ್ತಿಯಲ್ಲಿ ಅನಾವಶ್ಯಕ, ಇಲ್ಲವೇ ಹೆಚ್ಚಾದುದು ಕ್ರೀಡೆಯಂತೆ ಮನರಂಜನೆಯಾಗಿ ಅಭಿವ್ಯಕ್ತಿಯನ್ನು ಪಡೆಯುತ್ತದೆ. ಲಲಿತಕಲೆಗಳ ಉಗಮವನ್ನು ಇಂತಹ ಅಭಿವ್ಯಕ್ತಿಯಲ್ಲಿ ಕಾಣಬಹುದು. ಹೀಗೆ ವಿಶಾಲಾರ್ಥದಲ್ಲಿ ಕಲೆಯೂ ಒಂದು ರೀತಿಯ ಕ್ರೀಡೆಯೇ?[೯] ಎಂಬ ಮಾತುಗಳು ಕಲಾವಲಯದಲ್ಲಿ ಚರ್ಚೆಗೆ ಬರುವ ವಿಷಯವಾಗಿದೆ ಈ ಮಾತನ್ನು ಒಪ್ಪಬಹುದಾಗಿದೆ.

ಜನಪದ ಕಲೆಗಳು ನಮ್ಮ ಗ್ರಾಮೀಣ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಜನಪದ ಕಲೆಗಳೇ ಶಿಷ್ಟಕಲೆಗಳಿಗೆ ಭದ್ರಬುನಾದಿಗಳಾಗಿವೆ. ಉತ್ತರ ಕರ್ನಾಟಕದ ಭಾಗದಲ್ಲಿ ಕೆಲವೊಂದು ಜನಪದ ಶಿಲ್ಪಕಲೆಯ ಪರಂಪರೆ ಇಂದಿಗೂ ಎದ್ದು ಕಾಣುತ್ತಿವೆ. ನಿತ್ಯ ಜೀವನಕ್ಕೆ ಈ ಜನಪದ ಶಿಲ್ಪಗಳು ಹೊಸ ಹುರುಪನ್ನು ಕಲೆಯ ಚಮತ್ಕಾರವನ್ನು ತೋರುತ್ತವೆ. ಇವುಗಳೊಂದಿಗೆ ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಹಾಗೂ ಐತಿಹಾಸಿಕ ನೈತಿಕ ಹೊಣೆಹೊತ್ತುಕೊಂಡು ಪ್ರತಿವರ್ಷವೂ ಆಯಾ ಸಂದರ್ಭದ ಹಬ್ಬ, ಉತ್ಸವ, ಆಚರಣೆಯ ಸಂದರ್ಭದಲ್ಲಿ ಜನಪದ ಚಿತ್ರಶಿಲ್ಪಕಲೆಗಳು ಇಂದಿಗೂ ರೂಪಗೋಳ್ಳುತ್ತಿವೆ.[೧೦] ಮತ್ತು ಅವುಗಳಲ್ಲಿ ಹೊಸತನಗಳು ಸಹಜವಾಗಿ ಅಭಿವ್ಯಕ್ತವಾಗುತ್ತವೆ.

ಪ್ರಮುಖವಾಗಿ ಶಿಷ್ಟಪದ ಮತ್ತು ಜನಪದ ಎಂಬ ವಿಂಗಡಣೆ ಮಾಡಿ ಈ ಕಲೆಗಳನ್ನು ಪರಿಗಣಿಸಬೇಕು. ಶಿಷ್ಠಾಚಾರಗಳ ಚೌಕಟ್ಟಿನಲ್ಲಿ ನಿಸರ್ಗದೂರ ಬದುಕನ್ನು ನಡೆಯಿಸಿಕೊಂಡು ಬಂದ ನಗರ ಜನತೆಯ ಕಲೆ **"ಶಿಷ್ಟಪದಕಲೆ"** ಎನಿಸಿದರೆ ನಿಸರ್ಗ ಸಹಜವಾದ ಬದುಕನ್ನು ನಡೆಸಿಕೊಂಡು ಬಂದ ಗ್ರಾಮೀಣ ಕಲೆ **"ಜನಪದಕಲೆ"** ಎನಿಸುತ್ತದೆ.[೧೧] ಈ ಜನಪದ ಕಲೆಯ ಮುಂದುವರಿದ ರೂಪವೇ ಶಿಷ್ಟಪದ ಕಲೆಯಾಗಿದೆ.

ನಾಗರಿಕತೆಯ ಪ್ರಭಾವ ಜನಪದರ ಮೇಲೆ ಆದಂತೆ ಜಾನಪದ ಕೃಶವಾಗುತ್ತದೆ. ಎಷ್ಟೋ ಅಂಶಗಳು ಕಣ್ಮರೆಯಾಗುತ್ತವೆ. ಜನಪದರು ಎಲ್ಲಿಯವರೆಗೆ ಇರುತ್ತಾರೊ ಅಲ್ಲಿಯವರೆಗೆ ಜನಪದ ಅಂಶಗಳು ಕಾಲದಿಂದ ಕಾಲಕ್ಕೆ, ಪರಂಪರೆಯಿಂದ ಪರಂಪರೆಗೆ ಹರಿಯುವಾಗ ಮಾರ್ಪಾಟನ್ನು ಹೊಂದುತ್ತಾ ಬರುತ್ತವೆ. ಎಂಬ ಅಂಶ ಗಮನಾರ್ಹವಾದುದು. ಯಾವದೇ ಕಲೆಯಾಗಲಿ, ಸಾಹಿತ್ಯವಾಗಲಿ, ಕಾಲಕ್ಕೆ ಅನುಗುಣವಾಗಿ ಬದಲಾವಣೆ ಆಗುತ್ತಲೇ ಇರುತ್ತದೆ. ಇಲ್ಲದೆ ಹೋದರೆ ಅದು ತನ್ನ ಜೀವಂತಿಕೆಯನ್ನು ಕಳೆದುಕೊಳ್ಳುತ್ತದೆ. ಎಂಬುದರಲ್ಲಿ ಎರಡು ಮಾತಿಲ್ಲ.

ಜನಪದ ಕಲೆಗಳು ನಮ್ಮ ಗ್ರಾಮೀಣ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿವೆಯಾದರೂ ಆಧುನಿಕ ನಾಗರಿಕತೆಯ ಬಿರುಗಾಳಿ ಹಳ್ಳಿಗಳ ಕಡೆ ಬೀಸತೊಡಗಿ ಪರಂಪರಾನುಗತವಾಗಿ ಬೆಳೆದು ಬಂದ ಅನೇಕ ಕಲೆಗಳು ಕಣ್ಮರೆಯಾಗಿವೆ ಕೆಲವು ಕಲೆಗಳಂತೂ ಧೂಳಿನಿಂದ ಮಸುಕ್ಕಾಗಿದ್ದರೆ. ಕೆಲವು ರೂಪಾಂತರ ಹೊಂದಿ ತಮ್ಮ ಸಹಜ ಸೌಂದರ್ಯವನ್ನು ಕಳೆದುಕೊಂಡಿವೆ.[೧೨] ಈ ಹಿನ್ನಲೆಯಲ್ಲಿ ಮರೆಯಾಗುತ್ತಿರುವ ಕಲಘಟಗಿ ಕಲೆ. ಮತ್ತು ಕಲಘಟಗಿ ಕಲಾವಿದರ ಬಗ್ಗೆ ಅಧ್ಯಯನವನ್ನು ಕೈಗೊಳ್ಳುವ ಉದ್ದೇಶವನ್ನು ಹೊಂದಿದೆ.

ವಾಸ್ತವವಾಗಿ ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಮಾತ್ರವಲ್ಲ ಅಲ್ಲಿ ಬದುಕಿದ್ದ ಜನ, ಹೀಗೆ ಬದುಕಿರುವ ಜನರ ಬದುಕಿನ ಒಂದು ಗಣನೀಯ ಭಾಗವಾಗಿ ಕಲೆಗಳು ಆಕಾರ ಪಡೆದಿರುತ್ತವೆ. ಇತ್ತೀಚಿಗೆ ಇತಿಹಾಸವನ್ನು ನೋಡುವ ದೃಷ್ಟಿಯೂ ಗಮನಾರ್ಹವಾಗಿ ಬದಲಾವಣೆ ಪಡೆದುಕೊಂಡಿದೆ. ಇತಿಹಾಸ ರಚನೆಯ ಆಕರಗಳನ್ನು ಹೊಸರೀತಿಯಿಂದ ನೋಡುವ ದೃಷ್ಟಿ ಬೆಳೆದಿದೆ. ಈ ಅಧ್ಯಯನದಿಂದ ನಮಗೆ ನಮ್ಮ ನಾಡಿನ ಜನಪದರ ಜೀವನ ಶೈಲಿಯ ಅಧ್ಯಯನಕ್ಕೆ ಕಲಘಟಗಿಯ ಕಲೆ ಹೊಸ ಆಕರ ಸಾಮಗ್ರಿಯಾಗಿ

---

೦೯. ಚಿ.ಸು ಕೃಷ್ಣಶೆಟ್ಟಿ : ದೃಶ್ಯಕಲೆ ಎಂದರೇನು? ಪು.೧೮ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೫

೧೦. ಪಿ. ಆರ್ ತಿಪ್ಪೇಸ್ವಾಮಿ : (ಪ್ರ. ಸಂ) ಶಿಲ್ಪಕಲಾ ಪ್ರಪಂಚ ಪು. ೪೬೩ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೪

೧೧. ಡಾ. ಎಸ್. ಸಿ ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೦೩ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ, ೧೯೯೩

೧೨. ರವಿ ನಾಯಕ : ಕಿನ್ನಾಳ ಕಲೆ ಪು. ೦೨ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬

ಸಾಂಸ್ಕೃತಿಕ ಪರಂಪರೆಯ ಅಧ್ಯಯನಕ್ಕೆ ಸಹಕಾರಿಯಾಗಲಿದೆ.[೧೩] ಈ ಹಿನ್ನೆಲೆಯಲ್ಲಿ ಅದರ ಪ್ರಸ್ತುತ ಅಧ್ಯಯನವನ್ನು ನಡೆಸುವ ಉದ್ದೇಶ ಹೊಂದಲಾಗಿದೆ.

ಈ ಕಲಾಸಂಪತ್ತನ್ನು ನಾಡಿಗೆ ಪರಿಚಯಿಸುವ ಕಲಘಟಗಿಯ ಕಲೆಯ ಕುರಿತು ದಿನಪತ್ರಿಕೆ ಹಾಗೂ ವಿಶೇಷ ಸಂಚಿಕೆ, ವಾರಪತ್ರಿಕೆಗಳಲ್ಲಿ ಬಂದಿರುವ ಕೆಲವು ಬಿಡಿ ಲೇಖನಗಳನ್ನು ಹೊರತು ಪಡಿಸಿದರೆ. ಈ ಕಲೆಯ ಕುರಿತು ಸಮಗ್ರವಾದ ಅಧ್ಯಯನಗಳು ನಡೆದಿರುವುದಿಲ್ಲ ಇದನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕಲಘಟಗಿಯ ಚಿತ್ರಕಲೆಯನ್ನು ಮತ್ತು ಶಿಲ್ಪಕಲೆಯನ್ನು ದೃಶ್ಯಾತ್ಮಕ ನೆಲೆಯಿಂದ ಅಧ್ಯಯನ ಮಾಡುವ ಉದ್ದೇಶ ಈ ಪ್ರಬಂಧಕ್ಕೆ ಇದೆ. ಈ ಕಲೆ ಬೆಳೆದುಬಂದ ಬಗೆಯ ಕುರಿತು ಇಲ್ಲಿ ಸಿದ್ಧಗೊಳ್ಳುವ ವರ್ಣಗಳು ಹಾಗೂ ಶಿಲ್ಪಕಲಾಕೃತಿಗಳ ವಸ್ತು ವಿಷಯ, ವಿವಿಧ ಪ್ರಕಾರಗಳ ಬಗ್ಗೆ ಅಧ್ಯಯನ ಮಾಡುವುದರ ಜೊತೆಗೆ ಅವುಗಳನ್ನು ಮುಂದಿನ ತಲೆಮಾರಿಗೆ ದಾಖಲಿಸಿಡುವ ಉದ್ದೇಶವನ್ನು ಪ್ರಮುಖವಾಗಿ ಹೊಂದಲಾಗಿದೆ. ಹಾಗೆಯೇ ಈ ಕಲೆಯ ಬೆಳವಣಿಗೆಯ ಕುರಿತು ಗಂಭೀರವಾದ ಚರ್ಚೆಗೆ ಪ್ರಬಂಧದಲ್ಲಿ ಪ್ರಾಶಸ್ತ್ಯ ನೀಡಲಾಗಿದೆ. ಹೀಗೆ ಹಲವಾರು ಉದ್ದೇಶಗಳ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಅಧ್ಯಯನದ ವ್ಯಾಪ್ತಿ ಹೆಸರೇ ಸೂಚಿಸುವಂತೆ ಕಲಘಟಗಿಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದರು ಕಲಘಟಗಿಯಿಂದ ಆಚೆಗೆ ಸಂಗ್ರಹಿಸಲ್ಪಟ್ಟ ಕಲಾಕೃತಿಗಳು ಈ ಊರಿಂದ ವಲಸೆ ಹೋದ ಕಲಾವಿದರ ಕುಟುಂಬ, ಅವರ ಸ್ಥಿತಿಗತಿ ಮುಂತಾದವುಗಳ ಅಧ್ಯಯನವು ಇದರ ವ್ಯಾಪ್ತಿಗೆ ಬರುತ್ತದೆ.

ಇನ್ನೂ ಚಿತ್ರಕಲೆಯೂ ಸಾಹಿತ್ಯದಂತೆಯೇ ಮಾನವನು ಕಂಡುಕೊಂಡ ಬಂದ ವಿಶಿಷ್ಟ ಕಲಾ ಮಾಧ್ಯಮ ಸಮಾಜವನ್ನು ರೂಪಿಸುವಲ್ಲಿ, ಧರ್ಮವನ್ನು ಪ್ರಚಾರ ಮಾಡುವಲ್ಲಿ, ಮನರಂಜನೆಗಾಗಿ ವೈಯಕ್ತಿಕ ಭಾವನೆಗಳಿಗೆ ಅಭಿವ್ಯಕ್ತಿ ನೀಡುವಲ್ಲಿ ಈ ಕಲಾ ಮಾಧ್ಯಮ ಹೇಗೆ ಉಪಯೋಗಕ್ಕೆ ಬಂದಿದೆ ಮತ್ತು ಬಳಸಲ್ಪಟ್ಟಿದೆ ಎಂಬುದರ ಬಗ್ಗೆ ಇವುಗಳ ಶೈಲಿ, ವಸ್ತು, ವರ್ಣಗಳ ಬಳಕೆ, ಮುಂತಾದ ತಾಂತ್ರಿಕ ವಿಷಯಗಳ ಮೇಲೆ ತನ್ನ ಪ್ರಭಾವವನ್ನು ಹೇಗೆ ಬೀರಿದೆ ಎಂಬ ಅಂಶವನ್ನು ವಿವೇಚಿಸುವುದು[೧೪] ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಈ ರೀತಿ ಮಾನವನ ಜೀವನದಲ್ಲಿ ಹಾಸುಹೊಕ್ಕಾಗಿ ಅಭಿವೃದ್ಧಿಗೊಂಡಿರುವ ಕರಕುಶಲಕಲೆ ಜಾಗತಿಕ ಇತಿಹಾಸದ ಮೇಲೆ ಸಾಕುಷ್ಟು ಬೆಳಕು ಚಲ್ಲುತ್ತದೆ. ಒಂದು ನಿರ್ಧಿಷ್ಟ ಸ್ಥಳದಲ್ಲಿ, ಒಂದು ನಿರ್ಧಿಷ್ಟ ಸಮಯದಲ್ಲಿ ಪ್ರಚಲಿತವಾಗಿದ್ದ ತಾಂತ್ರಿಕ ಪರಿಜ್ಞಾನ, ಜೀವನ ಶೈಲಿಗಳು ಮತ್ತು ಸಂಪ್ರದಾಯಗಳನ್ನು ಇದು ಬಿತ್ತರಿಸುತ್ತದೆ. ಕರಕುಶಲಕಲೆಗಳು ಯಾವುದೇ ಭೂಮಿಯ ಸಂಸ್ಕೃತಿ ಮತ್ತು ಪರಂಪರೆಯ ಪ್ರತೀಕವಾಗಿದೆ.[೧೫] ಕುಶಲ ಕಲೆಗಳಲ್ಲಿ ಪ್ರತಿಭೆಯ ಚಮತ್ಕಾರ, ಶ್ರದ್ಧೆ, ಶ್ರಮಗಳಿಂದ ಜ್ಞಾನವೂಂದರ ಸಂಪರ್ಕದಿಂದ ಮೂರ್ತಸ್ವರೂಪ ಪಡೆದು ನಾಡಿನತುಂಬಾ ಬಹು ಬೇಡಿಕೆಯಿಂದ ಜೀವಂತ ಕಲೆಗಳಾಗಿ. ಆಕರ್ಷಣದ ಮೂಲ ಸ್ವರೂಪದಿಂದ ಅರಳುತ್ತಾ ನಿಂತಿವೆ.[೧೬] ಜ್ಞಾನ ಬುದ್ಧಿ ಕರಕುಶಲತೆ ಮುಪ್ಪುರಿಗೊಂಡು ಅನೇಕ ಪ್ರಾಕೃತಿಕ ಹಾಗೂ ಕೈಗಾರಿಕಾ ಕ್ರಾಂತಿಗಳ ಫಲವಾಗಿ ಎಡರು ತೊಡರುಗಳನ್ನು ಆರ್ಥಿಕ ದಬ್ಬಾಳಿಕೆಯನ್ನು ಯಂತ್ರಗಳ ಪೈಪೋಟಿಯನ್ನು ಮೆಟ್ಟಿನಿಂತು ಹೆದರದೇ ಕಳೆಗುಂದದೇ ಇರುವ ಕಲಘಟಗಿಯ ಕಲೆಯ ಕುರಿತು ಅಧ್ಯಯನ ಮಾಡಲಾಗಿದೆ.

ಪರಂಪರೆಯಿಂದ ಪರಂಪರೆಗೆ ಹರಿದು ಬಂದ ಇಂತಹ ಕಲೆಗಳು ಜನರ ಮತ್ತು ದೇಶದ ಮೂಲ ಸಂಸ್ಕೃತಿಯನ್ನು ತಿಳಿಸುವದರಿಂದ ಸರಿಯಾದ ರೀತಿಯಲ್ಲಿ ಉಳಿದು ಬೆಳೆದುಕೊಂಡು ಮುಂದಿನ ಜನಾಂಗಕ್ಕೆ ರವಾನಿಸುವ ಜವಾಬ್ದಾರಿ ಪ್ರತಿಯೊಬ್ಬ ಪ್ರಜ್ಞಾವಂತನದ್ದೂ ಆಗಿರುತ್ತದೆ. ಈ ಕಲೆಗಳನ್ನು ಪ್ರದರ್ಶಿಸುವ ಕಲಾಕಾರರ

---

೧೩. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೦೪ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೪. ಡಾ. ಅ.ಲ ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ ಪು. ೩೧ ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೮

೧೫. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೦೯ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೬. ಗವಿಸಿದ್ಧ.ಎಸ್.ಬಳ್ಳಾರಿ : ಕಿನ್ನಾಳ ಗೊಂಬೆಗಳು ಪು.೦೫ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೬

ಆರ್ಥಿಕ ಮಟ್ಟ ಸುಧಾರಿಸಿದರೆ ಹಳ್ಳಿಯ ಕಲೆಗಳಿಗೆ ಪ್ರೋತ್ಸಾಹಕೊಟ್ಟರೆ ನಿಜಕ್ಕೂ ಈ ಕಲೆಗಳು ಉಳಿಯುತ್ತವೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನ ಮಹತ್ವಪೂರ್ಣವೆನಿಸುತ್ತದೆ.

### ಇದುವರೆಗೆ ನಡೆದ ಅಧ್ಯಯನಗಳು

'ಸಂಶೋಧನೆ' ಎನ್ನುವುದು ಬಹಳ ಹಿಂದಿನಿಂದಲೂ ನಡೆದು ಬಂದಿದ್ದರೂ ಅದೊಂದು ಅಧ್ಯಯನ ಸ್ವರೂಪ ಪಡೆದು ಪದವಿ ಪ್ರಾಪ್ತಿಗಾಗಿ ಬಳಕೆ ಆಗಿರುವುದು ತೀರಾ ಇತ್ತೀಚಿಗೆ ಎಂದೇ ಹೇಳಬಹುದು. ಕ್ರಿಸ್ತಪೂರ್ವದಲ್ಲಿಯೇ ನಲಂದಾದಂತಹ ವಿಶ್ವವಿದ್ಯಾಲಯದ ಉಲ್ಲೇಖ ಭಾರತದಲ್ಲಿದೆ. ಆದರೆ ಆಂಗ್ಲದ 'ರೀಸರ್ಚ್'ಗೆ ಸಂವಾದಿಯಾಗಿ ಸಂಶೋಧನೆ ಒಂದು ಶಿಸ್ತು ರೂಪದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಬೆಳೆದು ಬಂದಿರುವುದು ಪಾಶ್ಚಾತ್ಯರ ಪ್ರಭಾವದಿಂದಲೇ. ಕರ್ನಾಟಕದಲ್ಲಂತೂ ಶತಮಾನದ ಈಚೆಗಷ್ಟೇ ಇಂತಹ ಸಂಶೋಧನಾ ಪದ್ಧತಿ ಬೆಳೆದು ಬಂದಿದೆ. ಸಮ್ಯಕ್‌ಶೋಧ ಅರ್ಥಾತ್ ಸತ್ಯಶೋಧ ಎಂಬರ್ಥ ನೀಡುವ ಸಂಶೋಧನೆ ಮೂಲತಃ ವೈಜ್ಞಾನಿಕ ಶಿಸ್ತಿಗೆ ಸಂಬಂಧಿಸಿದಂತೆ ಕಂಡುಬಂದರೂ ಮುಂದೆ ಅದು ಸಮಾಜ ವಿಜ್ಞಾನ ಕ್ಷೇತ್ರಕ್ಕೆ ವಿಸ್ತರಿಸಿಕೊಂಡು, ಇಂದು ಚಿತ್ರಕಲೆಯೂ ಸೇರಿದಂತೆ ಲಲಿತಕಲೆಯ ಎಲ್ಲ ಅಂಗಗಳಿಗೂ ತನ್ನ ಬಾಹುಗಳನ್ನು ಚಾಚಿಕೊಂಡಿದೆ. ಜೊತೆಗೆ ಒಂದು ದೃಷ್ಟಿಯಿಂದ ಸಂಶೋಧನಾ ಅಧ್ಯಯನ ಎನ್ನುವುದು ಶಿಕ್ಷಣೋನ್ನತಿಗೆ, ತನ್ಮೂಲಕ ವ್ಯಕ್ತಿಯ ಪದೋನ್ನತಿಗೆ ಅನಿವಾರ್ಯ ಎನ್ನುವಷ್ಟು ವ್ಯಾಪಕವಾಗಿ ಬೆಳೆದು ಬರುತ್ತಿರುವುದು ಕಂಡುಬರುತ್ತಿದೆ. ಐವತ್ತು ವರ್ಷಗಳ ಹಿಂದೆ ಅಲ್ಲೊಂದು ಇಲ್ಲೊಂದು ಎಂಬಂತೆ ಗುರುತಿಸಬಹುದಾಗಿದ್ದ ಸಂಶೋಧನಾ ಅಧ್ಯಯನಗಳು ಇಂದು ಒಂದೊಂದು ವಿಶ್ವವಿದ್ಯಾಲಯದಿಂದಲೂ ವರ್ಷಕ್ಕೆ ಐವತ್ತಕ್ಕೂ ಹೆಚ್ಚು ಸಂಖ್ಯೆಯಲ್ಲಿ ಹೊರಬರುತ್ತಿರುವುದನ್ನು ಗಮನಿಸಿದರೆ, ಯುವಜನತೆ ಇಂದು ಸಂಶೋಧನೆಯತ್ತ ಹೆಚ್ಚಿನ ಆಸಕ್ತಿಯನ್ನು ಹೊಂದುತ್ತಿರುವುದನ್ನು ನೋಡುತ್ತೇವೆ.

ಹಿಂದೆ ವಿಶ್ವವಿದ್ಯಾಲಯ ಮಟ್ಟದ ಯಾವುದೇ ಸಂಶೋಧನಾ ಪ್ರಬಂಧ ರಚನೆಗೊಂಡದ್ದೇ ಇಲ್ಲ. ವಿಶ್ವಮಾನ್ಯ ಪಡೆದ ಕಲಾವಿದರು, ಕಲಾ ಚಟುವಟಿಕೆ ಮತ್ತು ಕಲಾಕೃತಿಗಳ ತಾಣವೇ ಇದಾಗಿದ್ದರೂ ಅವುಗಳ ಕುರಿತು ತೀರಾ ಇತ್ತೀಚಿನವರೆಗೂ ಅಧ್ಯಯನಗಳು ನಡೆದಿಲ್ಲ. ೧೯೯೦ರ ನಂತರ ವಿಶ್ವವಿದ್ಯಾಲಯ ಮಟ್ಟದಲ್ಲಿ ಪಿಎಚ್.ಡಿ. ಮಹಾಪ್ರಬಂಧಗಳು ರಚನೆಯಾಗಲು ಆರಂಭವಾದವು.

### ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಕರ್ನಾಟಕದ ಸಂದರ್ಭದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚಿಗಷ್ಟೆ. ೯೦ ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗಷ್ಟೇ ತನ್ನ ಶೈಶವಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಡುತ್ತಿದೆ. ೧೯೮೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

೧೯೮೦ ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಒಂದು ಅಧ್ಯಯನ**[೧೨] ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೧೩] ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ

೧೨. ಡಾ. ಎಸ್.ಸಿ.ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ.೧೯೮೩

೧೩. ಡಾ. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು, ಪಿಹೆಚ್.ಡಿ.ಮ.ಪ್ರ, ಕರ್ನಾಟಕ ವಿ.ವಿ.೧೯೮೭

ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೧೯] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೨೦] ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು**[೨೧] ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು.**[೨೨]೨೦೦೦ ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,**[೨೩] ೨೦೦೨ರಲ್ಲಿ ಡಾ.ಶಿವಾನಂದ ಬಂಟನೂರು ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೨೪] ೨೦೦೨ರಲ್ಲಿ ಡಾ.ಗಿರೀಶ ಅವರ **ಬುಡಕಟ್ಟು ಚಿತ್ರಕಲೆ**[೨೫]೨೦೦೨ರಲ್ಲಿ ಡಾ.ಲಕ್ಷ್ಮಿದೇವಿ ಗವಾಯಿಯವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ,**[೨೬] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೨೭] ೨೦೦೨ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್**[೨೮] ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್**[೨೯] ೨೦೦೩ರಲ್ಲಿ ಡಾ.ವೀಣಾ ಶೇಖರ್ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦–೧೮೨೦),**[೩೦] ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೩೧] ೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿಗೆ ಮಂಡಿಸಿದ **ಎಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯಕೇಶನ್ ಎಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ್**[೩೨] ೨೦೦೪ರಲ್ಲಿ ಡಾ.ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೬೦೦),**[೩೩] ೨೦೦೪ರಲ್ಲಿ ಡಾ.ಶಿವಕುಮಾರ ಎ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ**

೧೯. ಡಾ. ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪಿಹೆಚ್.ಡಿ.,ಮ.ಪ್ರ.,೧೯೯೧

೨೦. ಡಾ. ಅ.ಲ.ನರಸಿಂಹನ್ ; ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಹೆಚ್.ಡಿ.,ಮ.ಪ್ರ., ಬೆಂಗಳೂರು ವಿ.ವಿ.೧೯೯೫

೨೧. ಡಾ. ಸಂಪದಾ ಭಟ್ : ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೧೯೯೭

೨೨. ಡಾ. ಪುಷ್ಪಾ ದ್ರಾವಿಡ : ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು,ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ., ೧೯೯೭

೨೩. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ. ೨೦೦೦

೨೪. ಡಾ.ಶಿವಾನಂದ ಬಂಟನೂರು : ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೨೫. ಡಾ.ಗಿರೀಶ : ಬುಡಕಟ್ಟು ಚಿತ್ರಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೨೬. ಡಾ.ಲಕ್ಷ್ಮಿದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೨೭. ಡಾ. ಶರಣಪ್ಪ ಕೋಲ್ಕಾರ : ಅವರ ಕೊಪ್ಪಳ–ಹಂಪಿ ಪ್ರದೇಶದ ಪ್ರಾಗಿತಿಹಾಸಿಕ ಕಾಲದ ಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೨೮. ಡಾ. ಸೌಮ್ಯ : ಯಂತ್ರಾ ದಿ ಯುಜುಮ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರನ್ಸ್ ಟು ಕಾಂಟೆಂಪರರಿ ತಾಂತ್ರಿಕಾ ಆರ್ಟಿಸ್ಟ, ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ. ೨೦೦೨

೨೯. ಡಾ. ಪ್ರಮೀಳಾ ಲೋಚನ : ಮೈಡ್ ಮ್ಯೂಜಿಕ್ ಅಂಡು ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ. ೨೦೦೨

೩೦. ಡಾ.ವೀಣಾ ಶೇಖರ್ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦– ೧೮೨೦) ಪಿಹೆಚ್.ಡಿ.,ಮ.ಪ್ರ.ಬೆಂಗಳೂರು ವಿ.ವಿ., ೨೦೦೩

೩೧. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ, ಪಿಹೆಚ್.ಡಿ., ಮ.ಪ್ರ.ಕನ್ನಡ ವಿ.ವಿ.೨೦೦೩

೩೨. ಡಾ. ಎಸ್.ಸಿ.ಪಾಟೀಲ : ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯಕೇಶನ್ ಆಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ,ಕರ್ನಾಟಕ ವಿ.ವಿ., ೨೦೦೩

೩೩. ಡಾ. ವಿ.ಎಮ್.ಬಾಗಾಯತ್ : ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೬೦೦), ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೪

ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು.[೩೪] ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ**[೩೫] ೨೦೦೫ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ**[೩೬] ೨೦೦೫ರಲ್ಲಿ ಡಾ.ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೩೭] ೨೦೦೫ರಲ್ಲಿ ಡಾ. ಎಸ್. ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅದ್ಯಯ**[೩೮] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ**[೩೯] ೨೦೦೭ ರಲ್ಲಿ ಡಾ. ಗೀತಾಜಂಲಿ ಬಿ.ಆರ್ ಅವರ **ಕರ್ನಾಟಕದ ಐತಿಹಾಸಿಕ ದೀಪಸ್ಥಂಭಗಳು ಮೈಸೂರು ಪ್ರದೇಶವನ್ನು ಅನುಲಕ್ಷಿಸಿ**[೪೦] ಹಾಗೂ ೨೦೦೭ ರಲ್ಲಿಯೇ ಬಂದ ಡಾ. ಎಮ್.ಸಿ. ಮಲ್ಲಿಕಾರ್ಜುನ ಬಾಗೋಡಿಯವರ **ಸುರಪುರ ಶೈಲಿಯ ಚಿತ್ರಕಲೆ**[೪೧]. ಇವು ಚಿತ್ರಕಲೆಯ ಕುರಿತು ಬಂದ ಪಿಹೆಚ್.ಡಿ. ಮಹಾಪ್ರಬಂಧಗಳು. ೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ**[೪೨] ೨೦೦೫ರಲ್ಲಿ ಡಾ. ಡಿ. ಎ. ಉಪಾಧ್ಯ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ**[೪೩] ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ,**[೪೪] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ**[೪೫] ೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು**[೪೬] ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಿಗಿಯವರ ಜೀವನ ಮತ್ತು ಕಲಾಕೃತಿಗಳು**[೪೭] ೨೦೦೬ರಲ್ಲಿ ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ**[೪೮] ಸುಚಿತ್ರಾ .ಗ. ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ,**[೪೯] ಮತ್ತು ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಎಂ.ಫಿಲ್ ಸಂಶೋಧನಾ ಅಧ್ಯಯನಗಳಾಗಿವೆ. ಹೀಗೆ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ.ಅಧ್ಯಯನಕ್ಕಾಗಿ ಸುಮಾರು ೨೫ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ರಚನೆಯಾಗಿವೆ. ಮತ್ತು ೧೫ಕ್ಕೂ ಹೆಚ್ಚು ಮಂದಿ ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯಗಳ ಡಿಪ್ಲೋಮಾ ಪದವಿ ಅಂತಿಮ ವರ್ಷಕ್ಕೆ ಸಿದ್ಧಪಡಿಸುವ ಕಿರು ಸಂಶೋಧನಾ ಯೋಜನಾ ವರದಿಗಳು ಬಿ.ವಿ.ಎ ಮತ್ತು ಬಿ.ಎಫ್.ಎ. ಪದವಿ ಹಾಗೂ ಎಂ.ವಿ.ಎ ಮತ್ತು ಎಂ.ಎಫ್.ಎ ಸ್ನಾತಕೋತ್ತರ ಹಂತದಲ್ಲಿ ಸುಮಾರು ೪೦೦ ಕ್ಕೂ ಹೆಚ್ಚಿನ

---

೩೪. ಡಾ.ಶಿವಕುಮಾರ ಎ.ಪಿ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಹೆಚ್.ಡಿ. ಮ.ಪ್ರ., ಗು.ವಿ.ಗು. ೨೦೦೪

೩೫. ಡಾ.ಶಶಿಕಲಾ ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೩೬. ಡಾ.ಶಿವಪ್ರಕಾಶ ತುಕ್ಕಣ್ಣವರ : ಕರ್ನಾಟಕ ರಥ ಶಿಲ್ಪಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೩೭. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೩೮. ಡಾ ಎಸ್ ವಿ ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೩೯. ಡಾ. ವಿಶ್ವೇಶ್ವರಿ ತಿವಾರಿ : ರಂಗೋಲಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಗು.ವಿ.ವಿ.,೨೦೦೬

೪೦. ಡಾ. ಗೀತಾಂಜಲಿ ಆಚಾರ್ಯ : ಐತಿಹಾಸಿಕ ದೀಪಸ್ತಂಭಗಳು, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೭

೪೧. ಡಾ. ಮಲ್ಲಿಕಾರ್ಜುನ ಬಾಗೋಡಿ : ಸುರಪುರ ಶೈಲಿಯ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಗು.ವಿ.ವಿ.,೨೦೦೭

೪೨. ಡಾ.ಆನಂದ ಕೆ. ಪೂಜಾರ : ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫

೪೩. ಡಾ.ಡಿ.ಎ.ಉಪಾಧ್ಯ : ದೃಶ್ಯಕಲೆಗಳ ತೌಲನಿಕ ಅಧ್ಯಯನ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫

೪೪. ಮಲ್ಲಿಕಾರ್ಜುನ ಬಾಗೋಡಿ : ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ,ಎಂ.ಫಿಲ್. ಪ್ರ. ಕ.ವಿ.ವಿ.ಹಂ. ೨೦೦೨

೪೫. ಎ.ಎಸ್.ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ, ಎಂ.ಫಿಲ್.ಪ್ರ. ಕ.ವಿ.ವಿ.ಹಂ. ೨೦೦೩

೪೬. ಶಂಕರಪ್ಪ ಎಂ. ಕುಂದಗೋಳ : ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರ. ಕ.ವಿ.ವಿ.ಹಂ. ೨೦೦೫

೪೭. ಸಿ.ಡಿ.ಜಟ್ಟೆಣ್ಣವರ : ಕಲಾವಿದ ಡಾ.ಎಂ.ವಿ.ಮಿಣಜಿಗಿಯವರ ಜೀವನ ಮತ್ತು ಕಲಾಕೃತಿಗಳುಎಂ.ಫಿಲ್. ಪ್ರ., ಕ.ವಿ.ವಿ.ಹಂ. ೨೦೦೫

೪೮. ರವಿ ವಸರಾಮ ನಾಯಕ : ಕಿನ್ನಾಳ ಕಲೆ ಒಂದು ಅಧ್ಯಯನ, ಎಂ.ಫಿಲ್.ಪ್ರ. ಕ.ವಿ.ವಿ.ಹಂ. ೨೦೦೬

೪೯. ಸುಚಿತ್ರಾ ಲಿಂಗದಳ್ಳಿ : ವಿಜಯನಗರ ಭಿತ್ತಿಚಿತ್ರಕಲೆ,ಎಂ.ಫಿಲ್. ಪ್ರ. ಕ.ವಿ.ವಿ.ಹಂ.೨೦೦೬

ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನಾ ಅಧ್ಯಯನವು ಕಲಾಕ್ಷೇತ್ರದಲ್ಲಿ ಅನಿವಾರ್ಯವಾದ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಇನ್ನಷ್ಟು ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದು.

**ಕಲಘಟಗಿ ಕಲೆಯ ಕುರಿತು ಇಲ್ಲಿಯವರೆಗೂ ನಡೆದ ಅಧ್ಯಯನಗಳು**

ಕಲಘಟಗಿ ಕಲೆಯ ಬಗ್ಗೆ ಕೆಲವು ಕಲಾಗ್ರಂಥಗಳಲ್ಲಿ ಲೇಖನಗಳು ಬಂದಿವೆ. ಹಾಗೆಯೇ ಕನ್ನಡ, ಇಂಗ್ಲೀಷ ದಿನಪತ್ರಿಕೆಗಳಲ್ಲಿ ಮತ್ತು ವಾರಪತ್ರಿಕೆ ಗ್ಯಾಸೆಟಿಯರಗಳಲ್ಲಿ ಕಲಘಟಗಿಯ ಕಲೆಯ ಬಗ್ಗೆ ಅಲ್ಪ ಸ್ವಲ್ಪ ಮಾಹಿತಿ ಇದೆ. ಕರ್ನಾಟಕ ರಾಜ್ಯ ಗ್ಯಾಸೆಟಿಯರ್-ಭಾಗ ಮೂರು ಈ ಗ್ರಂಥದಲ್ಲಿ ಧಾರವಾಡ ಜಿಲ್ಲೆಯ ಕಲಘಟಗಿಯ ಕಲೆಯ ಬಣ್ಣದ ತೊಟ್ಟಿಲು ತಯಾರಿಕೆಯ ಬಗ್ಗೆ ಮಾಹಿತಿ ಐತಿಹಾಸಿಕ ಹಿನ್ನೆಲೆ ಇದೆ.[೫೦] ಡಾ. ಎಸ್.ಸಿ, ಪಾಟೀಲರವರ "ಕರ್ನಾಟಕ ಜನಪದ ಚಿತ್ರಕಲೆ" ಎಂಬ ಪಿ.ಎಚ್.ಡಿ ಮಹಾಪ್ರಬಂಧದಲ್ಲಿ ಬಣ್ಣದ ತೊಟ್ಟಿಲುಗಳ ತಯಾರಿಕೆಯಲ್ಲಿ ಕಲಘಟಗಿಯು ಪ್ರಮುಖ ಕೇಂದ್ರವಾಗಿದೆ. ಇದಲ್ಲದೆ ಇಲ್ಲಿಯ ಕಲಾವಿದರ ವಂಶಾವಳಿಯ ಪ್ರಾಚೀನ ಕಾಲದಿಂದಲೂ ಈ ವೃತ್ತಿಯಲ್ಲಿ ತೊಡಗಿದ್ದಾರೆ. ಹಾಗೂ ತೊಟ್ಟಿಲು ತಯಾರಿಕೆಯ ವಿಧಾನದಲ್ಲಿ ಅರಗಿನ ಬಣ್ಣದ, ಲೇಪನಹಂತ ಕುಂಚತಯಾರಿಕೆ ತೊಟ್ಟಿಲು ಅಳತೆಯ ಪ್ರಕಾರಗಳು, ವಸ್ತು ವಿಷಯದ ಕುರಿತು ವಿವರಿಸಿದ್ದಾರೆ.[೫೧]

ಕರೀಗೌಡ ಬೀಚನಹಳ್ಳಿಯವರು ಸಂಪಾದಿಸಿದ "ಕರಕುಶಲ ಕಲೆಗಳು" ಎಂಬ ಗ್ರಂಥದಲ್ಲಿ ತೊಟ್ಟಿಲುಗಳ ವಿನ್ಯಾಸ ಕಾಲಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಬದಲಾವಣೆ ಕಂಡಿರುವುದು. ಇದು ಕನ್ನಡ ನಾಡಿನಲ್ಲಿ ಬೆಳೆದು ಬಂದ ಜಾನಪದ ಕಲೆಯಾಗಿದೆ. ಇಲ್ಲಿಯೂ ತಯಾರಿಕೆಯ ವಿಧಿವಿಧಾನ ಹಾಗೂ ಮಗುವಿನ ಅಳುವನ್ನು ನಿಲ್ಲಿಸಲು ವಿವಿಧ ಗೆಜ್ಜೆ, ಪಟ್ಟಗೊಂಬೆ ಬಣ್ಣ ಬಣ್ಣದ ಗಿಣಿಗಳನ್ನು ವರ್ಣಮಯವಾಗಿ ತೊಟ್ಟಲಿಗೆ ಜೋಡಿಸುವುದು ಇದರ ಕುರಿತು ಮಾಹಿತಿ ದೊರೆಯುತ್ತದೆ.[೫೨]

ಕೆ.ವಿ. ಕಾಳೆಯವರು ೨೦೦೦ ದಲ್ಲಿ ಬರೆದ "ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ" ಪುಸ್ತಕದಲ್ಲಿ ಕಲಘಟಗಿಯ ತೊಟ್ಟಿಲಿನ ಬಣ್ಣದ ಕುರಿತು ವಿಶೇಷವಾಗಿ ಚರ್ಚಿಸಿದ್ದಾರೆ. ಅಲ್ಲದೇ ರಚನಾ ವಿಧಾನದಲ್ಲಿ ಸಸ್ಯಮೂಲದಿಂದ ಪಡೆದ ವಿವಿಧ ವಸ್ತುಗಳ ಕುರಿತು.[೫೩] ಇಲ್ಲಿ ತಯಾರಿಕಾ ಹಂತದಲ್ಲಿ ಕಲಾವಿದರ ಇಡೀ ಕುಟುಂಬವೇ ತೊಡಗಿಸಿಕೊಳ್ಳುವುದರ ಮಾಹಿತಿ ಮತ್ತು ವಸ್ತು ವಿಷಯದ ಕುರಿತು ಸಮಗ್ರವಾದ ವಿವರಣೆಯಿದೆ.

ಮೋಹನ ಭದ್ರಾಪುರರವರು 'ಜನಪದ' ಎಂಬ ಪತ್ರಿಕೆಯಲ್ಲಿ ಕಲಘಟಗಿಯ ಐತಿಹಾಸಿಕ ಹಿನ್ನೆಲೆ ನಮ್ಮ ಸಂಪ್ರದಾಯ ಹಾಗೂ ಸಾಂಸ್ಕೃತಿಕ ಪರಂಪರೆಗಳು ಹಲವಾರು ಕುಶಲಕಲೆಗಳಿಗೆ ಜನ್ಮ ನೀಡಿವೆ. ಪ್ರಾದೇಶಿಕ ಅಗತ್ಯ ಹಾಗೂ ಪರಿಸರವನ್ನು ಆಧರಿಸಿದ. ಕುಶಲಕಲೆಗಳು ವೈಶಿಷ್ಟ್ಯ ಪೂರ್ಣವಾಗಿರುವುದನ್ನು ಗಮನಿಸಬಹುದು. ಎಂದು ಬರೆದಿದ್ದಾರೆ. ಇವರ ಹಿಂದಿನವರಾದ ಫೀರಾಜಿ ಸಾವುಕಾರರ ತೊಟ್ಟಿಲು ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯವರ ಸಂದರ್ಶನದ ಮೂಲಕ ನಾಡಿಗೆ ಪರಿಚಯಿಸಿದ್ದಾರೆ. ಪೂರಾಣ ಪುಣ್ಯಕಥೆಗಳ ಸಂದೇಶ ನೀಡುವುದು ತೊಟ್ಟಿಲು ಚಿತ್ರಗಳ ವೈಶಿಷ್ಟ್ಯ ಅಲ್ಲದೇ ತೊಟ್ಟಿಲಿಗೆ ಸಾಗವಾನಿ ಕಟ್ಟಿಗೆಯನ್ನೆ ಬಳಸುವುದು. ಹೆಚ್ಚು ಬಾಳಿಕೆ ಬರಲು ಕಾರಣ ಕಟ್ಟಿಗೆಯ ಸಂಸ್ಕರಣ, ಸಾಂಪ್ರದಾಯಿಕ ನಕ್ಷೆ ಕೌಟುಂಬಿಕ ಪರಿಶ್ರಮ ಕುಶಲಕಲೆಗೆ ಹೊಸ ರೂಪ, ಮುಂತಾದವುಗಳನ್ನು ಇದರಲ್ಲಿ ಪ್ರಸ್ತಾಪಿಸಲಾಗಿದೆ. ಜನರ ಅಭಿರುಚಿಗೆ ಅನುಗುಣವಾಗಿ ಅಲಂಕಾರಿಕ ಪೀಠೋಪಕರಣಗಳು, ಸ್ಟ್ಯಾಂಡಿಂಗ್ ತೊಟ್ಟಿಲು ತೂಗುಮಂಚ, ಸೋಪಾಸೆಟ್, ಹಾಗೂ ಟೀಪಾಯಿ, ಪಲ್ಲಕ್ಕಿ,

---

೫೦. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೯೦೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೫೧. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೨೫೮ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

೫೨. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೨೮೨ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೫೩. ಕೆ.ವಿ.ಕಾಳೆ : ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ ಪು. ೬೬ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಕುರ್ಚಿ, ದೀವಾನಕಾಟ್, ತೂಗುಯ್ಯಾಲೆ, ಇಂತವುಗಳ ನಿರ್ಮಾಣಗಳಿಂದ ಇಂದು ಬೆಂಗಳೂರು, ಮೈಸೂರು, ಆಂಧ್ರಪ್ರದೇಶ, ತಮಿಳನಾಡು, ಮಹಾರಾಷ್ಟ್ರಗಳಲ್ಲಿ ಸೌಂದರ್ಯಕ್ಕೆ ಮನಸೋತು ಪ್ರಶಂಸೆಯ ಮಾತುಗಳನ್ನು ದಾಖಲಿಸಿದ್ದಾರೆ. ಹಾಗೆಯೇ ಇಲ್ಲಿಯೂ ರಚನಾ ವಿಧಿ ವಿಧಾನಗಳ ಕುರಿತು ಮಾಹಿತಿಯನ್ನು ಪ್ರಸ್ತಾಪಿಸಲಾಗಿದೆ.[೫೪]

ಡಾ.ಬಿ.ಕೆ. ಹೀರೆಮಠ ಅವರ ಕುರಿತು ಬಂದ "ನಿಜದ ನೆಲೆ" ಎಂಬ ಗ್ರಂಥದಲ್ಲಿ ಕಲಘಟಗಿಯ ವರ್ಣಚಿತ್ರಕಲೆ ಎಂಬ ಲೇಖನದಲ್ಲಿ ನಮ್ಮ ದೇಶದ ಚಿತ್ರಕಲೆಗೆ ಸುದೀರ್ಘವಾದ ಚರಿತ್ರೆ ಇದೆ. ಇದಕ್ಕೊಂದು ಪರಂಪರೆ, ಜನರ ಬದುಕಿನ ಭಾಗವಾಗಿ ಈ ಕಲೆಯನ್ನು ಬೆಳೆಸಿಕೊಂಡು ಬಂದಿರುವ ಸೌಂದರ್ಯ ಪ್ರಜ್ಞೆಪೂರಕವಾಗಿ ಜೀವನದ ಒಡನಾಡಿಯಾಗಿರುವುದು ಚಾರಿತ್ರಿಕ ಸತ್ಯವಾಗಿದೆ. ಕಲಾಕಾರರ ಹಿನ್ನೆಲೆಯ ಕುರಿತು. ಇವರು ಮೂಲತಃ ಉತ್ತರ ಭಾರತದವರು ದೆಹಲಿ ಇವರ ಪೂರ್ವಜರ ನೆಲೆಯಾಗಿತ್ತೆಂದು ತಿಳಿದುಬರುತ್ತದೆ. ನಂತರ ಮೊಗಲರ ದಾಳಿಯಿಂದ ಜಯಪುರಕ್ಕೆ ಬಂದು ಅಲ್ಲಿಂದ ಕೊಲ್ಲಾಪೂರ, ಬೆಳಗಾಂವ, ಮತ್ತು ಧಾರವಾಡ ಜಿಲ್ಲೆಯ ಹುಲಿಕೊಪ್ಪ, ಈಗ ಕಲಘಟಗಿಗೆ ಶಾಶ್ವತ ನೆಲೆ ಕಂಡುಕೊಂಡಿದ್ದಾರೆ. ಇವರು ಮೊದಲು ಅರಿವೆ ಅಂಗಡಿಯಲ್ಲಿ ಕೆಲಸಕ್ಕೆ ಇದ್ದರಂತೆ ಇವರು ಮೂಲತಃ ಮರಾಠಿಗರಾದರೂ ಮಾತೃಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ಎಂದು ಉಲ್ಲೇಖಿಸಿದ್ದಾರೆ. ಅಲ್ಲದೇ ಕಟ್ಟಿಗೆ ಖರೀದಿ, ಚಿತ್ರಕ್ಕೆ ಪೂರ್ವಸಿದ್ಧತೆ, ಚಿತ್ರಕಲೆ, ಬಣ್ಣತಯಾರಿಕೆ, ಕುಂಚತಯಾರಿಕೆ, ಕಲಾಕೃತಿಗಳು, ದೇವರ ಪಲ್ಲಕ್ಕಿ, ಇತರ ವಸ್ತುಗಳು, ಸೋಪಾಸೆಟ್‌ಗಳು, ತೂಗುಮಂಚ, ದೇವಿವಿಗ್ರಹ, ಬಣ್ಣದಪೀಠ, ಪ್ರದರ್ಶನ ಮತ್ತು ಪ್ರೋತ್ಸಾಹದಲ್ಲಿ ೧೯೮೬ ರಲ್ಲಿ ಮೈಸೂರು ವಿಶ್ವಕನ್ನಡ ಸಮ್ಮೇಳನ, ಬೆಂಗಳೂರಿನ ಚಿತ್ರಕಲಾ ಪರಿಷತ್ತು, ಹುಬ್ಬಳ್ಳಿಯ ಪ್ರಕಾಶ ಹೋಟೆಲ, ಧಾರವಾಡದ ಎಂ.ಜಿ. ಬ್ಯಾಂಕ್, ಲಕ್ಕುಂಡಿ ಉತ್ಸವ, ಹಾಗೆಯೇ ರೇಡಿಯೋ ಟಿ.ವಿ.ಗಳಲ್ಲಿ ಇವರ ಕಲೆಯ ಕುರಿತು ಸಂದರ್ಶನಗಳು ಪ್ರಸಾರವಾಗಿವೆ. ಎಂದು ಡಾ. ಧನವಂತ, ಹಾಜವಗೋಳ, ಪ್ರಸ್ತಾಪಿಸಿದ್ದಾರೆ.[೫೫]

೨೭ ಮಾರ್ಚ ೧೯೯೪ ರ ಸುಧಾ ಪತ್ರಿಕೆಯಲ್ಲಿ ರಮೇಶ ದೇಶಪಾಂಡೆಯವರ ಲೇಖನ "ಕಲಾತ್ಮಕ ಕುಸುರಿ ಕೆತ್ತನೆಯ ಕಲಘಟಗಿ ತೊಟ್ಟಿಲು" ಚೊಚ್ಚಲು ಹೆರಿಗೆಯ ಸಮಯದಲ್ಲಿ ಕಲಘಟಗಿ ತೊಟ್ಟಿಲನ್ನೆ ಕೊಡಬೇಕು ಎಂದು ಹೆಣ್ಣಿನ ಕಡೆಯವರಿಗೆ ಕರಾರು ವಿಧಿಸುವುದರೊಂದಿಗೆ ತೊಟ್ಟಿಲು ಕಲಾವಂತಿಕೆ ತೆರೆದುಕೊಳ್ಳುತ್ತದೆ. ಈ ಕಾರಣವಾಗಿಯೆ ಕಲಘಟಗಿಯ ತೊಟ್ಟಿಲಿಗೆ ಒಳ್ಳೆಯ ಹೆಸರು ಬಂದಿದೆ. ತೊಟ್ಟಿಲಿಗೆ ಬೆಳ್ಳಿಯ ಸರಪಳಿ ಮೆತ್ತನೆ ಗಾದಿ, ಸುತ್ತಲು ರಾಮಾಯಣ, ಮಹಾಭಾರತ, ಪುರಾಣ, ಹಾಗೂ ಮುಸ್ಲಿಂ ದಗಾ, ಕಾಲಕ್ಕೆ ತಕ್ಕಂತೆ ಬೇಲೂರು ಶಿಲಾಬಾಲಿಕೆಯರು, ಕೃಷ್ಣನ ಅವತಾರದ ದೃಶ್ಯಗಳು, ನಕ್ಷಾವಿನ್ಯಾಸಗಳಿಂದ ಕೂಡಿದ್ದಾಗಿರುತ್ತದೆ. ಎಂದು ಪ್ರಸ್ತಾಪಿಸಿದ್ದಾರೆ.[೫೬]

ಸಂಯುಕ್ತ ಕರ್ನಾಟಕದಲ್ಲಿ (೧೫-೯-೨೦೦೫) ಬಸವರಾಜರವರ "ಕಣ್ಮನ ಸೆಳೆವ ಕಲಾ ವೈಭವ" ಕಲಘಟಗಿಯ ತೊಟ್ಟಿಲುಗಳು ಕಲಾವೈಭವದಲ್ಲಿ ನೋಡುಗರ ಮನಸೆಳೆಯುತ್ತವೆ. ಮೇಲಿನ ಚಿತ್ತಾರಗಳು ಬಹು ಆಕರ್ಷಣೀಯವಾಗಿವೆ. ಎಂದು ಬರೆದಿದ್ದಾರೆ.[೫೭]

ಕನ್ನಡಪ್ರಭದಲ್ಲಿ (೨೬-೮-೧೯೯೦) ಆರೂರು ಲಕ್ಷ್ಮಣ ಶೇಟ್ ಅವರ "ಕಾಡುಕುಸುಮ ಆಗುತ್ತಿರುವ ಕಲಾವಂತಿಕೆ" ಜೋಜೋ ಲಾಲೀ ಎಂದೆಲ್ಲಾ ಜೋಗುಳ ಹಾಡುತ್ತಾ ಮುದ್ದು ಕಂದಮ್ಮಗಳನ್ನು ಲಲ್ಲೆಗೆರೆಯುವದಿದೆ. ಇಂತಹ ಕಲಾತ್ಮಕ ತೊಟ್ಟಿಲು ಶತಕ ಜಾರಿದರು ಮಾಸದ ಅಮರ ಚಿತ್ರಾವಳಿ ಎಂದು ತಿಳಿಸಿದ್ದಾರೆ. ೮೮ರ ವೃದ್ಧ ಕಲಾವಿದ ಫೀರಾಜೆ ತಮ್ಮಣ್ಣ ಸಾವುಕಾರ ಈ ಮಾರಾಠಿ ಮನುಷ್ಯನ ಮಾತೃಭಾಷೆ ಕನ್ನಡ ಇವರ 'ಲಾಕ್' ಬಣ್ಣವನ್ನು ಮನೆಯಲ್ಲಿಯೇ ತಯಾರಿಸುತ್ತಾರೆ. ರಚನಾ ವಿಧಾನದ ಬಗ್ಗೆ ಮಾಹಿತಿ ದೊರೆಯುತ್ತದೆ. ಹಾಗೆಯೆ ಬಳಸುವ ಬ್ರಶ್ ಅಳಿಲು ಬಾಲದಿಂದ ಹಾಗೂ ಮೇಕೆ ಕೂದಲಿನಿಂದ ತಯಾರಿಸಿ ಚಿತ್ತಾರಗಳನ್ನು ಮೂಡಿಸಿರುತ್ತಾರೆ.

---

೫೪. ಮೋಹನ ಭದ್ರಾಪುರ : ಜನಪದ ಪು. ೨೯ ರಿಂದ ೩೨ ಜನವರಿ ೧೯೯೬

೫೫. ಡಾ. ಬಿ.ಕೆ ಒರೇಮಠ : (ಸಂ) ನಿಜದ ನೆಲೆ ಪು. ೧೫೨ ರಿಂದ ೧೫೯ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

೫೬. ರಮೇಶ ದೇಶಪಾಂಡೆ : ಸುಧಾ ಪು. ೪೯ ಮಾರ್ಚ ೨೭-೩- ೧೯೯೪

೫೭. ಬಸವರಾಜ : ಸಂಯುಕ್ತ ಕರ್ನಾಟಕ ೧೫-೯-೨೦೦೫

ಎಂಬುದಾಗಿ ಪ್ರಸ್ತಾಪಿಸಿದ್ದಾರೆ. ಹಾಗೆಯೆ ಪ್ರಚಾರ, ಪ್ರಶಂಸೆ ಪ್ರಶಸ್ತಿಗಳು ಧಾರವಾಡ ಜಿಲ್ಲಾ ಕೈಗಾರಿಕಾ ಕೇಂದ್ರ ಪ್ರಶಸ್ತಿ (೧೯೮೫) ವಿಶ್ವಕನ್ನಡ ಸಮ್ಮೇಳನದ ಪುರಸ್ಕಾರ (೧೯೮೫) ಇಂಡಿಯನ್ ಡೇ ನ್ಯೂಸರೀಲನಲ್ಲಿ ದರ್ಶನ, ಟಿ.ವಿ. ತೆರೆಯ ಮೇಲೆ ಪ್ರದರ್ಶನ ಇತ್ಯಾದಿ ಪುರಸ್ಕಾರಗಳು, ರಾಷ್ಟ್ರೀಕೃತ ಬ್ಯಾಂಕೊಂದರ ಆರ್ಥಿಕ ನೆರವು ದೊರೆತಿದೆ. ಎಂದು ವಿವರಿಸಿದ್ದಾರೆ.[೫೮]

ಸಂಯುಕ್ತ ಕರ್ನಾಟಕ, ಕಾಮನ ಬಿಲ್ಲು (೨೯-೭-೨೦೦೬) ಶ್ರೀದೇವಿ ಇಟಗಿಯವರ ಲೇಖನ "ತೊಟ್ಟಿಲು ತಯಾರಿ ತುಂಬಾ ಕಷ್ಟಾರಿ!" ಸಾವುಕಾರ ಅವರು ತೊಟ್ಟಿಲನ್ನಷ್ಟೆ ಅಲ್ಲ ರಥ, ಗೌರಿಮುಖ, ಮಣಿ, ಪಲ್ಲಕ್ಕಿ, ಲತ್ತಿಗುಣಿ, ಬಾರಕೋಲು, ಗಣಪತಿ, ಬಸವಣ್ಣ, ಹಾಗೆಯೇ ಡಾ. ರಾಜಕುಮಾರ ಅವರ ಮನೆಯಲ್ಲಿ ವಿಶೇಷ ಬಗೆಯ ಕುರ್ಚಿ, ಟೀಪಾಯಿಸೆಟ್ ಇದೆ. ಎಂದು ಉಲ್ಲೇಖಿಸಿದ್ದಾರೆ. ಗಿರೀಶ ಕಾಸರವಳ್ಳಿಯವರ ಮನೆಯಲ್ಲಿ ತೊಟ್ಟಿಲಿನ ಪುನರ ಬಳಕೆಯ ವಿಷಯ ಹೇಳಿದ್ದಾರೆ. ಬೆಂಗಳೂರು, ಹೊಸಪೇಟೆ, ಮೊದಲಾದೆಡೆಯಲ್ಲಿರುವ ಐ.ಎ.ಎಸ್ ಐ.ಪಿ.ಎಸ್ ಅಧಿಕಾರಿಗಳ ಮನೆಯಲ್ಲಿ ಪೀಠೋಪಕರಣಗಳಿವೆ. ಜ್ಯೋತಿಪ್ರಕಾಶ ಮಿರ್ಜಾ, ನಾಯ್ಕರ, ಶಂಕರ ಬಿದರಿ, ಸಿ.ಚಂದುಲಾಲ, ಚಿರಂಜೀವಿ ಸಿಂಗ್, ಅವರನ್ನು ಹೆಸರಿಸಿದ್ದಾರೆ. ಅಲ್ಲದೇ ಪ್ರದರ್ಶನ ಹಾಗೂ ತಯಾರಿಕೆಯಲ್ಲಿ ಮುನ್ನೂರು ವರ್ಷಗಳ ಹಿಂದಿನಿಂದಲೂ ತಯಾರಿಸುವುದರ ವಿವರವಿದೆ. ಶತಮಾನದಿಂದ ಉಪಯೋಗಿಸುತ್ತ ಬಂದ ಸಾಗವಾನಿ ಕಟ್ಟಿಗೆಯ ಬಳಕೆ ಈಗಲೂ ಇದೆ. ಚಿತ್ರಗಳು ಮಾತ್ರ ಭಿನ್ನ ಭಿನ್ನವಾಗಿವೆ. ಎಂದು ವಿವರಗಳಿವೆ.[೫೯]

ಪ್ರಜಾವಾಣಿ ಸಾಪ್ತಾಹಿಕ ಪುರವಣಿ (೮-೯-೧೯೮೫) ಡಿ.ವಿ.ರಾಜಶೇಖರ ಅವರ "ಮರೆಯಾಗುತ್ತಿರುವ ಕಲಘಟಗಿಯ ಮೋಹಕ ತೊಟ್ಟಿಲು" ಎಂಬ ಲೇಖನದಲ್ಲಿ ಕಲಘಟಗಿಯ ಬಣ್ಣದ ತೊಟ್ಟಿಲು ಉತ್ತರ ಕರ್ನಾಟಕದವರಿಗೆ ಹಲವಾರು ತಲೆಮಾರುಗಳಿಂದ ಚಿರಪರಿಚಿತ ಹೆರಿಗೆ ನಂತರ ಗಂಡನ ಮನೆಗೆ ಹೋಗುವ ಮುನ್ನ ಕೊಂಡು ಒಯ್ಯುತ್ತಿದ್ದ ತೊಟ್ಟಿಲು ಇದು. ಶ್ರೀಮಂತರು ತಮ್ಮ ಮಕ್ಕಳನ್ನು ತೊಟ್ಟಿಲಿನಲ್ಲಿ ತೂಗುವುದು ಶ್ರೀಮಂತಿಕೆಯ ವಿಷಯವಾಗಿತ್ತು. ಕಾಲಬದಲಾದಂತೆ ಕಲಘಟಗಿಯ ತೊಟ್ಟಿಲುಗಳ ಜಾಗದಲ್ಲಿ ಕಬ್ಬಿಣದ ತೊಟ್ಟಿಲು ಆಕ್ರಮಿಸಿದವು. ಚಿತ್ರಗಾರ ಓಣಿಯಲ್ಲಿ ಕನಿಷ್ಟವೆಂದರೆ ಒಂಭತ್ತೂ ಕುಟುಂಬಗಳು ಈ ವೃತ್ತಿಯಲ್ಲಿ ನಿರತವಾಗಿದ್ದವು. ಏರಿದ ಮರದ ಬೆಲೆ ಮತ್ತು ಅರಗಿನ ಬೆಲೆಯಿಂದಾಗಿ ತತ್ತರಿಸಿದ ಕಲಾವಿದರು ಬದುಕುವುದು ಕಷ್ಟವಾಯಿತು. ಕೆಲವು ಕುಟುಂಬಗಳು ಊರು ಬಿಟ್ಟರು, ಕೆಲವರು ವೃತ್ತಿಯನ್ನು ಬದಲಾಯಿಸಿದರು. ಕೇದಗೆಯ ಎಲೆಯಿಂದ ಪಾಲಿಶ್ ಮಾಡುವುದರಿಂದ ಬಣ್ಣದ ಹೊಳಪು ಬರಲು ಸಾಧ್ಯವಾಗಿದೆ. ನಶಿಸಿ ಹೋಗುವ ಹಂತದಲ್ಲಿರುವ ಬಣ್ಣದ ತೊಟ್ಟಿಲು ತಯಾರಿಸುವ ಎರಡು ಕುಟುಂಬಗಳ ನಿತ್ಯದ ಬದುಕು ಇದು. ಎಂದು ವಿವರಿಸುತ್ತಾರೆ.[೬೦]

ಉದಯವಾಣಿ ಸಾಪ್ತಾಹಿಕ (೧೭-೭-೧೯೮೮) ಆರೂರು ಲಕ್ಷ್ಮಣ ಶೇಟ್ ಅವರ ಲೇಖನ "ಚೆಣ್ಣಗಿದೋ ಬಣ್ಣದ ತೊಟ್ಟಿಲು" ಕಲಘಟಗಿಯು ಮಲೆನಾಡು ಪ್ರದೇಶ ಅಧಿಕ ಮಳೆ ಭತ್ತದ ಹಸಿರು ಪೈರು. ತಾಲೂಕಿನ ಜನಸಂಖ್ಯೆ ಒಂದು ಲಕ್ಷ ಪೇಟೆ ಸಣ್ಣದು ಜನ ಬಡವರು ಕಲಘಟಗಿಯ ತೊಟ್ಟಿಲು ಮಾತ್ರ ಸುಪ್ರಸಿದ್ಧ ತೊಟ್ಟಿಲು ಹಸ್ತಾಂತರಿಸುವಾಗ ಕಂಬಳಿ ಹಾಸಿ ಅದರ ಮೇಲೆ ತೊಟ್ಟಿಲನ್ನಿಟ್ಟು ಪೂಜೆ ಮಾಡುವುದು ಕಾಯಿ, ಎಲೆ ಅಡಿಕೆ, ಅಗರಬತ್ತಿ, ಉಡಿಅಕ್ಕಿ ನೀಡಿ, ಒಯ್ಯುವ ಪದ್ಧತಿ ಇದೆ. ಹೆಣ್ಣು ಮಗುವಿನೊಂದಿಗೆ ಒನಕೆ ಗಂಡು ಮಗುವಿನೊಂದಿಗೆ ಬಣ್ಣದ ಉಳಕ ಇಟ್ಟು ಕಳಿಸುವ ಪದ್ಧತಿ ಇದೆ. ಎಂದು ಚರ್ಚಿಸಿದ್ದಾರೆ.[೬೧] ಆರೂರು ಲಕ್ಷ್ಮಣಶೇಟ್ ರವರ ಸಂಯುಕ್ತ ಕರ್ನಾಟಕದ ಸಾಪ್ತಾಹಿಕ ಸೌರಭ (೧೫-೪-೧೯೯೦) ಈ ಲೇಖನದಲ್ಲಿಯು ವಸ್ತುವಿಷಯ, ರಚನಾಕ್ರಮ, ಜೀವನದ ಸ್ಥಿತಿಗತಿ, ಚಿತ್ರಕಲೆಯ ಶೈಲಿ ಅಳತೆಯ ಪ್ರಕಾರಗಳು, ತೊಟ್ಟಿಲು ಜೋಡಿಸುವ ವಿಧಾನ ಬಣ್ಣ ತಯಾರಿಸುವುದು, ಕುಂಚ ತಯಾರಿಕೆಯ ಕುರಿತು ಮಾಹಿತಿಯನ್ನು ನೀಡಿ ಚರ್ಚಿಸಿದ್ದಾರೆ.[೬೨]

---

೫೮. ಆರೂರು ಲಕ್ಷ್ಮಣ ಶೇಟ್ : ಸಾಪ್ತಾಹಿಕ ಸೌರಭ ಕನ್ನಡ ಪ್ರಭ ೨೬-೯-೧೯೯೦
೫೯. ಶ್ರೀದೇವಿ ಇಟಗಿ : ಸಂಯುಕ್ತ ಕರ್ನಾಟಕ ಕಾಮನ ಬಿಲ್ಲು ಪು. ೦೧ ೨೯-೭-೨೦೦೬
೬೦. ಡಿ.ವಿ.ರಾಜಶೇಖರ : ಪ್ರಜಾವಾಣಿ ಸಾಪ್ತಾಹಿಕ ಪುರವಣಿ ಪು. ೦೧ ೮-೯- ೧೯೮೫
೬೧. ಆರೂರು ಲಕ್ಷ್ಮಣ ಶೇಟ್ : ಉದಯವಾಣಿ ಸಾಪ್ತಾಹಿಕ ೧೭-೦೭-೧೯೮೮
೬೨. ಆರೂರು ಲಕ್ಷ್ಮಣ ಶೇಟ್ : ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಸೌರಭ ೧೫- ೦೪- ೧೯೯೦

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವು ಕಲಘಟಗಿಯ ಕಲೆಯ ಕುರಿತಾಗಿದ್ದು. ಇದು ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಈ ಕಲಾಪ್ರಕಾರವು ಹೆಚ್ಚಾಗಿ ರಚನೆಗೊಳ್ಳುವ ಪ್ರದೇಶ ಆಂಧ್ರಪ್ರದೇಶದ ಅನಂತಪುರ, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೊಡ್ಲಿಗಿ, ಕೊಟ್ಟೂರು, ಇಟಗಿ, ಹರಪನಹಳ್ಳಿ, ಕನಕಗಿರಿ, ಕೊಪ್ಪಳ ಜಿಲ್ಲೆಯ ಕಿನ್ನಾಳ, ಗೋಕಾಕ, ಚನ್ನಪಟ್ಟಣ, ತಾಳಿಕೋಟೆಯಂತಹ ಪ್ರದೇಶಗಳಲ್ಲಿ ಕಂಡುಬಂದಿದ್ದು. ಈ ಕಲೆಯ ವ್ಯಾಪ್ತಿಯ ಹರವು ತುಂಬಾ ವಿಸ್ತಾರವಾಗಿದೆ. ಪ್ರಸ್ತುತ ಅಧ್ಯಯನದ ಸಮಯದ ಮಿತಿಯನ್ನು ಪರಿಗಣಿಸಿ ಮುಖ್ಯವಾಗಿ ಇಲ್ಲಿ ಕಲಘಟಗಿಯ ಕಲೆಯನ್ನು ಮಾತ್ರ ಅಧ್ಯಯನಕ್ಕೆ ಸಿಮೀತಗೊಳಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ**

ಈ ಕಿರು ಸಂಶೋಧನಾ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಒಂಭತ್ತು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯವನ್ನು ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ನೀಡಲಾಗಿದೆ.

**ಒಂದನೆಯ** ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ಕುರಿತಾದ ವಿವರಣೆ ನೀಡಲಾಗಿದೆ.

**ಎರಡನೆಯ** ಅಧ್ಯಾಯದಲ್ಲಿ ಕಲಘಟಗಿಯ ಕಲೆಯ ಐತಿಹಾಸಿಕ ಹಿನ್ನೆಲೆ ಕುರಿತಾಗಿದ್ದು. ಇತಿಹಾಸಕಾಲದಿಂದಲೂ ಪ್ರಸಿದ್ಧಿ ಪಡೆದ ಕರಕುಶಲ ಕಲೆ ಜೀವಂತ ನೆಲೆಯಾಗಿ. ಇಂದಿಗೂ ನಮ್ಮೊಡನೆ ಇರುವ ಕಲೆಯಾಗಿದೆ. ಅಪ್ಪಟ ಜಾನಪದ ಕಲೆಯಾಗಿದ. "ಕಲಘಟಗಿಯ ಕಲೆ" ಮೂರು ನಾಲ್ಕು ಶತಮಾನಗಳಿಂದಲೂ ಹೆಸರು ವಾಸಿಯಾಗಿದೆ. ಕಲಘಟಗಿಯು ಸಣ್ಣ ಪಟ್ಟಣವೇ ಆದರೆ ಇಲ್ಲಿ ಅರಳುವ ಈ ಸಾಂಪ್ರದಾಯಿಕ ಜನಪದ ಕಲೆ ದೆಹಲಿ, ಮುಂಬಯಿ, ಆಂಧ್ರಪ್ರದೇಶ, ತಮಿಳನಾಡು, ಮಹಾರಾಷ್ಟ್ರದಲ್ಲಿಯೂ ಜನಪ್ರೀಯವಾಗಿರುವುದೇ ಅಲ್ಲದೇ ಹೆಚ್ಚಿನ ಬೇಡಿಕೆಗೂ ಪಾತ್ರವಾಗಿರುವ ಕಲಘಟಗಿಯ ಕಲೆಯು ಬೆಳೆದು ಬಂದ ನೆಲೆ-ಹಿನ್ನೆಲೆಯ ಕುರಿತು ಅಧ್ಯಯನ ಮಾಡಲಾಗಿದೆ.

**ಮೂರನೆಯ** ಅಧ್ಯಾಯದಲ್ಲಿ ಕಲಘಟಗಿಯ ಕಲೆಯ ಸಿದ್ಧತಾ ಪರಿಕರ ಮತ್ತು ರಚನಾ ವಿಧಿ ವಿಧಾನಗಳ ಕುರಿತಾಗಿದೆ. ಕಲಘಟಗಿಯ ಕಲೆಯು ಮರ, ಮಣ್ಣು, ಮತ್ತು ಸಂಕೀರ್ಣ ಮಾಧ್ಯಮಗಳಲ್ಲಿ ತನ್ನ ಹರವನ್ನು ವಿಸ್ತರಿಕೊಂಡಿದ್ದು, ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಲಾಗಿದ್ದು, ಈ ಕಲೆಯ ಸಿದ್ಧತಾ ವಿಧಿ ವಿಧಾನ ಹಾಗೂ ಕಲಾವಿದರು ಸ್ವತಃ ತಾವೇ ದೇಶಿಯವಾಗಿ ತಯಾರಿಸಿಕೊಳ್ಳುವ ಅರಗಿನ ಬಣ್ಣದ ಬಗೆಯನ್ನು ಹೇಳಲಾಗಿದೆ. ವಿಶಿಷ್ಟ ರೀತಿಯ ಕುಂಚದ ಬಳಕೆ ಅಲ್ಲದೆ ಕಲಾಕೃತಿಗೆ ಹೊಳಪನ್ನು ಕೊಡುವ ಕೇದಿಗೆಯ ಎಲೆಯನ್ನು ಕುರಿತು ಇಲ್ಲಿ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ.

**ನಾಲ್ಕನೆಯ** ಅಧ್ಯಾಯವು ಕಲಘಟಗಿಯ ಮಣ್ಣಿನಮಾಧ್ಯಮದ ಕಲಾಕೃತಿಗಳ ಕುರಿತದ್ದಾಗಿದೆ. ಚಿತ್ರಗಾರರು ತಾವು ರಚಿಸಬೇಕಾಗಿರುವ ಶಿಲ್ಪಗಳಿಗೆ ಸ್ಥಳೀಯವಾಗಿ ದೊರಕುವ ಜೇಡಿ ಮಣ್ಣನ್ನು ಉಪಯೋಗಿಸಿ ಗಣಪತಿ, ನಂದಿ, ನಾಗದೇವತೆ, ದೇವತಾ ಶಿಲ್ಪ, ಪ್ರಾಣಿಶಿಲ್ಪಗಳನ್ನು ಕುರಿತು ಹಾಗೂ ಶಿಲ್ಪಗಳಿಗೆ ಬಳಸುವ ವಿಶಿಷ್ಟ ಬಗೆಯ ಬಣ್ಣಗಳ ಕುರಿತು ಸಹ ಇಲ್ಲಿ ಪೂರಕವಾಗಿ ಅಧ್ಯಯನ ಮಾಡಲಾಗಿದೆ.

**ಐದನೆಯ** ಅಧ್ಯಾಯದಲ್ಲಿ ಕಲಘಟಗಿಯ ಕಾಷ್ಠ ಮಾಧ್ಯಮದ ಕಲಾಕೃತಿಗಳ ಕುರಿತಾಗಿದೆ. ಕಲಘಟಗಿಯಲ್ಲಿ ತಯಾರಾಗುವ ತೊಟ್ಟಿಲು ಕಲಾಕೃತಿಗಳು ಕಲಘಟಗಿ ತೊಟ್ಟಿಲುಗಳೆಂದೆ ಹೆಸರುವಾಸಿಯಾಗಿವೆ. ಕಲಘಟಗಿಯ ಚಿತ್ರಗಾರರು ಸಾಮಾನ್ಯವಾಗಿ ಮರದಲ್ಲಿಯೇ ಮೂರ್ತಿಶಿಲ್ಪ, ದೇವಿಯ ವಿವಿಧ ರೂಪಗಳು, ರಥ, ಗೌರಿಮುಖ, ಪಲ್ಲಕ್ಕಿ, ದುರ್ಗಾ, ಟೀಪಾಯಿ, ಉಯ್ಯಾಲೆ, ಕುರ್ಚಿ, ತೊಟ್ಟಿಲಿನಲ್ಲಿ ಹಲವಾರು ಪ್ರಕಾರಗಳು ಇವರ ಕೃತಿಗಳಲ್ಲಿವೆ.

ತೊಟ್ಟಿಲಿನ ಮೇಲಿನ ಚಿತ್ರಗಳಲ್ಲಿ ಇವರದೇ ಆದ ಶೈಲಿಯನ್ನು ಕಾಣಬಹುದು. ಇವರ ವರ್ಣದಿಂದ ಅರಳಿದ ಕೃಷ್ಣನ ರೂಪಗಳು, ಪೌರಾಣಿಕ ಕಥೆ, ರಾಮಾಯಣ, ಮಹಾಭಾರತ, ನಿಸರ್ಗದ, ಬೆಟ್ಟಗುಡ್ಡಗಳು, ಪ್ರಾಣಿಪಕ್ಷಿಗಳು, ವಿಶೇಷವಾದ ತಂತ್ರಗಾರಿಕೆಯಿಂದ ಕೂಡಿದ್ದಾಗಿದೆ. ಇವುಗಳ ಕುರಿತು ಅಧ್ಯಯನ ಮಾಡಲಾಗಿದೆ.

**ಆರನೆಯ** ಅಧ್ಯಾಯದಲ್ಲಿ ಕಲಘಟಗಿಯ ಸಂಕೀರ್ಣ ಮಾಧ್ಯಮದ ಕಲಾಕೃತಿಗಳ ಕುರಿತಾಗಿದೆ. ಇಲ್ಲಿ ವಿಶೇಷವಾಗಿ ಸಂಕೀರ್ಣ ಮಾಧ್ಯಮದ ಕಲಾಕೃತಿಗಳನ್ನು ರಚಿಸಲಾಗುವುದು. ಉದಾ: ಮದುವೆ ಹುಟ್ಟುಹಬ್ಬ ಮುಂತಾದ ಸಂಭ್ರಮದ ಸಂದರ್ಭದಲ್ಲಿ ಕೊಡುವ ನೆನಪಿನ ಕಾಣಿಕೆಗಳು. ಮಕ್ಕಳ ಆಟಿಕೆ ವಸ್ತುಗಳು ಗೃಹಪಯೋಗಿ ವಸ್ತುಗಳನ್ನು ಹೆಸರಿಸಬಹುದು. ಇದಲ್ಲದೆ ದೇವಿಯ ವಿವಿಧ ಸ್ವರೂಪದ ಮೂರ್ತಿಗಳನ್ನು ಈ ಸಂಕೀರ್ಣ ಮಾಧ್ಯಮದಲ್ಲಿ ಬಳಸಿಕೊಳ್ಳುವ ರೀತಿಯನ್ನು ವಿವರಿಸಲಾಗಿದೆ.

**ಏಳನೆಯ** ಅಧ್ಯಾಯದಲ್ಲಿ ಕಲಘಟಗಿಯ ಕಲಾಕೃತಿಗಳ ತಂತ್ರ ಶೈಲಿ, ಪ್ರಭಾವ ಮತ್ತು ಪ್ರೇರಣೆ, ಕುರಿತಾಗಿದೆ. ಕಲಘಟಗಿಯ ಚಿತ್ರಗಾರರು ಸಾಮಾನ್ಯವಾಗಿ ಕಾಷ್ಠ ಮಾಧ್ಯಮದಲ್ಲಿಯೇ ತೊಟ್ಟಿಲು ಹಾಗೂ ಇತರ ಮೂರ್ತಿಶಿಲ್ಪಗಳನ್ನು ತಯಾರಿಸಿ ಕೊಡುತ್ತಾರೆ. ಈ ಕಲಾಕೃತಿಗಳ ರಚನೆಯಲ್ಲಿ ಇವರದೇ ಆದ ಶೈಲಿಯನ್ನು ಕಾಣಬಹುದು. ಅದು ಗೌರಿಮುಖ ಆಗಿರಲಿ ಉತ್ಸವದ ವಾಹನ ಗೊಂಬೆಗಳಾಗಿರಲಿ ಎಲ್ಲದರಲ್ಲೂ ಇವರು ಸಮಕಾಲೀನ ಸ್ಥಿತಿಗೆ ಹೊಂದುವಂತೆ ರಚಿಸುತ್ತಾರೆ. ಅಲ್ಲದೆ ರಾಮಾಯಣ, ಮಹಾಭಾರತ, ಪೌರಾಣಿಕ, ದೇವಿಯ ರೂಪಗಳು, ಚಿತ್ರಣಗಳನ್ನು ಇಲ್ಲಿ ನೋಡಬಹುದು. ವರ್ಣಗಳ ಬಳಕೆ ಈ ಕಲೆಯ ವಿಶಿಷ್ಟ ಶೈಲಿಯಾಗಿ ಬೆಳೆದುಬಂದಿದೆ. ಇವುಗಳ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಎಂಟನೆಯ** ಅಧ್ಯಾಯದಲ್ಲಿ ಕಲಘಟಗಿಯ ಕಲಾವಿದರ ಪ್ರಸ್ತುತ ಸ್ಥಿತಿ–ಗತಿ, ಕುರಿತಾಗಿದೆ. ಕಲಘಟಗಿ ಪಟ್ಟಣದಲ್ಲಿ ಹಲವು ಕುಂಟುಬಗಳು ಈ ಕಲೆಯನ್ನು ಉಳಿಸಲು ಶ್ರಮಿಸಿದ್ದಾರೆ. ಇಲ್ಲಿಯ ಪ್ರಮುಖ ಕಲಾವಿದರಾದ ಘೀರಾಜೆ, ತಮ್ಮಣ್ಣ, ಸಾವುಕಾರ, ಸಿದ್ಧಪ್ಪ, ತಮ್ಮಣ್ಣ, ಸಾವುಕಾರ, ಗಂಗಾಧರ, ಲಕ್ಷ್ಮಣ, ಶಿವಾಜಿ ಸಾವುಕಾರ ಅಲ್ಲದೆ ಕೆಲವು ಬಡಿಗೇರ ಕುಟುಂಬಗಳು ಇವೆ. ಈ ಕಲಾವಿದರ ಕುರಿತು ತಿಳಿದು, ಕಲಾವಿದನಿಗೆ ಸಿಕ್ಕ ಸೌಲಭ್ಯಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಒಂಭತ್ತನೆಯ** ಅಧ್ಯಾಯವು ಸಮಾರೋಪವಾಗಿದ್ದು ಈ ಅಧ್ಯಾಯದಲ್ಲಿ ಈ ಹಿಂದಿನ ಎಂಟು ಅಧ್ಯಾಯಗಳ ಸಮೀಕ್ಷೆಯಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ. ಅವು ಈ ಕೆಳಗಿನಂತಿವೆ.

**೧. ಮೂಲ ಆಕರ ಸಾಮಗ್ರಿಗಳು**

**೨. ಆನುಷಂಗಿಕ ಆಕರ ಸಾಮಗ್ರಿಗಳು**

**೧. ಮೂಲ ಆಕರ ಸಾಮಗ್ರಿಗಳು**

ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ, ಜನಜೀವನಗಳಂತಹ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಅನಿವಾರ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮ್ರಗಿಯಾಗಿ ಕಲಘಟಗಿಯ ಕಲೆಯನ್ನೇ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದ ಕ್ಷೇತ್ರಕಾರ್ಯವು ಛಾಯಾಚಿತ್ರಣ ಮಾಡುವುದು. ಸಂದರ್ಶನ, ಸಂಭಾಷಣೆ, ಧ್ವನಿಮುದ್ರಣ, ಶಿಲ್ಪಗಳ ರಚನೆಗೆ ಬಳಸಲಾಗುವ ಮಾಧ್ಯಮಗಳ ವಿವರಣೆ ಸಂಗ್ರಹಿತ ವಿಷಯದ ಪ್ರತಿಗಳನ್ನು ಸಿದ್ಧಪಡಿಸುವಾಗ ಕೆಲವು ಸಲ ಮೂಲ ಚಿತ್ರದ ಎದುರಿಗೆ ಕುಳಿತು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ

ಸ್ಥಳದಲ್ಲೇ ಬರೆದುಕೊಳ್ಳಲಾಯಿತು. ಸಂಗ್ರಹಾಲಯಗಳಿಗೆ ಭೇಟಿಕೊಟ್ಟು ವಿಷಯ ಸಂಗ್ರಹ ಮಾಡಿಕೊಂಡಿದೆ. ಅಲ್ಲದೇ ಈ ಕ್ಷೇತ್ರಕಾರ್ಯದಲ್ಲಿ ಚಿತ್ರಕಲಾ ಕ್ಷೇತ್ರದ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

**೨. ಅನುಷಂಗಿಕ ಆಕರ ಸಾಮಗ್ರಿ**

ಪ್ರಬಂಧ ರಚಿಸುವಲ್ಲಿ ಎರಡನೇ ವಿಧಾನ ಅನುಷಂಗಿಕ ಆಕರ ಸಾಮಗ್ರಿಯಾಗಿದ್ದು, ಇದರಲ್ಲಿ ಸಂಶೋಧನಾ ಮಹಾಪ್ರಬಂಧಗಳು, ಪ್ರಕಟಿತ-ಅಪ್ರಕಟಿತ ಸಾಹಿತ್ಯ ಕೃತಿಗಳು, ಶಾಸನ ಸಂಪುಟಗಳು, ನಿಘಂಟುಗಳು, ವಿಶ್ವ ಕೋಶಗಳು, ಗ್ಯಾಸೆಟಿಯರ್‌ಗಳು, ಅಭಿನಂಧನಾ ಗ್ರಂಥಗಳು, ಅನುವಾದ ಗ್ರಂಥಗಳು ಮುಂತಾದವುಗಳನ್ನು ಅಧ್ಯಯನದ ಅನುಷಂಗಿಕ ಆಕರ ಸಾಮಗ್ರಿಳಾಗಿ ಬಳಸಿಕೊಳ್ಳಲಾಗಿದೆ. ಹಾಗೆ ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳಿಗೆ ಭೇಟಿ ನೀಡಿ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯದಿಂದ ದೊರೆತ ಮೂಲ ಆಕರ ಸಾಮಗ್ರಿ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಅನುಷಂಗಿಕ ಮಾಹಿತಿಯನ್ನು ಸಂಗ್ರಹ ಮಾಡಿಕೊಂಡು ಪ್ರಸ್ತುತ ಕಿರು ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

******

### ಕಲಘಟಗಿಯ ಹಿನ್ನಲೆ

ತಾಲೂಕು ಕೇಂದ್ರವಾದ ಕಲಘಟಗಿಯು ಧಾರವಾಡದಿಂದ ದಕ್ಷಿಣಕ್ಕೆ ಸುಮಾರು ೩೬ಕಿ.ಮಿ ದೂರದಲ್ಲಿದೆ. ಈ ಊರು ಪ್ರಾಚೀನ ಶಾಸನಗಳಲ್ಲಿ 'ಕಲ್ಲುಕುಟಿಗೆ' ಎಂದೇ ಉಲ್ಲೇಖಿಸಲ್ಪಟ್ಟಿದೆ. ಇಲ್ಲಿವರೆಗೆ ಇಲ್ಲಿಂದ ಐದು ತ್ರುಟಿತ ಶಾಸನಗಳು ವರದಿಯಾಗಿದ್ದು ವಿಷಯ ಅಸ್ಪಷ್ಟವಾಗಿದೆ. ಇವುಗಳಲ್ಲಿ ಆರ್ಮಡಿ ವಿಕ್ರಮಾದಿತ್ಯನ (ಕ್ರಿ.ಶ.೧೦೮೦) ಆಳ್ವಿಕೆಯಲ್ಲಿ ಮಹಾಮಂಡಳೇಶ್ವರ ಗುವಲದೇವನು ಉಣಕಲ್ಲು-೩೦ ಮತ್ತು ಸಬ್ಬೆ-೩೦ ಅನ್ನು ಇದನ್ನು ಆಳುತ್ತಿದ್ದ ಪ್ರಸ್ತಾಪವಿದ್ದು ಇದರಿಂದ ಕಲಘಟಗಿ ಹಿಂದೆ ಸಬ್ಬೆ-೩೦ ಕ್ಕೆ ಸೇರಿದ ಗ್ರಾಮವಾಗಿತ್ತೇನೊ ಎಂಬ ಅನುಮಾನ ಮೂಡುತ್ತದೆ. ಉಳಿದ ನಾಲ್ಕು ಶಾಸನಗಳು ಬ್ರಾಹ್ಮಣರಿಗೆ, ಜೈನರಿಗೆ ನೀಡಿದ ದಾನ ಶಾಸನಗಳಾಗಿವೆ. ಇಂದು 'ಕಲ್ಲುಕುಟಿಗೆ' ಹಾಗೂ ಮರದ ತೊಟ್ಟಿಲು, ಮೂರ್ತಿಗಳ ಉತ್ಪಾದನೆಗೆ ಹೆಸರಾಗಿರುವ ಈ ಊರಲ್ಲಿದ್ದ ಪ್ರಾಚೀನ ದೇವಾಲಯಗಳೆಲ್ಲಾ ನಾಶವಾಗಿದ್ದು ಕೆಲವು ಮೂರ್ತಿಶಿಲ್ಪಗಳಷ್ಟೇ ಉಳಿದಿವೆ. ಊರಲ್ಲಿ ಎರಡು ಜೈನ ಬಸದಿಗಳಿದ್ದು ದೊಡ್ಡ ಬಸ್ತಿಯಲ್ಲಿ ಸುಮಾರು ೧೧-೧೨ನೇ ಶತಮಾನದ ಸುಂದರ ಜೈನ ತೀರ್ಥಂಕರರ ಮೂರ್ತಿಗಳಿವೆ. ಶಾಂತಿನಾಥ ಬಸದಿ ಎಂದು ಕರೆಯಲ್ಪಡುವ ಈ ಗುಡಿ ಇತ್ತೀಚಿಗೆ ರಚನೆಯಾಗಿದ್ದು, ಒಳಗಿರುವ ಎರಡು ತೀರ್ಥಂಕರ ಮೂರ್ತಿಶಿಲ್ಪಗಳಲ್ಲಿ  ಒಂದು ಪದ್ಮಾಸನ್ ಶಾಂತಿನಾಥ ತೀರ್ಥಂಕರ ಮತ್ತೊಂದು ಕಾಯಸ್ತಬಂಗಿಯ ನಿಂತ ಪಾರ್ಶ್ವನಾಥನ ಮೂರ್ತಿಯಾಗಿದೆ. ಇವು ಕಲ್ಯಾಣದ ಚಾಳುಕ್ಯ ಶಿಲ್ಪಗಳಾಗಿವೆ. ಜೈನರ ಓಣಿಯಲ್ಲಿ ಸಣ್ಣ ಬಸದಿಯಿದ್ದು ಅಲ್ಲಿ ನಿಂತ ಭೈರವನ ಸುಂದರ ಮೂರ್ತಿಯಿದೆ. ಇವುಗಳ ಜೊತೆಯಲ್ಲಿ ಹನುಮಂತ, ಗ್ರಾಮದೇವತೆ, ವೀರಣ್ಣ, ಕಾಳಮ್ಮ, ದ್ಯಾಮವ್ವ ಮತ್ತು ಬಸವಣ್ಣನ ಇತ್ತೀಚಿನ ಗುಡಿಗಳು ಇವೆ. ಇಲ್ಲಿ ರುಸ್ತುಂ ಸಾಹೆಬ್ ದರ್ಗಾ ಬಹಳ ಪ್ರಸಿದ್ಧವಾಗಿದ್ದು ಯುಗಾದಿಯಾಗಿ ಐದು ದಿನಕ್ಕೆ ನೆಡೆಯುವ ಉರುಸಿನಲ್ಲಿ ಸಾವಿರಾರು ಜನರು ಪಾಲ್ಗೊಳ್ಳುತ್ತಾರೆ. ದುರ್ಗಮ್ಮನ ಜಾತ್ರೆ ಪ್ರತಿ ಮೂರು ವರ್ಷಕ್ಕೊಮ್ಮೆ ಪೆಬ್ರುವರಿ ತಿಂಗಳಲ್ಲಿ ಜರುಗುತ್ತದೆ.[೧] ಮರದ ತೊಟ್ಟಿಲುಗಳ ನಿರ್ಮಾಣಕ್ಕೆ ಪ್ರಖ್ಯಾತವಾಗಿರುವ ಈ ಊರಲ್ಲಿ ಇದನ್ನೇ ವೃತ್ತಿಯನ್ನಾಗಿಸಿಕೊಂಡಿರುವ ನಾಲ್ಕಾರು ಮನೆತನಗಳಿವೆ. ಕಲಘಟಗಿಯ ಕಲಾವಿದರೆ ಹೇಳುವಹಾಗೇ ಕಲಘಟಗಿ ಊರಿನ ಹೆಸರು ಮೊದಲಿನಿಂದಲೂ ಬಂದಿದೆ. ಇಲ್ಲಿ ಹಲವಾರು ಸಾಂಸ್ಕೃತಿಕ ಕಾರ್ಯಗಳು ಹೆಚ್ಚಾಗಿರುವುದರಿಂದ ಅಂದರೆ ಇಲ್ಲಿ ಮುಖ್ಯವಾಗಿ ತೊಟ್ಟಿಲು ತಯಾರಿಕೆ, ಬುಟ್ಟಿ ಹೆಣೆಯುವುದು, ಒಲೆಗಳನ್ನು ನಿರ್ಮಿಸುವುದು, ಮಡಿಕೆ, ಹಣತೆ, ಚಾಪೆ, ಇಟ್ಟಿಗೆ, ಇನ್ನೂ ಮುಂತಾದವುಗಳಲ್ಲದೆ ನಾಟಕ, ಸಂಗೀತ, ಹಲವಾರು ಸಾಂಪ್ರದಾಯಿಕ, ಆಚರಣೆಯಿಂದಲೆ ಇಂದು ಕಲೆಗಳ ಬೀಡು ಆಗಿದೆ. ಹಾಗಾಗಿ ಇದಕ್ಕೆ  ಕಲಘಟಗಿ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ.[೨] ಕಲಘಟಗಿಯಿಂದ ನೈಋತ್ಯಕ್ಕೆ ಯಲ್ಲಾಪುರ ರಸ್ತೆಯಲ್ಲಿ ಬಲಕ್ಕೆ ೧೦.ಕಿ.ಮೀ. ದೂರದಲ್ಲಿರುವ 'ಸಾತ್‌ಸಹೀದ್'

---

೦೧. ಸೂರ್ಯನಾಥ.ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೯೦೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೦೨. ವಿವರಣೆ ನೀಡಿದವರು : ಲಕ್ಷ್ಮಣ ಫೀರಾಜೆ ಸಾವುಕಾರ್ ಕಲಘಟಗಿಯ ತೊಟ್ಟಿಲು ಕಲಾವಿದರು

ಎಂಬ ಸ್ಥಳ ಏಳುಮಂದಿ ಶಹೀದ (ಹುತಾತ್ಮ) ರ ಸಮಾಧಿಗಳಿಂದ ಪ್ರಸಿದ್ಧವಾಗಿದೆ. ಸುಮಾರು ೩೪೦ ವರ್ಷಗಳ ಹಿಂದೆ ಬಿಜಾಪುರದ ಸೂಫಿಸಂತ ಹಾಶಿಮ್ ಪೀರನ ಅನುಯಾಯಿಗಳು ಹವಳದ ಹಿಂಡಸಗೇರಿಯ ನಿವಾಸಿಗಳು ಆದ ಏಳು ಮಂದಿ (ಸಹೋದರರು) ಮಹಮದ ಆದಿಲ್‌ಷಾನಿಂದ ಸನ್ನತಿ ಪಡೆದು ಇಲ್ಲಿಗೆ ಬಂದು ಕಾಡುಕಡಿದು ನೆಲೆನಿಲ್ಲುವ ಯತ್ನದಲ್ಲಿ ಪ್ರಾಣತ್ಯಾಗ ಮಾಡಿ ಹುತಾತ್ಮರಾದರಂತೆ ಬಹುಶಃ ಇದು ಸೇನಾಪಾಳ್ಯಯವಾಗಿದ್ದು ಆಗ ಸತ್ತವರಲ್ಲಿ ಇವರು ಅಗ್ರಗಣ್ಯರಿದ್ದಿರಬೇಕು. ಅವರ ಸಮಾಧಿಗಳೇ ಈ ಸಾತ್‌ಸಹೀದ್ ಎಂದು ಬರೆದಿದೆ. ಈ ಏಳೂ ಮಂದಿಯ ಸಮಾದಿಗಳೂ ಒಂದೆ ಆವರಣದಲ್ಲಿದ್ದು ಕಂಡುಬರುತ್ತದೆ.[೩] ಹಾಗೇ ಕಲಘಟಗಿಯ ಪ್ರದೇಶದಲ್ಲಿ ಹೆಚ್ಚಾಗಿ ಅಕ್ಕಿ ಗಿರಣಿಗಳು, ಮರಕೊಯ್ಯುವ ಕಾರ್ಖಾನೆಗಳು ಒಂದು ಬೆಂಕಿಕಡ್ಡಿಯ ಕಾರ್ಖಾನೆಯು ಇದೆ. ಹಾಗೇ ಹನುಮಾನ್, ವೆಂಕಟೇಶ್ವರ, ಗ್ರಾಮದೇವತೆ, ದೇವಾಲಯವು ಕಂಡುಬರುತ್ತವೆ. ಈ ಪ್ರದೇಶದಿಂದ ೧೦.ಕೀ.ಮಿ. ದೂರದಲ್ಲಿ ಕಾಮಧೇನು ಎಂಬ ಗ್ರಾಮದಲ್ಲಿಯ ಕಲ್ಮೇಶ್ವರ ದೇವಾಲಯದ ಹೊರಮೈಯಲ್ಲಿ ಸುಂದರವಾದ ಪೌರಾಣಿಕ ಕೆತ್ತನೆಗಳು ಇವೆ.[೪] ಕಲಘಟಗಿಯಲ್ಲಿಯ ಪ್ರತಿಯೊಂದು ಮನೆಯೂ ಸುಂದರವಾದ ಹಂಚುಗಳಿಂದ ಕೂಡಿದ್ದಲ್ಲದೆ ಮನೆಗಳಿಗೆ ಸಾಗುವಾನಿ ಮರದ ತುಂಡುಗಳನ್ನು ಕಲಾತ್ಮಕವಾಗಿ ಹೊಂದಿಸಿರುವ ವೈಶಿಷ್ಟ್ಯವಾಗಿದೆ. ಸುಂದರ ಕೆತ್ತನೆಯಿಂದ ಕೂಡಿದ ಈ ಮರದ ತುಂಡುಗಳು ನೋಡುಗರನ್ನು ಚಕಿತಗೊಳಿಸುತ್ತದೆ. ಇಲ್ಲಿ ಎರಡು ಪ್ರಕಾರದ ಹಂಚುಗಳು ಕಂಡುಬರುತ್ತವೆ. ಒಂದು ಅರ್ಧಚಂದ್ರಾಕಾರದ ಹಂಚು ಮತ್ತೊಂದು ಸಾಮಾನ್ಯವಾಗಿರುವುದಾಗಿದೆ.

### ಅರಣ್ಯ ಸಂಪತ್ತು ಹಾಗೂ ನದಿ, ಬೆಟ್ಟಗಳು

ಅರಣ್ಯ ಇಲಾಖೆಯ ವರದಿ ಪ್ರಕಾರ ಕಲಘಟಗಿಯ ಅರಣ್ಯವು ೧೯. ೫೨೬ ಚ.ಕಿ.ಮೀ. ಪ್ರದೇಶದಲ್ಲೂ ಹರಡಿದೆ. ಇದು ೧೯೯೧-೯೨ ನೇ ಸಾಲಿನ[೫] ವರದಿಯಾಗಿದೆ. ಈ ತಾಲೂಕಿನ ಪ್ರಮುಖ ಬೆಟ್ಟಗುಡ್ಡಗಳೆಂದರೆ ಕಲಘಟಗಿ ಹುಬ್ಬಳ್ಳಿ ತಾಲೂಕಿನ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಸುಮಾರು ಎಂಟು ಮೈಲು ಉದ್ದ, ಒಂದು ಮೈಲಿಯಷ್ಟು ಅಗಲ ಹರಡಿರುವ ಸಣ್ಣ ಸಣ್ಣ ಕುರುಚಲು ಕಾಡಿನಿಂದ ಆವರಿಸಿರುವ ಬೂದನಗುಡ್ಡ ಹುಬ್ಬಳ್ಳಿ ಹತ್ತಿರ ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಉಣಕಲ್ಲುಗುಡ್ಡ (ನೃಪತುಂಗ ಬೆಟ್ಟ) ಮತ್ತು ಧಾರವಾಡ ಹುಬ್ಬಳ್ಳಿ ಮಧ್ಯದಲ್ಲಿ ಹಬ್ಬಿರುವ ರಾಯಾಪುರ ಗುಡ್ಡದ ಸಾಲುಗಳು ಈ ತಾಲೂಕಿನ ಗಮನಾರ್ಹ ಬೆಟ್ಟಗುಡ್ಡಗಳಾಗಿರುತ್ತವೆ.[೬]

ಈ ತಾಲೂಕಿನಲ್ಲಿ ಯಾವ ಪ್ರಮುಖ ನದಿಗಳೂ ಹರಿಯುವದಿಲ್ಲ ಕೇವಲ ಹಳ್ಳ, ತೊರೆಗಳು ಇರುತ್ತವೆ. ಆದರೆ ಧಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈ ತಾಲೂಕಿಗೆ ಬೇಡ್ತಿ ನದಿ ಮಾತ್ರ ಪಶ್ಚಿಮಕ್ಕೆ ಹರಿಯುತ್ತದೆ. ಧಾರವಾಡ ಸಮೀಪದ ಸೋಮೇಶ್ವರ ಎಂಬಲ್ಲಿ ಹುಟ್ಟಿ ಶಾಲ್ಮಲಾ, ಬೇಡ್ತಿ ನದಿಯು ಉಪನದಿಯಾಗಿದೆ. ಧಾರವಾಡ ತಾಲೂಕಿನಲ್ಲೇ ಉಗಮಿಸುತ್ತದೆ. ಕಲಘಟಗಿಯ ಬಳಿ ಸಂಗದೇವರ ಕೊಪ್ಪದಲ್ಲಿ ಇವುಗಳು ಕೂಡುತ್ತವೆ. ಹುಬ್ಬಳ್ಳಿ ಧಾರವಾಡ ನಗರಗಳಿಗೆ ಕುಡಿಯಲು ಪೂರೈಸಲಾಗುತ್ತದೆ.[೭] ಆದರೆ ಮಲೆನಾಡು ಪ್ರದೇಶವಾದ್ದರಿಂದ ಮಳೆಯು ಹೆಚ್ಚಿಗೆ ಬೀಳುತ್ತದೆ.

ತಾಲೂಕಿನಲ್ಲಿ ಹೇಳಿಕೊಳ್ಳುವಂತಹ ದಟ್ಟವಾದ ಅರಣ್ಯ ಇಲ್ಲದಿದ್ದರೂ ಪಶ್ಚಿಮ ಭಾಗದಲ್ಲಿ ಧಾರವಾಡ ಮತ್ತು ಕಲಘಟಗಿ ಪ್ರದೇಶಕ್ಕೆ ಹೊಂದಿಕೊಂಡಂತಹ ಅಡವಿಯು ವಿರಳವಾಗಿದ್ದು ಸಾಗವಾನಿ, ಶ್ರೀಗಂಧ, ಹೊನ್ನೆ, ಮತ್ತಿ, ಹಲಸು, ಮುಂತಾದ ಬೆಲೆಯುಳ್ಳ ಮರಗಳು ಬೆಳೆಯುತ್ತವೆ.[೮] ಇಂತಹ ಮರಗಳು ಸ್ಥಳೀಯವಾಗಿ

---

೧೩. ಸೂರ್ಯನಾಥ.ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೯೦೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೪. ಸೂರ್ಯನಾಥ.ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ಮೂರು ಪು. ೪೭೭ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೫. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೩೩ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೬. ಎಂ.ಬಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೦೫ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

೧೭. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೧೪ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೮. ಎಂ.ಬಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೦೬ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

ದೊರಕುವುದರಿಂದ ಕಲಘಟಗಿಯ ಕಲಾವಿದರಿಗೆ ಹೆಚ್ಚು ಮರ ಮಾಧ್ಯಮದಲ್ಲೇ ಪೀಠೋಪಕರಣಗಳನ್ನು ತಯಾರಿಸಲು ಅನುಕೂಲವಾಗಿ ಈ ಕಲಾವಿದರೇ ಬಳಸುವ ಮಾಧ್ಯಮವಾಗಿ ರೂಪಗೊಂಡ ತೊಟ್ಟಿಲುಗಳು ಪ್ರಸಿದ್ಧಿ ಪಡೆದಿವೆ. ಹಾಗೇ ಇದೇ ಮರದಿಂದಲೇ ದೇವಿಯ ಮೂರ್ತಿಶಿಲ್ಪಗಳು ನಿರ್ಮಾಣ ಮಾಡುತ್ತಾರೆ. ಅಲ್ಲದೆ ಇನ್ನೂ ಇತ್ಯಾದಿಗಳು ಆಟಿಕೆ ಗೊಂಬೆಗಳು ಮರದಿಂದಲೇ ನಿರ್ಮಾಣ ಮಾಡುವ ಕಲಾವಿದರಾಗಿದ್ದಾರೆ.

ಅರಣ್ಯ ಸಂಪತ್ತು ಮುಂದುವರೆಯುವಿಕೆ ಮತ್ತು ಆಧಾರಪೂರ್ಣ ಪ್ರತಿಫಲ ಈ ತತ್ವಗಳನ್ನವಲಂಬಿಸಿ ವ್ಯವಸ್ಥಿತವಾಗಿ ಉಪಯೋಗಿಸಲ್ಪಡುತ್ತದೆ. ಹೀಗೆ ಮಾಡುವಾಗ ಅರಣ್ಯವನ್ನು ಅವಲಂಭಿಸಿದ ಕೈಗಾರಿಕೆಗಳ ಬೇಡಿಕೆಗಳನ್ನು ಪೂರೈಸುವುದು ನೈಸರ್ಗಿಕ ಪುನರುತ್ಪತ್ತಿ ಕಾಡನ್ನು ಪೂರ್ವಸ್ಥಿಯಲ್ಲಿ ಸ್ಥಾಪಿಸುವುದು ಮತ್ತು ವನನಿರ್ಮಾಣ ಮಾಡುವುದು ಇವುಗಳನ್ನು ಉತ್ತೇಜಿಸಲಾಗುವುದು. ಬಗೆಬಗೆಯ ಅರಣ್ಯ ಉತ್ಪತ್ತಿಗಳು ಹೊರತೆಗೆಯಲ್ಪಡುತ್ತವೆ. ಮತ್ತು ಬೇರೆ ಬೇರೆ ಕೈಗಾರಿಕೆಗಳಿಗೆ ಮತ್ತು ವ್ಯಕ್ತಿಗಳಿಗೆ ಅವು ಮಾರಲ್ಪಡುತ್ತವೆ.[೯] ಇಲ್ಲಿ ದೊರಕುವ ಮರಗಳ ತುಂಡುಗಳು ಕಲಘಟಗಿಯ ಕಲಾವಿದರಿಗೂ ಸಹ ಉಪಯುಕ್ತವಾಗಿವೆ. ಹಾಗೇ ಬೀಟೆ, ತೇಗ, ಹೊನ್ನಿ, ಶಿವಣ್ಣಿ, ಮತ್ತು ನಂದಿ ಮುಂತಾದ ಮರಗಳು ನೈಸರ್ಗಿಕವಾಗಿಯೆ ಬೆಳೆಯುವ ಈ ಅರಣ್ಯಗಳು ಮರಮುಟ್ಟಿನ ಉತ್ಪತ್ತಿಗೆ ಸೌದೆ ಉತ್ಪತ್ತಿಗೆ ಮತ್ತು ಆಡಳಿತಾತ್ಮಕ ದೃಷ್ಟಿಕೋನದಿಂದಲೂ ಮಹತ್ವದ್ದಿವೆ, ಶ್ರೀಗಂಧ, ಚೌಬೀನ, ನೀಲಗಿರಿ, ಬಿದಿರು, ಮತ್ತು ಇತರೆ ಮರಗಳು ಉತ್ಪನ್ನಗಳು ಇವೆ. ಹಾಗೇ ಚಿಲ್ಲರೇ ಮಾರಾಟಕ್ಕಾಗಿ ಡಿಪೋದಲ್ಲಿ ರಾಶಿ ರಾಶಿ ಹಾಕಿ ವಿಲೇವಾರಿ ಮಾಡಲಾಗುತ್ತದೆ.

**ಹವಾಗುಣ, ಮಳೆ**

ಈ ತಾಲೂಕು ಮಲೆನಾಡು ಮತ್ತು ಪೂರ್ವದ ಬೆಳವಲ ನಾಡುಗಳ ಮಧ್ಯ ಇರುವ ಗಡಿನಾಡು ಪ್ರದೇಶದಿಂದ ಕೂಡಿದೆ. ಇಲ್ಲಿನ ಹವೆ ಸಾಮಾನ್ಯವಾಗಿ ಸಮಶೀತೋಷ್ಣವಾಗಿದ್ದು ಆರೂಗ್ಯಕ್ಕೆ ಒಳ್ಳೆಯದಾಗಿರುತ್ತದೆ. ಸಾಮಾನ್ಯವಾಗಿ ಬೇಸಿಗೆಯಲ್ಲಿ ಬಿಸಿಲು ಪ್ರಖರವಾಗಿದ್ದು, ಮಳೆಗಾಲದಲ್ಲಿ ಮಳೆಯೂ ಹೆಚ್ಚು, ಪಶ್ಚಿಮಕ್ಕಿಂತ ತಾಲೂಕಿನ ಪೂರ್ವಭಾಗದಲ್ಲಿ ಉಷ್ಣತೆ ಹೆಚ್ಚು, ಇಲ್ಲಿನ ಅತಿಹೆಚ್ಚಿನ ಉಷ್ಣತಾಮಾನ ಎಂದರೆ ೪೦ ಸೆಂಟಿಗ್ರೇಡ್ ಆಗಿದೆ.

ತಾಲೂಕಿನ ವಾಡಿಕೆ ಮಳೆ ಪ್ರಮಾಣ ೬೬೮.೯ಮೀ.ಮೀಗಳು ವಾಸ್ತವಿಕ ಸರಾಸರಿ ಮಳೆಯ ಪ್ರಮಾಣ ೯೨೩.೬ಮೀ.ಮೀಗಳು ಆಗಿದೆ. ಅಕ್ಟೋಬರ್ ನವಂಬರ ಸ್ವಲ್ಪಮಟ್ಟಿಗೆ ಡಿಸೆಂಬರ ತಿಂಗಳು ಬಿರುಗಾಳಿಗೆ ಹೆಸರಾಗಿದೆ. ಬೇಸಿಗೆ ಮತ್ತು ಮಾರುತಗಳ ನಂತರದ ಅವಧಿಯಲ್ಲಿ ಸಿಡಿಲು ಬಿರುಗಾಳಿಯೊಂದಿಗೆ ಭಾರಿ ಮಳೆ ಬಿಳುವುದುಂಟು, ಬೇಸಿಗೆಯಲ್ಲಿ ಗಾಳಿಯ ಪ್ರಮಾಣ ಹೆಚ್ಚುತ್ತಾ ಹೋಗುತ್ತದೆ. ಈ ಪ್ರದೇಶದಲ್ಲಿ ಮಳೆಯು ಹೆಚ್ಚಾಗಿ ಬೀಳುವುದರಿಂದ ಕಲಘಟಗಿಯ ತಾಲೂಕಿನ ದೇವಿಕೊಪ್ಪದ ಬಳಿಯ ದೊಡ್ಡಕೆರೆ ೪೩೩ ಎಕರೆಯ ಕರೆಯು ತುಂಬವುದು ಸಹಜವಾಗಿದೆ.[೧೦] ಇಂಥಾ ಹಿತಕರ ಹವಾಗುಣದಲ್ಲಿ ಕಲಘಟಗಿಯ ಕಲಾವಿದರು ತಂಪಾಗಿ ಹೊರಸೂಸುವ ಗಾಳಿಯನ್ನು ಹಿತಕರವೂಂಟುಮಾಡುವ ಮಳೆ ಫಲವತ್ತಾದ ಭೂಮಿ, ಅರಣ್ಯ, ಸಮೃದ್ಧಿಯಲ್ಲಿ ಬೆಳೆಯುವು ಇತರೆ ಬೆಳೆ, ಭತ್ತ, ಹತ್ತಿ, ಗೋದಿ, ಜೋಳ, ಮುಂತಾದ ಬೆಳೆಗಳಾಗಿವೆ. ಇಂತಹ ಪರಿಸರದಲ್ಲಿ ಕಲಾಕೃತಿಗಳು ಬೆಳೆಗಳ ಹಾಗೆ ಹೊರಬರುತ್ತವೆ. ಇದು ಕಲಘಟಗಿಯ ಕಲೆಯ ಕೊಡುಗೆಯಾಗಿದೆ.

**ಜನವರ್ಗಗಳು ಮತ್ತು ಆರ್ಥಿಕ ಸ್ಥಿತಿ**

ಕಲಘಟಗಿ ತಾಲೂಕಿನ ಜನಸಂಖ್ಯೆಯಲ್ಲಿ ಬಹುಸಂಖ್ಯಾತರು ಹಿಂದೂಗಳು ನಂತರದ ಸ್ಥಾನ ಮುಸ್ಲಿಂರದು ಹೆಚ್ಚಿನವರು ವೀರಶೈವರು ಮುಸ್ಲಿಂರಲ್ಲಿ ಬಹು ಜನರು ಸೈಯದ, ಪಠಾಣ, ಶೇಖವಂಶಸ್ತರು, ಮನಿಯಾರ, ಪಿಂಜಾರ, ಕಲಾಲ, ಎಂಬ ವೃತ್ತಿ ಆಧಾರಿತ ಒಳಪಂಗಡಗಳು ಇವೆ. ಭಾಷೆಯ ಆಧಾರದ

೦೯. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೩೪ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೦. ಎಂ.ಬಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೦೪ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

ಮೇಲೆ ಹೇಳುವುದಾದರೆ ತಾಲೂಕಿನ ಮುಖ್ಯ ಪ್ರಾದೇಶಿಕ ಭಾಷೆಯ ಕನ್ನಡವಾಗಿದೆ. ಅಲ್ಲದೆ ಕಲಘಟಗಿಯ ತೊಟ್ಟಿಲು ತಯಾರಿಸುವ ಮರಾಠಾ ಜನಾಂಗದವರು ಮತ್ತು ಬಡಿಗೇರ ಕಲಾವಿದರ ಸಮುದಾಯಗಳು ಕನ್ನಡವನ್ನೇ ಬಳಸುವುದು ಕಂಡುಬರುತ್ತದೆ. ಹಾಗೇ ಬಿದಿರು ಬುಟ್ಟಿಹೆಣೆಯುವರು, ಮಣ್ಣಿನ ಮಡಿಕೆ, ಹಣತೆ, ಚಾಪೆ, ಇತ್ಯಾದಿಯ ವೃತ್ತಿ ಜನಾಂಗದವರು ಕನ್ನಡವನ್ನೆ ಬಳಸುವುದಲ್ಲದೆ, ಮರಾಠ ಜನಾಂಗಗಳು ಸಹ ಕನ್ನಡ ಬಳಸುವುದು ಕಂಡುಬಂದಿದೆ. ಧಾರವಾಡ ಜಿಲ್ಲೆಯ ಇತರೆ ತಾಲೂಕು ಅಂದರೆ ಹುಬ್ಬಳ್ಳಿಗೆ ಹೋಲಿಸಿದರೆ ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಕಾರಣಗಳಿಂದ ಸ್ಥಳೀಯ ಕನ್ನಡದ ಮೇಲೆ ಮರಾಠಿ ಪ್ರಭಾವ ಕಂಡುಬರುತ್ತದೆ.[೧೧] ಆದರೆ ಕಲಘಟಗಿಯ ತಾಲೂಕು ಆರ್ಥಿಕ ದೃಷ್ಟಿಯಿಂದ ಉತ್ತಮವಾಗಿದೆ. ಇದಕ್ಕೆ ಕಾರಣ ಅನುಕೂಲಕರವಾದ ಮಳೆಗಾಲ, ಫಲವತ್ತಾದ ಭೂಮಿ ನೈಸರ್ಗಿಕ ಸಂಪನ್ಮೂಲಗಳು, ಉತ್ತಮವಾಗಿವೆ. ಮಾರುಕಟ್ಟೆ ಸೌಲಭ್ಯ ದೃಷ್ಟಿಯಿಂದ ಈ ಪ್ರದೇಶದಲ್ಲಿ ಹಲವಾರು ರೀತಿಯ ಸುಧಾರಣೆಗಳು ಆಗಬೇಕಾಗಿರುವುದು ಅವಶ್ಯವಾಗಿದೆ. ಕಲಘಟಗಿಯ ಕಲಾವಿದರ ದೃಷ್ಟಿಯಿಂದ ಕುರಿತು ಯೋಚಿಸಿದರೆ. ಅವರ ಆರ್ಥಿಕ ಸ್ಥಿತಿಗತಿಗಳು ತುಂಬಾ ಸುಧಾರಣೆಯಾಗಬೇಕಾಗಿದೆ. ಇದಕ್ಕೆ ಕಾರಣ ಇವರ ಕಲಾಕೃತಿಗಳಿಗೆ ಮಾರುಕಟ್ಟೆ ಸೌಲಭ್ಯವು ಒಂದಾಗಿದೆ. ಹಾಗೇ ಈ ಪ್ರದೇಶಕ್ಕೆ ಸಂಚಾರ ಸಂಪರ್ಕ ಉತ್ತಮವಾಗಿದೆ. ಈ ಪ್ರದೇಶದಲ್ಲಿ ಅರಣ್ಯವು ಹೆಚ್ಚಾಗಿರುವುದರಿಂದ ಪಶ್ಚಿಮ ಭಾಗದಲ್ಲಿ ಮಳೆ ಹೆಚ್ಚು ಬೀಳುತ್ತದೆ. ಆದ್ದರಿಂದ ಇಲ್ಲಿ ಹಂಚಿನ ಮನೆಗಳನ್ನು ಕಾಣಬಹುದು. ತಾಲೂಕಿನಲ್ಲಿ ಅನೇಕ ರೀತಿಯ ಆಹಾರ ಬೆಳೆಗಳನ್ನು ಬೆಳೆಯುತ್ತಿರುವುದರಿಂದ ಜನರ ಆಹಾರ ಸಮತೋಲನದಿಂದ ಕೂಡಿದೆ ಇದರಲ್ಲಿ ಮುಖ್ಯವಾಗಿ ಗೋದಿ, ಜೋಳ, ಭತ್ತ, ಕೆಂಪುಮೆಣಸಿನಕಾಯಿ, ಕಾಯಿಪಲ್ಲೆ, ಕುಸುಬೆ, ಎಣ್ಣೆ, ಉಳ್ಳಾಗಡ್ಡಿ, ಊಟದ ವಿಶೇಷತೆಯಾಗಿದೆ.

**ವಾಣಿಜ್ಯ ವ್ಯಾಪಾರ**

ಕಲಘಗಿಯ ವಾಣಿಜ್ಯ ವ್ಯಾಪಾರವು ಹಿಂದಿನಿಂಲೂ ಹುಬ್ಬಳ್ಳಿಯನ್ನೇ ಅವಲಂಭಿಸಿದ್ದು ಅದು ಇಂದಿನವರೆಗೂ ಕಾಣಬಹುದಾಗಿದೆ. ಮೊದಲಿಗೆ ಹುಬ್ಬಳ್ಳಿಯನ್ನು "ಛೋಟಾ ಮುಂಬೈ" ಎಂದು ಕರೆಯುತ್ತಿದ್ದರು ಆ ಮಾತು ಇಂದಿಗೂ ಅನ್ವಯಿಸುತ್ತದೆ. ಕ್ರಿ.ಶ. ೧೬೫೦-೬೦ ರ ಸುಮಾರಿಗೆ ಹುಬ್ಬಳ್ಳಿಯಲ್ಲಿ ತಯಾರಾದ ಮಸ್ಲಿನ್ ಬಟ್ಟೆಯು ಕಾರವಾರ ಬಂದರಿನ ಮೂಲಕ ಪರದೇಶಗಳಿಗೆ ದೊಡ್ಡ ಪ್ರಮಾಣದಲ್ಲಿ ರಫ್ತು ಆಗುತ್ತಿತ್ತು. ಇಲ್ಲಿ ಬೆಳೆಯುವ ಹತ್ತಿ ದೊಡ್ಡ ಪ್ರಮಾಣದಿಂದ ಕುಮಟಾ ಬಂದರಿನ ಮೂಲಕ ಪರದೇಶಗಳಿಗೆ ರಫ್ತಾಗುತ್ತಿತ್ತು. ಕಾರವಾರದ ಇಂಗ್ಲೀಷ ಕಂಪನಿಗೆ ಇಲ್ಲಿಂದ ವಸ್ತುಗಳನ್ನು ಸಂಗ್ರಹಿಸಲಾಗುತ್ತಿತ್ತು. ಮಧ್ಯಕಾಲದಲ್ಲಿ ಹುಬ್ಬಳ್ಳಿಯಿಂದ ಗೋವೆಗೆ ಹಸ್ತಿದಂತ ಗಂಧದ ಕೆತ್ತನೆ ವಸ್ತುಗಳು ರಫ್ತಾಗುತ್ತಿದ್ದರ[೧೨] ಅದರಲ್ಲಿ ಕಲಘಟಗಿಯ ವಸ್ತುಗಳು ಇದ್ದಿರಬಹುದು. ವಿಜಯನಗರ ಅರಸರು ಪೋರ್ಚುಗೀಸರೊಂದಿಗೆ ನಡೆಸುವ ವ್ಯಾಪಾರ ಈ ನಗರದ ಮೂಲಕ ಸಾಗುತ್ತಿತ್ತು. ಹಿಂದಿನಂತೆ ಇಂದಿಗೂ ಹುಬ್ಬಳ್ಳಿ ಚಿನ್ನ, ಬೆಳ್ಳಿ ವ್ಯಾಪಾರದ ಪ್ರಮುಖ ಕೇಂದ್ರವಾಗಿದೆ.

ಈ ತಾಲೂಕಿನಿಂದ ರಫ್ತಾಗುವ ವಸ್ತುಗಳಲ್ಲಿ ಹತ್ತಿ ಮತ್ತು ಸಿದ್ಧಪಡಿಸಿದ ಉಡುಪುಗಳು ಇಂಜನಿಯರಿಂಗ ವಸ್ತುಗಳು, ಯಂತ್ರಗಳು, ಶಸ್ತ್ರಚಿಕಿತ್ಸೆಗೆ ಉಪಯೋಗಿಸುವ ದಾರ, ಔಷದಿಗಳು, ಮೆಣಸಿನಕಾಯಿ, ಈರುಳ್ಳಿ, ಮುಂತಾದವುಗಳು ಬಹುಮುಖ್ಯವಾದವು ಕೊಬ್ಬರಿ ಎಣ್ಣೆ, ಮುಂಬೈ, ಮಂಗಳೂರಿನಿಂದ ಸೀಮೆಎಣ್ಣೆ, ಪೆಟ್ರೋಲ್, ಮುಂಬೈ, ಗೋವಾನಿಂದ ಅಡಿಕೆ, ಮೆಣಸು, ಯಾಲಕ್ಕಿ, ಸಿರ್ಸಿಯಿಂದ ಇನ್ನೂ ಇತ್ಯಾದಿಗಳಿಂದ ಹುಬ್ಬಳ್ಳಿಯ ಪ್ರಮುಖ ವ್ಯಾಪಾರ ಕೇಂದ್ರ ಸ್ಥಳವಾಗಿದೆ.

**ಸಾರಿಗೆ – ಸಂಪರ್ಕ**

ಬ್ರಿಟೀಷರ ಆಳ್ವಿಕೆ ಪ್ರಾರಂಭವಾದ ಈ ಭಾಗದಲ್ಲಿ ಸಂಚಾರ ಸೌಲಭ್ಯ ಸಂಪರ್ಕ ಸಾಧನಗಳು ಹೆಚ್ಚುತ್ತಾ ನಡೆದವು ಎನ್ನಬಹುದು. ೧೮೮೬-೮೭ರಲ್ಲಿ ಪ್ರಾರಂಭವಾದ ಪೂನಾ, ಬೆಂಗಳೂರು, ರೈಲುಮಾರ್ಗ ಈ

೧೧. ಎಂ.ಬಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೦೭ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬
೧೨. ಎಂ.ಬಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೪೦ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

ತಾಲೂಕಿನ ಸಂಪರ್ಕವನ್ನು ಇತರೆ ರಾಜ್ಯಗಳೊಂದಿಗೆ ಕಲ್ಪಿಸಿತು ೧೯೨೧-೨೨ರಲ್ಲಿ ಪ್ರಾರಂಭವಾದ ಸಾರ್ವಜನಿಕ ಮೋಟಾರು ವಾಹನಗಳು ಸಂಚಾರ ಸಂಪರ್ಕ ವ್ಯವಸ್ಥೆಯಲ್ಲಿ ಗಣನೀಯ ಬದಲಾವಣೆಗಳನ್ನು ತಂದಿತು. ಈ ತಾಲೂಕಿನಲ್ಲಿ ಹಾದು ಹೋಗುವ ಪ್ರಮುಖ ರಾಷ್ಟ್ರೀಯ ಹೆದ್ದಾರಿ ಹಾಗೆ ಹುಬ್ಬಳ್ಳಿ, ಕಾರವಾರ, ಸೋಲ್ಲಾಪುರ, ಗೋವಾ, ಮುಂತಾದವುಗಳು ಕಲಘಟಗಿಯ ಪ್ರದೇಶಕ್ಕೆ ಹುಬ್ಬಳ್ಳಿ ಹತ್ತಿರವಿರುವುದರಿಂದ ಸಾರಿಗೆ ಸಂಪರ್ಕ, ವಾಣಿಜ್ಯ ವ್ಯಾಪಾರ, ಇನ್ನೂ ಮುಂತಾದವುಗಳನ್ನು ಇಂದಿಗೂ ಹುಬ್ಬಳ್ಳಿಯನ್ನೇ ಅನುಸರಿಸುವುದಾಗಿದೆ. ದಕ್ಷಿಣ ಮಧ್ಯ ರೈಲ್ವೆವಲಯ ಪ್ರಮುಖವಾಗಿದ್ದು ಇಲ್ಲಿಂದ ಬೊಂಬಾಯಿ, ಗೋವಾ, ಬೆಂಗಳೂರು, ಸೊಲ್ಲಾಪುರ, ವಿಜಯವಾಡ ಮುಂತಾದ ಪ್ರದೇಶಗಳಿಗೆ ೧೯೦೭ರಲ್ಲಿ ಮೊಟ್ಟಮೊದಲಿಗೆ ಕಟ್ಟಲಾಯಿತು. ೧೯೫೩ರಿಂದ ತಾಲೂಕಿನಲ್ಲಿ ಸಾರಿಗೆ ವ್ಯವಸ್ಥೆ ಇದೆ.[೧೩] ಇದು ಇಂದಿಗೂ ಕಲಘಟಗಿಯ ತಾಲೂಕಿನ ಜನರು ಹುಬ್ಬಳ್ಳಿಯನ್ನೇ ಅವಲಂಭಿಸಿದ್ದಾರೆ.

### ಹಬ್ಬ, ಜಾತ್ರೆಗಳು

ಈ ಪ್ರದೇಶದ ಪ್ರಮುಖ ಹಬ್ಬಗಳಾದ ಯುಗಾದಿ, ದಸರಾ, ದೀಪಾವಳಿ ಮುಂತಾದವು ಅಲ್ಲದೇ ತಾಲೂಕಿನ ಗ್ರಾಮಾಂತರ ಪ್ರದೇಶದಲ್ಲಿ ತಮ್ಮದೇ ಆದ ಪೌರಾಣಿಕ ಮತ್ತು ಜಾನಪದ ಹಿನ್ನೆಲೆಯಿಂದ ಕೂಡಿದ ಗುಳ್ಳವ್ವ, ಜೋಕುಮಾರ, ಮಣ್ಣೆತ್ತಿನ ಅಮವಾಸ್ಯೆ, ನಾಗರಪಂಚಮಿ ಹಬ್ಬಗಳು ಬಹು ವಿಜೃಂಭಣೆಯಿಂದ ಆಚರಿಸಲ್ಪಡುತ್ತವೆ. ಕಲಘಟಗಿ ಪಟ್ಟಣದಲ್ಲಿ ನಡೆಯುವ ಸಾರ್ವಜನಿಕ ಗಣೇಶ ಉತ್ಸವದ ಮೆರವಣಿಗೆ. ರಂಗಪಂಚಮಿಯಂದು ಕಾಮ-ರತಿಯರ ಅಲಂಕೃತ ವಿಗ್ರಹಗಳ ಮೆರವಣಿಗೆ, ಮೊಹರಂ ಹಬ್ಬದಲ್ಲಿ ದೇವರ ಪಂಜಾಗಳ ಮೆರವಣಿಗೆ ಹುಲಿವೇಷ, ತನ್ನದೆಆದ ಭವ್ಯತೆಯಿಂದ ಕೂಡಿವೆ. ನಾಗರ ಪಂಚಮಿಯು ಈ ಭಾಗದಲ್ಲಿ ಗ್ರಾಮಾಂತರ ಪ್ರದೇಶದ ದೊಡ್ಡ ಹಬ್ಬವಾಗಿದೆ.

ಇಂತಹ ಹಬ್ಬ ಜಾತ್ರೆಗಳ ಸಂದರ್ಭದಲ್ಲಿ ಕಲಘಟಗಿಯ ಕಲಾವಿದರ ದೇವಿಯ ಮೂರ್ತಿಗಳು, ಕಾಮರತಿ ಶಿಲ್ಪಗಳು, ಗುಳ್ಳವ್ವ, ಜೋಕುಮಾರ. ಮಣ್ಣಿನ ಎತ್ತುಗಳು, ನಾಗರ ಪಂಚಮಿಯ ನಾಗಪ್ಪ ದೇವರು, ಮೊಹರಂ ಹಬ್ಬದಲ್ಲಿ ಹುಲಿವೇಷ ಹಾಕುವವರಿಗೆ ಮೈಗೆ ಬಣ್ಣಬಳಿಯಲಾಗುವುದು, ಹಾಗೆ ಕಲಘಟಗಿಯ ಕಲಾವಿದರ ತೊಟ್ಟಿಲು, ಪಲ್ಲಕ್ಕಿ, ಪಾಲಕೆ, ಸ್ಥಳೀಯ ಗ್ರಾಮದೇವಿಯ ಜಾತ್ರೆಯ ಸಂದರ್ಭದಲ್ಲಿ ಬಳಕೆಯಾಗುತ್ತವೆ. ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಕಲಘಟಗಿಯ ಕಲಾವಿದರ ಕಲಾಕೃತಿಗಳ ಬೇಡಿಕೆಯು ಹೆಚ್ಚಾಗಿರುತ್ತದೆ.[೧೪]

### ಜಾನಪದ

ಧಾರವಾಡ ಜಿಲ್ಲೆಯ ಕಲಘಟಗಿಯ ಶಿಷ್ಟಕಲೆಗೆ ದೊರತಷ್ಟೇ ಪ್ರೋತ್ಸಾಹ ಉತ್ತೇಜನಗಳು ಜಾನಪದ ಕಲೆಗಳಿಗೂ ದೊರೆತಿದ್ದು ಇಂದಿಗೂ ಜೀವಂತವಾಗಿ ಉಳಿಯುವಂತಾಗಿದೆ. ಜನರ ದೈನಂದಿನ ಬದುಕಿನೊಂದಿಗೆ ಕಲಾತ್ಮಕತೆಯನ್ನು ಕಂಡುಕೊಂಡಿರುವುದೇ ಜಾನಪದ ಕಲೆ ವ್ಯಾಪಕವಾಗಿ ಕಂಡುಬರಲು ಕಾರಣವಾಗಿದೆ. ವಾರದ ಸಂತೆಗಳಲ್ಲಿ, ವಾರ್ಷಿಕ ಜ್ರಾತೆಗಳಲ್ಲಿ ಮಾರಾಟಕ್ಕೆ ಬರುವ ಗೃಹಪಯೋಗಿ ವಸ್ತುಗಳಾದ ದನದ ಚಾಟಿಯಿಂದ ಹಿಡಿದು ಅನೇಕ ವಸ್ತುಗಳನ್ನು ವಿಶಿಷ್ಟ ವಿನ್ಯಾಸಗಳೊಂದಿಗೆ ವರ್ಣಮಯವಾಗಿ ರಚಿಸಿರುವುದನ್ನು ಕಾಣಬಹುದು. ಮರದ ಬಾಗಿಲುವಾಡಗಳು, ತೊಟ್ಟಿಲು, ಪೀಠೋಪಕರಣಗಳು, ಆಟಿಕೆ ಗೊಂಬೆಗಳು ಮುಂತಾದವು ಕಲಘಟಗಿಯ ಕಲಾವಿದರು ತಯಾರಿಸಿದವುಗಳಾಗಿವೆ. ಹಬ್ಬ ಹರಿದಿನಗಳಲ್ಲಿ ಊರು, ಕೇರಿ ಹಾಗೂ ಮನೆಗಳನ್ನು ಪೈಪೋಟಿಯಂತೆ ಸಿಂಗರಿಸುವಾಗ ಜಾನಪದ ಚಿತ್ರ, ಶಿಲ್ಪ, ರಂಗೋಲಿಗಳಲ್ಲಿ ಹೆಚ್ಚಿನ ಅಂಶಗಳನ್ನು ಕಾಣಬಹುದಾಗಿದೆ. ಮುಖ್ಯವಾಗಿ ಯುಗಾದಿಯಲ್ಲಿ ನೀರು ತುಂಬುವ ಪಾತ್ರೆಗಳ ಮೇಲೆ, ಬಸವಜಯಂತಿ ಹಾಗೂ ಕಾರ ಹುಣ್ಣಿಮೆಗಳಲ್ಲಿ ಕೊಟ್ಟಿಗೆ ಎತ್ತುಗಳಿಗೆ ಸುಳುವು ಹೂಗಳಿಂದ ಚಿತ್ರಿಸುತ್ತಾರೆ. ವಟಸಾವಿತ್ರಿ ವ್ರತದಲ್ಲಿ ಸತ್ಯವಾನ ಸಾವಿತ್ರಿ ಹಾಗೂ ಯಮ ಧರ್ಮರಾಯರ ಮಂಗಳಗೌರಿ ವ್ರತದಲ್ಲಿ ಪಾರ್ವತಿಯ, ನಾಗರ ಪಂಚಮಿಯಲ್ಲಿ ನಾಗನ ಸಿರಿಯಾಳ, ಷಷ್ಠಿಯಲ್ಲಿ ಸಿರಿಯಾಳ, ಚಂಗಳೆಯರು, ಕಾಮನ ಹಬ್ಬದಲ್ಲಿ ರತಿ ಮನ್ಮಥರ ಚಿತ್ರ ಅಥವಾ ಮೂರ್ತಿಗಳನ್ನು ರಚಿಸಿ

೧೩. ಎಂ.ಜಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೪೬ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬
೧೪. ಎಂ.ಜಿ ಪಾಟೀಲ್ : ಹುಬ್ಬಳ್ಳಿ ತಾಲೂಕ ದರ್ಶನ ಪು. ೩೯ ಐ.ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

ಪೂಜಿಸುತ್ತಾರೆ. ಮಣ್ಣೆತ್ತಿನ ಅಮವಾಸ್ಯೆಯಂದು ಮಣ್ಣಿನಲ್ಲಿ ಬಸವ, ಗುಳ್ಳವ್ವನ ಹಬ್ಬದಲ್ಲಿ ಕಂಬಗಳೋಪಾದಿಯ ರಚನೆಗಳು, ಗೋಕುಲಾಷ್ಟಮಿಯಲ್ಲಿ ಕೃಷ್ಣ ಬಲರಾಮರ ಮೂರ್ತಿಗಳು ನವರಾತ್ರಿಯ ಬೊಂಬೆಗಳು, ಸೀಗೆ ಹುಣ್ಣಿಮೆಯಲ್ಲಿ ಮಣ್ಣಿನ ಇಲ್ಲವೆ ಕಟ್ಟಿಗೆಯ 'ಸೀಗೆ' (ಗೌರಿ) ದೀಪಾವಳಿಯಲ್ಲಿ ಲಕ್ಷ್ಮೀಕಳಸ ಇತ್ಯಾದಿ ಶಿಲ್ಪಕಲಾಕೃತಿಗಳನ್ನು ಬನದ ಹುಣ್ಣಿಮೆಯಲ್ಲಿ ಗೋಮಯ ಮೂಡಿದೆ.[೧೫] ಗೋಡೆಗಳ ಮೇಲೆ ಸುಣ್ಣದಿಂದ ರಥ, ನಕ್ಷತ್ರ, ಪಶುಪಕ್ಷಿ, ಗಿಡಮರಗಳ ಚಿತ್ರ, ರಥಸಪ್ತಮಿಯಲ್ಲಿ ಹಲಗೆಯ ಮೇಲೆ ರಕ್ತಚಂದನದಿಂದ ಸಪ್ತಾಶ್ವರೂಢ ಸೂರ್ಯನ ಚಿತ್ರ, ಭರತ ಹುಣ್ಣಿವೆ ಯಲ್ಲಿ ಚುಕ್ಕಿ, ಸುಳುವು ಹೊಳವು ಹಾಗೂ ತೇರಿನ ಚಿತ್ರ ಇತ್ಯಾದಿಗಳ ರಚನೆಯಲ್ಲಿ ಜಾನಪದ ಚಿತ್ರರಚನೆಯ ಅಂಶಗಳನ್ನು ಕಾಣಬಹುದು.

ಮಣ್ಣಿನ ಗಣಪತಿ ಮತ್ತು ಜೋಕುಮಾರ ಮೂರ್ತಿಗಳ ಹಾಗೂ ಕಾಮನ ಹಬ್ಬದಲ್ಲಿ ಕಾಮನ ಚಿತ್ರ ರಚನೆಗಳು ಜಿಲ್ಲೆಯ ಜಾನಪದ ಕಲೆಯ ವಿಶಿಷ್ಟ ಕೊಡುಗೆಗಳಾಗಿವೆ. ಜೋಕುಮಾರ, ಹೋಳಿ, ಹಗರಣ (ಪಗರಣ) ಇತ್ಯಾದಿ ಹಬ್ಬಗಳ ಆಚರಣೆ ಹಾಗೂ ಆ ಸಂದರ್ಭದಲ್ಲಿ ಹಾಡುವ ಜಾನಪದ ಗೀತೆಗಳ ಬಗ್ಗೆ ಸಂಗ್ರಹಣೆ ಅಧ್ಯಯನಗಳು ನಡೆದಿವೆ.

ಮದುವೆಯ ಕಾಲದಲ್ಲಿ ಹಾಕುವ 'ಹಾಸಕ್ಕಿ' ಯ ಚಿತ್ರ, ಹಚ್ಚೆ, ರಂಗೋಲಿ ಇತ್ಯಾದಿ ಧಾರ್ಮಿಕ ಸಂಪರ್ಕ ಹೊಂದಿದ ಕಲೆಗಳು ಜಿಲ್ಲೆಯಲ್ಲಿ ಜೀವಂತವಿದೆ.[೧೬] ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಜಿಲ್ಲೆಯ ಕಲಘಟಗಿ ತಾಲೂಕು ಪಟ್ಟಣದಲ್ಲಿ ಸಂದರ್ಭಕ್ಕೆ ತಕ್ಕಂತೆ ವಿವಿಧ ಮಾದರಿಯ ಗೊಂಬೆಗಳು ಅಂದರೆ ಗಣೇಶ ಚತುರ್ಥಿಯಂದು ಗಣಪತಿ, ಮಣ್ಣೆತ್ತಿನ ಅಮವಾಸ್ಯೆಗೆ ಬಸವಣ್ಣ, ಜೋಕುಮಾರ, ಸೀಗವ್ವ, ನಾಗರ ಪಂಚಮಿಯ ನಾಗಪ್ಪ, ದೇವರುಗಳಲ್ಲದೆ ವಿವಿಧ ರೀತಿಯ ಪೀಠೋಪಕರಣಗಳು ತಯಾರಾಗುತ್ತವೆ.

**ಕಲೆ ಸಾಹಿತ್ಯ**

ಇಂದು ಧಾರವಾಡ ಜಿಲ್ಲೆಯಲ್ಲಿ ಹಿಂದುಸ್ಥಾನಿ ಸಂಗೀತ ಪ್ರಮುಖವಾಗಿದೆಯಾದರೂ, ಈ ಶತಮಾನದ ಆರಂಭದಲ್ಲೂ ಕರ್ನಾಟಕ ಸಂಗೀತವೇ ಇಲ್ಲಿ ಬಳಕೆಯಲ್ಲಿತ್ತು. ಅಬ್ದುಲ್ ಕರೀಂಖಾನ್. ಪಂಚಾಕ್ಷರಿ ಗವಾಯಿ, ಗಂಗೂಬಾಯಿ ಹಾನಗಲ್, ಬಸವರಾಜ ರಾಜಗುರು, ಮಹಾಂತಸ್ವಾಮಿ ಇನ್ನೂ ಮುಂತಾದ ಕಲಾವಿದರಾಗಿದ್ದಾರೆ. ೧೮೮೦ ರಲ್ಲಿ ಧಾರವಾಡದಲ್ಲಿ ಗುರುನಾಥರಾವ್ ಪಾಠಕ ಅವರಿಂದ "ಕರ್ನಾಟಕ ಸಂಗೀತ ಶಾಲೆ" ಸ್ಥಾಪಿತವಾಯಿತು. ಇಲ್ಲಿ ತಂಜಾವೂರಿನಲ್ಲಿ ಕಲಿತ ಶ್ರೀನಿವಾಸರಾವ ಚಿಮ್ಮಲಗಿ ಕರ್ನಾಟಕ ಸಂಗೀತವನ್ನು ಭೋಧಿಸುತ್ತಿದ್ದರು.[೧೭] ಹಾಗೇ ಹುಬ್ಬಳ್ಳಿಯಲ್ಲಿ ಕಂಪನಿ ನಾಟಕಗಳ ಭರಾಟೆ ಜೋರಾಗಿತ್ತು. ಅನೇಕ ಹವ್ಯಾಸಿ ಕಲಾ ತಂಡಗಳು ಹುಬ್ಬಳ್ಳಿಯಲ್ಲಿಯೇ ನೆಲೆಸಿರುವ ಶ್ರೀಮತಿ ಗಂಗೂಬಾಯಿ ಹಾನಗಲ್ ಮುಂತಾದವರಾಗಿದ್ದಾರೆ.

ಕಲಘಟಗಿಯ ತಾಲೂಕು ಹಲವು ಹತ್ತು ಜನಪದ ಕಲೆಗಳಿಗೆ ಹೆಸರಾಗಿದೆ. ದೊಡ್ಡಾಟ, ಸಣ್ಣಾಟ, ಬಯಲಾಟ, ಗೀಗೀಪದ, ಕರಡಿಮಜಲು, ಡೊಳ್ಳು ಕುಣಿತ, ಲಾವಣಿ, ಪಾರಿಜಾತ ಮೇಳ, ಹಂತೀಪದ, ಇವು ಇಲ್ಲಿನ ಜನಪದ ಕಲೆಗಳಾಗಿವೆ ಇವು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಗ್ರಾಮೀಣ ಪರಿಸರಕ್ಕೆ ಹೊಂದಿಕೊಳ್ಳುವಂತೆ ಗುಳಗುಂಪಿ, ಕುದುರೆ ಸವಾರಿ, ಗಿಡಮಂಗನಾಟ, ಮೊದಲಾದ ಕ್ರೀಡೆಗಳು ಇಲ್ಲಿದ್ದು ಇತ್ತೀಚಿಗೆ ಇವು ಕಡಿಮೆಯಾಗುತ್ತಿವೆ. ಆಧುನಿಕ ಕ್ರೀಡೆಗಳಿಗೆ ಹೆಚ್ಚು ಪ್ರೋತ್ಸಾಹ ದೊರೆಯುತ್ತಿದೆ. ಇಂದಿನ ದಿನಮಾನಗಳಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಆಧುನಿಕ ಕ್ರೀಡೆಯಾಗಿ ಕ್ರಿಕೆಟ್, ಫುಟ್‌ಬಾಲ್, ಹಾಕಿ, ವಾಲಿಬಾಲ್, ಚೆಸ್, ಇತ್ಯಾದಿ ಕ್ರೀಡೆಗಳು ಗ್ರಾಮೀಣ ಪ್ರದೇಶಗಳಲ್ಲಿ ನೆಲೆಯೂರಿ ಗ್ರಾಮೀಣ ಆಟಗಳನ್ನು ಬದಿಗೊತ್ತಿವೆ. ಕಲಘಟಗಿಯಲ್ಲಿ ಮೊದಲಿನಿಂದಲೂ ಸಂಗೀತ, ನಾಟಕ, ಕಲೆಗಳಿಗೆ ಪ್ರೋತ್ಸಾಹ ದೊರೆತಿದೆ. ಹಾಗೇ ಬಯಲು

೧೫. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೭೮೪ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೬. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೭೮೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೭. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೭೬೨ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

ನಾಟಕಗಳ ಭರಾಟೆ ಜೋರಾಗಿತ್ತು. ಸ್ಥಳೀಯವಾಗಿ ಅನೇಕ ಹವ್ಯಾಸಿ ಕಲಾವಿದರ ತಂಡಗಳಿಂದ ಇಲ್ಲಿ ನಾಟಕವಾಡುವುದು ಇದರಲ್ಲಿ ಮುಖ್ಯವಾಗಿ ಕಲಘಟಗಿಯ ತೊಟ್ಟಿಲು ಕಲಾವಿದರಾದ ಛೀರಾಜೆ ಸಾವುಕಾರ್‌ರವರು ತೊಟ್ಟಿಲು ತಯಾರಿಕೆಯೊಂದಿಗೆ ಮಲ್ಲಿಕಾರ್ಜುನ ನಾಟಕ ಸಂಘದಲ್ಲಿ ಪಾತ್ರ ಮಾಡುತ್ತಾ ನಾಟಕ ಬರದೆಯನ್ನು ಸಹ ಬರೆಯುತ್ತಿದ್ದರು. ಇವರ ನಾಟಕಗಳು "ಗರುಡ ಮೆಚ್ಚಿದ ಸದಾಶಿವ" "ಹಲಗೇರಿ ಚೆಟ್ಟೆಪ್ಪನ ಕಥೆ" ಮತ್ತು ಇವರ ಪ್ರಸಿದ್ಧ ನಾಟಕ 'ಬಿ.ಎ' ನಾಟಕವಾಗಿದೆ. ಕಲಘಟಗಿಯಲ್ಲಿ ನಾಟಕದ ಒಂದು ಸಂಘವೇ ಇತ್ತು. ಆದರೆ ಮೊದಲಿನಿದಂಲೂ ಇಲ್ಲಿ ಸಂಗೀತಗಾರರ ಒಂದು ಓಣಿಯೇ ಇದೆ. ಇಲ್ಲಿ ಇಂದಿಗೂ ಗಂಗಾಧರ ಭಟ್ಟ ಜೋಶಿಯಂಬುವರು ಸಂಗೀತ ಪಾಠ ಶಾಲೆ ಇದ್ದು ಇದು ಇಂದು ಕಾಶೀನಾಥ ಭಟ್ಟ ಜೋಶಿಯವರು ನಡೆಸುತ್ತಾರೆ. ಇಲ್ಲಿಯ ಕೃಷ್ಣಾ ಹವಳೇಪ್ಪನವರು ಎಂಬ ಸಂಗೀತಗಾರರು ಇದ್ದು ಖ್ಯಾತ ಕಲಾವಿದ ಪಂಡಿತ ಭೀಮ್‌ಸೇನ್‌ಜೋಶಿ ಅವರೊಂದಿಗೆ ಕೂಡಿ ಕಲಿತಿರುವ ವಿವರಗಳು ದೊರೆಯುತ್ತವೆ.

ಈ ಭಾಗದ ಕಲಾವಿದರಾಗಿರುವ ಹುಬ್ಬಳ್ಳಿಯಲ್ಲಿ ನೆಲೆಸಿರುವ ಶ್ರೀಮತಿ ಗಂಗೂಬಾಯಿ ಹಾನಗಲ್ ಧಾರವಾಡದ ಮಲ್ಲಿಕಾರ್ಜುನ ಮನ್ಸೂರ, ಬಸವರಾಜ ರಾಜಗುರು, ಹುಬ್ಬಳ್ಳಿಯೊಂದಿಗೆ ಅನೇಕ ರೀತಿಯಲ್ಲಿ ಸಂಪರ್ಕ ಪಡೆದಿರುತ್ತಾರೆ. ಲಲಿತಕಲೆಯನ್ನು ಜನಪ್ರೀಯಗೊಳಿಸಲು ವಿಜಯ ಮಹಾಂತೇಶ ಚಿತ್ರಕಲಾ ಮಹಾವಿದ್ಯಾಲಯ ಮತ್ತು ಹುಬ್ಬಳ್ಳಿ ಧಾರವಾಡದಲ್ಲಿ ಹಲವಾರು ಚಿತ್ರಕಲಾವಿದರು ಇರುತ್ತಾರೆ. ಗಾಯಿತ್ರಿ ವಿದ್ಯಾಲಯ ಇವು ಕಲಾಸೇವೆಗೆ ಹೆಸರಾಗಿವೆ. ಇತ್ತೀಚಿಗೆ ಹುಬ್ಬಳ್ಳಿಯಲ್ಲಿ ರಂಗ ತರಬೇತಿಯ ಶಾಲೆಯನ್ನು ಪ್ರಾರಂಭಿಸಲಾಗಿದೆ.

**ಚಿತ್ರಕಲೆ**

ಕರ್ನಾಟಕ ಚಿತ್ರಕಲಾ ಕ್ಷೇತ್ರಕ್ಕೆ ಧಾರವಾಡ ಜಿಲ್ಲೆಯೂ ತನ್ನ ಪಾಲಿನ ಕಾಣಿಕೆಯನ್ನು ಸಲ್ಲಿಸಿದೆ ಆದರೆ ಜಿಲ್ಲೆಯ ಈಶಾನ್ಯ ದಿಕ್ಕಿನಲ್ಲಿ ಜಿಲ್ಲೆಗೆ ಹೊಂದಿಕೊಂಡಂತೇ ಇರುವ ರಾಯಚೂರು ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ವ್ಯಾಪಕವಾಗಿ ಕಂಡುಬರುವ ಆದಿಮಾನವನ ಇತಿಹಾಸ ಪೂರ್ವಕಾಲದ ಗುಹಾಚಿತ್ರಗಳು ಧಾರವಾಡ ಜಿಲ್ಲೆಯಲ್ಲಿ ಕಂಡುಬರದೆ ಇರುವುದು ಸೂಜಿಗವಾಗಿದೆ. ಐತಿಹಾಸಿಕ ಕಾಲದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ನೂರಾರು ಶಿಲ್ಪಗಳು ದೇವಾಲಯಗಳು ಕಂಡುಬಂದರೂ ಈ ದೇವಾಲಯಗಳ ರಚನೆಯ ವೈಶಿಷ್ಟ್ಯದಿಂದಾಗಿ ಅವುಗಳಲ್ಲಿ ಚಿತ್ರಕಲೆ ಕಂಡುಬರುವದಿಲ್ಲ ಆದರೂ ಈ ಕಾಲದಲ್ಲಿ ಚಿತ್ರ ರಚಿಸುವ ಕಲಾವಿದರು ಇದ್ದಿರಬಹುದು. ಅಂದು ಧಾರವಾಡ ಜಿಲ್ಲೆಗೆ ಸಂಬಂಧಿಸಿದ ಕುರ್ತುಕೋಟೆಯ ಕ್ರಿ.ಶ. ೧೦೮೨ ರ ಶಾಸನವೊಂದು ಬಮ್ಮನ ಮಗ ಐಯ್ಯಣ ಎಂಬಾತ ಮರ, ಇಟ್ಟಿಗೆ, ದಂತ ಹಾಗೂ ಚಿತ್ರಕಲೆಗಳಲ್ಲಿ ಕಮ್ಮಾರ ವಿದ್ಯೆಯಲ್ಲಿ ವಿಶ್ವಕರ್ಮನಿಗಿಂತಲೂ ಮಿಗಿಲು ಎಂದು ವರ್ಣಿಸುತ್ತದೆ. ಜಿಲ್ಲೆಯು ಪ್ರಸಿದ್ಧ ಕವಿಗಳು ತಮ್ಮ ಕಾವ್ಯಗಳಲ್ಲಿ ಚಿತ್ರಕಲೆಯನ್ನು ಕುರಿತು ಕೆಲವು ಸಂಗತಿಗಳನ್ನು ತಿಳಿಸುತ್ತಾರೆ. ಪಂಪನ "ಆದಿ ಪುರಾಣ" ದ ಭವಾಳಿಯ ಕಥೆಯೊಂದರಲ್ಲಿ ಪತಿ-ಪತ್ನಿಯರು ತಮ್ಮ ಹಿಂದಿನ ಜನ್ಮದ ಕಥೆಯನ್ನು ಚಿತ್ರರೂಪದಲ್ಲಿ ಬರೆದು ಆ ಮೂಲಕ ಮರುಜನ್ಮದಲ್ಲೂ ಒಂದುಗೂಡಿದ ಕಥೆಯಲ್ಲಿ ಚಿತ್ರಪಟ ಹಾಗೂ ಅದರಲ್ಲಿದ್ದ ವಸ್ತು ವಿಷಯ ನಿರ್ವಹಣಾ ಕೌಶಲ್ಯ ಇತ್ಯಾದಿಗಳ ಬಗ್ಗೆ ವಿಸ್ತಾರವಾದ ಸಂಗತಿಗಳು ತಿಳಿದು ಬರುತ್ತವೆ. ಅಂತೆಯೇ ಕನಕದಾಸರ "ಶೃಂಗಾರ ತರಂಗಿಣಿ"ಯಲ್ಲಿಯೂ ಅರಮನೆ ಹಾಗೂ ಮನೆಗಳ ಭಿತ್ತಿಗಳಲ್ಲಿ ಮೇಲೆ ಕಟ್ಟಿದ ಧ್ವಜಗಳಲ್ಲಿ ಬರೆದಿದ್ದ ಚಿತ್ರಗಳ ಬಗ್ಗೆ ವಿವರಿಸಿರುವವುದು ಅಂದಿನ ಸಮಕಾಲೀನ ಚಿತ್ರಕಲೆಯನ್ನು ಕುರಿತು ಹೇಳಿದಂತಿದೆ. ಅಲ್ಲದೆ ಒಂದು ಅಧ್ಯಾಯದ ತುಂಬ ನಾಯಕಿಯ ಸ್ನೇಹಿತೆ ರಚಿಸಿದ ನೂರಾರು ಭಾವಚಿತ್ರಗಳ ರಚನೆಯ ವರ್ಣನೆಯ ಸಂದರ್ಭದಲ್ಲಿ ಚಿತ್ರಕಲೆಯ ಹಲವಾರು ಪಾರಿಭಾಷಿಕ ಪದಗಳು ದೊರೆಯುತ್ತವೆ. ಜಿಲ್ಲೆಯ ವಚನಕಾರರು ಸಂದರ್ಭನುಸಾರವಾಗಿ ಚಿತ್ರಕಲೆಯನ್ನು ಬಳಸಿಕೊಂಡಿದ್ದು ಅಂಬಿಗರ ಚೌಡಯ್ಯನ ವಚನವೊಂದರಲ್ಲಿ ಕುಂಚದ ಪರೀಕ್ಷೆಯನ್ನು ಮಾನವನ ಏಕಾಗ್ರತೆಗೆ ಹೋಲಿಸಿರುವುದು ಕುತೂಹಲಕಾರಿಯಾಗಿದೆ.[೧೮] ಜಿಲ್ಲೆಯ ಹಲವಾರು ಶೈವ ಮಠಗಳಲ್ಲಿ "ಉದ್ಧರಣೆ ವಚನ"ದ ಕಟ್ಟುಗಳಿದ್ದು ಇವು ಹಲವಾರು ಧಾರ್ಮಿಕ ಚಿತ್ರಗಳಿಂದ ತುಂಬಿದ ಸುರುಳಿಯಾಕಾರದ ಚಿತ್ರ ಪಟಗಳಂತಿರುತ್ತವೆ. ಕನ್ನಡ ಅಧ್ಯಯನ ಪೀಠದಲ್ಲಿರುವ ಸುಮಾರು ಎರಡು ಶತಮಾನ ಹಳೆಯದಾದ ಉದ್ಧರಣೆ ವಚನದ ಕಟ್ಟಿನಲ್ಲಿರುವ ಚಿತ್ರಗಳು ಚಿತ್ರಗಾರಿಕೆಯ ದೃಷ್ಟಿಯಿಂದ ಉತ್ತಮ ಉದಾಹರಣೆಗಳಾಗಿವೆ.[೧೯]

---

೧೮. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೨೨೩ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೧೯. -ಅದೇ- ಪು. ೨೨೪

ದೇವಾಲಯ, ಅರಮನೆ ಹಾಗೂ ವಾಸದ ಮನೆಗಳಲ್ಲಿ ಗೋಡೆಗಳ ಮೇಲೆ ಚಿತ್ರ ರಚಿಸುವ ಸಂಪ್ರದಾಯ ಹಿಂದಿನ ಕಾಲದಲ್ಲಿದ್ದು ಧಾರವಾಡ ಜಿಲ್ಲೆಯಲ್ಲಿಯೂ ಕೆಲವು ಗುರುತುಗಳು ದೊರೆಯುತ್ತವೆ. ಧಾರವಾಡದ ಬಳಿಯ ಅಮ್ಮಿನಭಾವಿಯಲ್ಲಿರುವ ಹಿರೇಮಠದಲ್ಲಿ ಮರ ಹಾಗೂ ತಗಡಿನ ಮೇಲೆ ಹಾಗೂ ಭಿತ್ತಿಯಲ್ಲಿ ಶೈವ ಧಾರ್ಮಿಕ ಪರವಾದ ಚಿತ್ರಗಳಲ್ಲದೆ ಪ್ರಾಣಿ, ಪಕ್ಷಿ, ಮುಂತಾದ ಚಿತ್ರಗಳು ೧೮ನೆಯ ಶತಮಾನದವುಗಳಾಗಿವೆ.[೨೦] ಇಂದು ಕಲಘಟಗಿಯಲ್ಲಿ ರಚನೆಯಾಗುವ ಚಿತ್ರಗಳು ಹೆಚ್ಚಾಗಿ ಮರ ಮಾಧ್ಯಮದ ಮೇಲೆ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಅಂತೆಯೇ ಪೌರಾಣಿಕ ದೇವಾನುದೇವತೆಗಳು, ದಶಾವತಾರಗಳು ಇತ್ಯಾದಿಗಳೊಂದಿಗೆ ಐತಿಹಾಸಿಕ ಯುದ್ಧವೊಂದರ ವಿಸ್ತಾರವಾದ ಭಿತ್ತಿಚಿತ್ರವನ್ನು ಅಂದು ಧಾರವಾಡ ಜಿಲ್ಲೆಗೆ ಸಂಬಂಧಪಟ್ಟ ನರಗುಂದದ ಬಾಬಾಸಾಹೇಬನ ಅರಮನೆಯಲ್ಲಿ ಕಾಣಬಹುದು. ಇವುಗಳ ರಚನೆಯ ಕಾಲ ೧೮ನೇಯ ಶತಮಾನದವುಗಳಾಗಿವೆ.[೨೧] ಇಲ್ಲಿ ರಚಿತವಾದ ವಸ್ತು ವಿಷಯಗಳು ಕಲಘಟಗಿಯ ಕಲಾವಿದರಲ್ಲಿ ಮುಖ್ಯವಾಗಿ ದೇವಿಯ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ದೃಶ್ಯಗಳು ಕಾಣಬರುತ್ತವೆ. ಹಾಗೇ ಪೌರಾಣಿಕ ದೇವತೆಗಳ ಚಿತ್ರಗಳು ದುರುಗಮುರುಗಿಯವರ ಪೆಟ್ಟಿಗೆ ಮೇಲೆ ಮೂಡಿರುವುದು ಅಲ್ಲದೇ ಯುದ್ಧದ ಸನ್ನಿವೇಶ ಪ್ರಭಾವಳಿಯ ಹಲಗೆಯ ಮೇಲೆ ಕಾಣಬಹುದಾಗಿದೆ. ಇದೇ ಊರಿನ ಶ್ರೀ ಗುಂಡಪ್ಪ, ಹಸಬಿಯವರ ಮನೆಯಲ್ಲಿಯೂ ಕೆಲವು ಸಾಂಸಾರಿಕ ದೃಶ್ಯಗಳ ಚಿತ್ರಣ ಇರುವುದಾಗಿ ಶಿವರಾಮ ಕಾರಂತರು ತಿಳಿಸುತ್ತಾರೆ. ವೆಂಕಟರಮಣ ದೇವಾಲಯದಲ್ಲೂ ಚಿತ್ರಗಳ ಕುರುಹುಗಳು ಉಳಿದಿವೆ.[೨೨] ಧಾರವಾಡ ತಾಲೂಕಿನ ಉಪ್ಪಿನ ಬೇಟಗೇರಿಯ ಎಲ್ಲಮ್ಮ ದೇವಸ್ಥಾನದಲ್ಲಿ ಭಿತ್ತಿಚಿತ್ರಗಳನ್ನು ಕಾಣಬಹುದು. ಪ್ರಾಣಿಪಕ್ಷಿಗಳ ಆಕೃತಿಗಳು ಕೆಲವು ಡಿಜೈನ್‌ಗಳನ್ನೂ ಗುರುತಿಸಬಹುದು ಇದಲ್ಲದೆ ಸವಣೂರಿನ ಅರಮನೆಯಲ್ಲಿಯೂ ಸುಂದರ ಪುಷ್ಪ, ಜಾಮೀತಿ ವಿನ್ಯಾಸದ ಚಿತ್ರಗಳು ಇವೆ. ಕಲಘಟಗಿಯೂ ಅರಣ್ಯ ಪ್ರದೇಶವಾದ್ದರಿಂದ ಇಲ್ಲಿಯೂ ಹಲವಾರು ಪ್ರಾಣಿ ಪಕ್ಷಿಗಳು ನೈಸರ್ಗಿಕವಾಗಿ ಹೆಚ್ಚಾಗಿರುವುದು ಸಹಜವಾಗಿದೆ. ಇಂತಹ ಪ್ರಾಣಿ ಪಕ್ಷಿಗಳು ಕಲಘಟಗಿಯ ಕಲಾವಿದರ ಕಲಾಕೃತಿಗಳಲ್ಲಿ ಮೂಡುವುದು ಸಹಜವಾಗಿದೆ. ಇಂದು ಧಾರವಾಡ ಜಿಲ್ಲೆಯಲ್ಲಿ ನವಲಗುಂದ ಮಠದಲ್ಲಿ ಮೂಡಿಬಂದಿರುವ ಭಿತ್ತಿಚಿತ್ರಗಳು ಕಳೆದ ಶತಮಾನದ ಮಧ್ಯಭಾಗದವು ಸಾಂಪ್ರದಾಯಿಕ ಶೈಲಿಯ ಚಿತ್ರಗಳು ಹೀಗೆ ಮಠಮಂದಿರಗಳಲ್ಲಿ ಕಾಣಸಿಗುತ್ತವೆ. ಚಿತ್ರಪಟಗಳ ಕಥೆ ಹೇಳುವ ಪ್ರಾಸ್ತಾಪ ಕಾವ್ಯಗಳಲಿದ್ದು ಧಾರವಾಡದಲ್ಲಿ 'ಚಿತ್ರಕಥೆ' ಗಳ ಪ್ರಸ್ತಾಪ ಎರಡು ಶತಮಾನಗಳ ಹಿಂದೆ ದಾಖಲೆಯಾಗಿದೆ. ಇ. ಮೂರ್ ಎಂಬಾತ ಧಾರವಾಡದಿಂದ (೧೭೯೧ ರಲ್ಲಿ) "ಮಿಲಿಟರಿ ಆಪರೇಶನ್ಸ್ ಇನ್ ಬ್ರಿಟೀಷ್ ಕರ್ನಾಟಕ" ಎಂಬ ವಿಷಯ ಕುರಿತು ಬರೆದ ಪುಸ್ತಕದಲ್ಲಿ ಚಿತ್ರಪಟ ಸುರುಳಿಗಳ ಬಗ್ಗೆ ಹೇಳಿದ್ದಾನೆ.[೨೩]

### ವೃತ್ತಿಯ ಮೂಲ ಕಲೆ

ಮುಖ್ಯವಾಗಿ ಕಲಘಟಗಿಯ ಪ್ರದೇಶದಲ್ಲಿ ಬಡಿಗೇರ, ಕುಟುಂಬಗಳು ಮತ್ತು ಸಾವುಕಾರ ಕುಟುಂಬಗಳು ತೊಟ್ಟಿಲು, ಸೋಫಾ, ಟೀಪಾಯಿ, ತೂಗುಮಂಚ, ಪಲ್ಲಕ್ಕಿ, ಪಾಲಿಕೆ, ಗ್ರಾಮದೇವತೆಯ ಮೂರ್ತಿಶಿಲ್ಪಗಳು ಇತ್ಯಾದಿಗಳನ್ನು ವೃತ್ತಿಯ ಮೂಲವಾಗಿ ಬೆಳೆಸುತ್ತಾ ಬಂದಿದ್ದಾರೆ. ಅಲ್ಲದೆ ಇನ್ನೂ ಅನೇಕ ಸಮುದಾಯಗಳು ಇಲ್ಲಿ ಮಡಕೆ ತಯಾರಿಕೆ, ಹಣತೆ, ಓಲೆ ಮತ್ತು ಬಿದಿರು ಬುಟ್ಟಿ ಹೆಣೆಯುವುದು, ಚಾಪೆ ಹೆಣೆಯುವುದು, ಇಟ್ಟಿಗೆ ತಯಾರಿಸುವುದು, ಭತ್ತದ ಗಿರಣಿ ಮುಂತಾದವುಗಳಾಗಿವೆ. ಸಮೀಪದ ಹುಬ್ಬಳ್ಳಿಯಲ್ಲಿ ಜಿನಗಾರ ಓಣಿಯಲ್ಲಿ ಬಟ್ಟೆಗಳಿಗೆ ವಿವಿಧ ರೀತಿಯ ಬಣ್ಣಹಾಕುವುದು ಮಾಸಿದ ಸೀರೆಗಳಿಗೆ ಪುನಃ ಬಣ್ಣ ಹಾಕಲಾಗುತ್ತದೆ. ಧಾರವಾಡ, ಜಿಲ್ಲೆಯ ನವಲಗುಂದ ಜಮಖಾನೆ ತಯಾರಿಕೆಯ ಪ್ರಸಿದ್ಧ ಸ್ಥಳವಾಗಿದೆ.[೨೪] ಹಾಗೇ ಹತ್ತಿ ಬಟ್ಟೆಯ ಸೀರೆಗಳು ಉತ್ತರ ಕರ್ನಾಟಕದಲ್ಲಿ ಹತ್ತಿ ಪ್ರಮುಖ ಬೆಳೆಯಾದ್ದರಿಂದ ಇಲ್ಲಿ ಕೈಮಗ್ಗಗಳು ಪ್ರಾರಂಭಗೊಂಡಿರುತ್ತವೆ. ಹುಬ್ಬಳ್ಳಿ,

---

೨೦. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೫೩ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

೨೧. -ಅದೇ- ಪು. ೫೨

೨೨. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೭೭೪ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೨೩. -ಅದೇ- ಪು. ೭೭೪

೨೪. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೨೫೮ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

ಧಾರವಾಡ, ಉಪ್ಪಿನ ಬೇಟಗೇರಿ[೨೫] ಹಾಗೆ ಇದರಂತೆ ಕಲಘಟಗಿಯ ಕಲೆಯೂ ಆಗಿದೆ. ಆದರೆ ಇಲ್ಲಿ ಪ್ರಮುಖವಾಗಿ ಪೀಠೋಪಕರಣಗಳು ಮುಖ್ಯವಾಗಿ ಕಾಣಿಸಿಕೊಳ್ಳುತ್ತವೆ. ಬ್ರಿಟೀಷರ ಆಗಮನದ ಪೂರ್ವದಲ್ಲಿ ಇಡೀ ದೇಶದಲ್ಲಿ ಇದ್ದಂತೆ ಧಾರವಾಡ ಜಿಲ್ಲೆಯಲ್ಲೂ ಮನೆಮನೆಯಲ್ಲೂ ಹೆಂಗಸರು ನೇಯ್ಗೆಯನ್ನು ನೂಲುತ್ತಿದ್ದರು ಒಬ್ಬ ದಿನವಿಡೀ ನೂಲುವ ವ್ಯಕ್ತಿಗೆ ಹೊಲದಲ್ಲಿಯ ಕೂಲಿಯಷ್ಟೇ ಕೂಲಿ ಸಿಗುತ್ತಿತ್ತು. ಹೀಗಾಗಿ ಹೆಂಗಸರು ತಮ್ಮದೇ ಆದ ದುಡಿಮೆಯಿಂದ ಸಾಮಾಜಿಕ ಸ್ಥಾನಮಾನ ಹೊಂದಿದ್ದರು ಹತ್ತಿ ಬೆಳೆಯುವ ನಾಡಾದ ಧಾರವಾಡ ಜಿಲ್ಲೆ ನೂಲುವ ಮತ್ತು ನೇಯ್ಗೆಯ ಉದ್ಯೋಗಕ್ಕೆ ಖ್ಯಾತವಾಗಿತ್ತು. ರೇಷ್ಮೆ ಸೀರೆ, ಖಣ, ರುಮಾಲುಗಳಿಗೆ ವಿಶಿಷ್ಟ ದೇಶಿಯ ಮಾರುಕಟ್ಟೆ ಇದ್ದುದರಿಂದ ನೇಯ್ಗೆ ಪೂರ್ತಿ ಕಣ್ಮರೆ ಆಗಲಿಲ್ಲ ಅಣ್ಣಿಗೇರಿ, ಉಪ್ಪಿನ ಬೇಟಗೇರಿ, ಹುಬ್ಬಳ್ಳಿ, ನವಲಗುಂದ, ಸೀರೆಗಳ ಉತ್ಪನ್ನದಲ್ಲಿ ಪ್ರಸಿದ್ಧವೆಂದು ೧೮೮೪ರ ಗ್ಯಾಸೆಟಿಯರ ಹೇಳಿದೆ. ನೇಕಾರಿಕೆಗೆ ಆಗ ಯಂತ್ರದಿಂದ ಬರುವ ಅಗ್ಗದ ಮುಂಬೈಯ ನೂಲು ೧೮೭೨ರಲ್ಲಿ ಇವರ ಕೈಗೆ ಸಿಕ್ಕು ತಮ್ಮ ವೃತ್ತಿಯಲ್ಲಿ ಕುದುರಿದರು ಇದು ಅಲ್ಪ ಕಾಲದ ಪರಿಸ್ಥಿತಿ ೧೮೭೬ರ ಕ್ಷಾಮ ಅವರನ್ನು ಹಿಂಡಿ ಹಿಪ್ಪೆಮಾಡಿತು. ನಂತರ ರೇಷ್ಮೆ ಸಿಗದೆ ಉತ್ಪನ್ನವಾದ ಬಟ್ಟೆ ಕೊಳ್ಳುವುರಿಲ್ಲದೆ ಹೊಟ್ಟೆಪಾಡಿಗಾಗಿ ನೇಯ್ಗೆಯ ಸಲಕರಣೆಗಳನ್ನು ಮಾರಿ ಸಾವಿರಾರು ನೇಕಾರರು ಉಪವಾಸವಿದ್ದು ಸತ್ತರು ಆ ಕಾಲದಲ್ಲಿ ಅಮೇರಿಕಾದ ಹತ್ತಿಯನ್ನು ಬೆಳೆಯುವ ಯತ್ನ ಸರಕಾರದಿಂದ ವಿಶೇಷವಾಗಿ ಪಡೆಯಿತು.[೨೬] ಪ್ರೋತ್ಸಾಹ ನೀಡಿತು. ಹಾಗೇ ಧಾರವಾಡ ಬುಟ್ಟಿ ಮುಗದದ ಮಣ್ಣಿನ ಪಾತ್ರೆಗಳು ಕಲಘಟಗಿಯ ತೊಟ್ಟಿಲು ಜಿಲ್ಲೆಯ ಪ್ರಸಿದ್ಧ ಉತ್ಪನ್ನಗಳಾಗಿವೆ. ಹುಬ್ಬಳ್ಳಿಯಲ್ಲಿ ಕುಶಲಕಲೆಗಾರ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ಬಡಿಗಿತನ, ಕಮ್ಮಾರಿಕೆ, ಚರ್ಮದ ವಸ್ತುಗಳು, ನೇಯ್ಗೆ, ಮೊದಲಾದವುಗಳಿಗೆ ಸಂಬಂಧಿಸಿದ ತರಬೇತಿಯನ್ನು ಭತ್ಯದೊಂದಿಗೆ ಕೊಡಲಾಗುತ್ತದೆ. ಹೆಬಸೂರಿನಲ್ಲಿ ಉತ್ತಮ ಮಾದರಿಯ ಗುಡಾರಗಳನ್ನು ಮತ್ತು ಜಮಖಾನೆಗಳು ಉತ್ಪಾದಿಸಲ್ಪಡುತ್ತವೆ. ಬ್ಯಾಹಟ್ಟಿ ಮತ್ತು ಬಿ, ಅರಳಿಕಟ್ಟಿಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಕೈಗಾರಿಕೆ ವಿಶೇಷವಾಗಿ ನಡೆಯುತ್ತದೆ. ಊದಿನಕಡ್ಡಿ ತಯಾರಿಕೆಯು ಜಿಲ್ಲೆಯ ಮತ್ತೊಂದು ಪ್ರಮುಖ ಗೃಹಕೈಗಾರಿಕೆಯಾಗಿದೆ ಧಾರವಾಡ ಹುಬ್ಬಳ್ಳಿ ಈ ಉದ್ಯಮದ ಪ್ರಮುಖ ಕೇಂದ್ರಗಳು ಜಿಲ್ಲೆಯಲ್ಲಿ ಕುಂಬಾರಿಕೆಯ ಎರಡು ವಿಧದಲ್ಲಿ ನಡೆಯುತ್ತದೆ. ಮಣ್ಣಿನಿಂದ ಪಾತ್ರೆಗಳನ್ನು ತಯಾರಿಸುವುದು ಮತ್ತು ಮೃದು ಕಲ್ಲಿನಿಂದ ಪಾತ್ರೆಗಳನ್ನು ತಯಾರಿಸುವುದು ಇಲ್ಲಿನ ಕುಂಬಾರಿಕೆಯಾಗಿದೆ. ಜಿಲ್ಲೆಯಲ್ಲಿ ಚರ್ಮ ಹದಮಾಡುವುದು ಮತ್ತು ಚರ್ಮೋದ್ಯಮಗಳು ಪ್ರತ್ಯೇಕ ಗೃಹ ಉದ್ಯಮಗಳಾಗಿವೆ. ಈ ಉಧ್ಯಮಗಳು ಅನುವಂಶಿಕವಾಗಿ ಬಂದವುಗಳಾಗಿವೆ. ಧಾರವಾಡ, ಹುಬ್ಬಳ್ಳಿ ಚರ್ಮ ಹದಮಾಡುವ ಮುಖ್ಯ ಕೇಂದ್ರಗಳು ಹುಬ್ಬಳ್ಳಿ, ಕಲಘಟಗಿ, ನವಲಗುಂದ ಇವು ಚರ್ಮೋದ್ಯಮದ ಮುಖ್ಯ ಕೇಂದ್ರಗಳು.[೨೭] ಕಲಘಟಗಿಯ ಕುಶಲಕರ್ಮಿಗಳು ಕಟ್ಟಿಗೆಯಲ್ಲಿ ತಯಾರಿಸುವ ಕಲಾತ್ಮಕ ತೊಟ್ಟಿಲುಗಳು ಪ್ರಖ್ಯಾತಿ ಪಡೆದವುಗಳಾಗಿವೆ. ಅಲ್ಲದೆ ಇದೇ ಪ್ರದೇಶದಲ್ಲಿ ತಯಾರಾಗುವ ಬಿದಿರು ಬುಟ್ಟಿಗಳು, ಮಣ್ಣಿನ ಮಡಕೆ, ಹಣತೆ, ಭತ್ತದ ಬಟ್ಟೆಯೂ ಅಲ್ಲದೆ ಮರಕೂಯ್ಯುವ ಕಾರ್ಖಾನೆಗಳು, ಬೆಂಕಿಕಡ್ಡಿಯ ಕಾರ್ಖಾನೆಯು ಸಹ ಇವೆ.

### ಕಲಘಟಗಿಯ ಕಲಾವಿದರ ಹಿನ್ನೆಲೆ

ಮನುಷ್ಯನಿಗೆ ಸೌಂದರ್ಯದೆಡೆಗೆ ಒಂದು ನೈಸರ್ಗಿಕವಾದ ಆಕರ್ಷಣೆ ಇದೆ. ಪ್ರತಿದಿವಸದ ಕೆಲಸಗಳಲ್ಲಿ ಸ್ವಲ್ಪ ಬಿಡುವು ಸಿಕ್ಕಾಗ, ಅವನ ಲಕ್ಷವು ಸೃಷ್ಟಿ ಸೌಂದರ್ಯದ ಕಡೆಗೆ ಹೋಗುತ್ತದೆ. ಆಗ ಅವನ ಮನಸ್ಸಿನಲ್ಲಿ ಒಂದು ಈರ್ಷೆ ಉಂಟಾಗುತ್ತದೆ. ಇಂಥ ಕಾಲಕ್ಕೆ ಸುಂದರವಾದ ವಸ್ತುವನ್ನು ಸೃಷ್ಟಿಸುವುದು ಮತ್ತು ಸೌಂದರ್ಯಾನುಭವನ್ನು ಪಡೆಯುವುದು ಮನುಷ್ಯನಿಗೆ ಬೇಕು ಎನಿಸುತ್ತದೆ. ಪ್ರಿಯವೆನಿಸುತ್ತದೆ. ತಾನೇ ಸೃಷ್ಟಿಸಿದ ಸುಂದರವಾದ ವಸ್ತುವಿನೊಂದಿಗೆ ಅವನು ತನ್ಮಯನಾಗಲು ಬಯಸುತ್ತಾನೆ. ಪ್ರಯತ್ನಿಸುತ್ತಾನೆ. ಈ ಪ್ರಯತ್ನದೊಳಗಿಂದ ಅನೇಕ ಕಲೆಗಳ ಉಗಮವಾಗಿದೆ. ಇಂಥ ಈ ಕಲೆಗಳಲ್ಲಿ ಕೆಲವು ವೈಯಕ್ತಿಕವಾದರೆ ಇನ್ನೂ ಕೆಲವು ಸಾರ್ವಜನಿಕ

---

೨೫. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೨೭೪ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

೨೬. ಸೂರ್ಯನಾಥ.ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೧೧೩ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೨೭. -ಅದೇ- ಪು. ೫೫

ಸ್ವರೂಪದ್ದಾಗಿರುತ್ತವೆ. ಒಬ್ಬ ವ್ಯಕ್ತಿಯ ಮಟ್ಟಿಗೆ ಸೀಮಿತವಾದ ಕಲೆ ವೈಯಕ್ತಿಕ ಕಲೆ ಎನಿಸಿಕೊಳ್ಳುತ್ತದೆ. ಯಾವ ಕಲೆಯನ್ನು ನೋಡಿ ಎಲ್ಲರ ಮನಸ್ಸಿನಲ್ಲಿಯೂ ಆನಂದ ಉಂಟಾಗಿ, ಅದನ್ನು ಸ್ವಪ್ರಯತ್ನದಿಂದ ಸಾಧಿಸಲು ಸಾಧ್ಯವಾಗುತ್ತದೊ ಅದು ಸಾರ್ವಜನಿಕ ಕಲೆ ಇಂಥ ಕಲೆಗೆ ಪರಂಪರೆ ಇರುತ್ತದೆ. ತಲೆಮಾರಿನಿಂದ ತಲೆಮಾರಿಗೆ ಈ ಕಲೆ ಸ್ಮರಣಶಕ್ತಿಯ ಮಾಧ್ಯಮದಿಂದ ಉಳಿದು ಬಂದಿರುತ್ತದೆ. ಈ ಕಲೆಯ ಮೇಲೆ ಎಲ್ಲರ ಅಧಿಕಾರ ಹಕ್ಕೂ ಇದೆ. ಆದುದರಿಂದ ಇಂಥ ಕಲೆಗಳಿಗೆ ಜಾನಪದ ಕಲೆ ಎಂದೂ ಕರೆಯುತ್ತಾರೆ.[೨೮] ಕಲಘಟಗಿಯಲ್ಲಿ ರೂಪಗೊಳ್ಳುವ ತೊಟ್ಟಿಲು, ಸೋಪಾ, ದೇವಿಯ ಮೂರ್ತಿಶಿಲ್ಪ, ಟೀಪಾಯಿ, ತೂಗುಮಂಚ, ಗಣೇಶ, ಮಣ್ಣೆತ್ತು, ಒನಕೆ, ಆಟಿಕೆ ಗೊಂಬೆಗಳು ಇತ್ಯಾದಿಗಳು ಸಾವುಕಾರ್ ಕುಟುಂಬಗಳು ಹಾಗೂ ಬಡಿಗೇರ ಕುಟುಂಬಗಳು ಮೂರು ನಾಲ್ಕು ತಲೆಮಾರುಗಳಿಂದ ರಚಿಸುತ್ತಾ ಬಂದಿದ್ದಾರೆ. ಇವರಲ್ಲದೆ ಕುಂಬಾರರು ತಯಾರಿಸುವ ಮಡಕೆ, ಓಲೆ, ಹಣತೆ, ಹಾಗೇ ಬುಟ್ಟಿ ಹೆಣೆಯುವ ಸಮುದಾಯಗಳು ಇಟ್ಟಿಗೆ ತಯಾರಿಸುವ ಬಟ್ಟೆಗಳು ಚಾಪೆ ಹೆಣೆಯುವುದು ಮುಂತಾದವರಾಗಿದ್ದಾರೆ.

ಕಲಘಟಗಿ ತಾಲೂಕು ಜನಪದ ಕಲೆಗಳಿಗೆ ಹೆಸರಾಗಿದೆ ಅಲ್ಲದೆ ದೊಡ್ಡಾಟ, ಸಣ್ಣಾಟ, ಬಯಲಾಟ, ಗೀಗೀಪದ, ಕರಡಿಮಜಲು, ಡೊಳ್ಳು ಕುಣಿತ, ಲಾವಣಿ, ಹಂತಿಪದ, ಭಜನೆ, ಇತ್ಯಾದಿಗಳು ಕಂಡು ಬರುತ್ತವೆ.

ಕ್ರೀಡೆಗಳಲ್ಲಿ ಗ್ರಾಮೀಣ ಪ್ರದೇಶಗಳಿಗೆ ಹೊಂದಿಕೊಳ್ಳುವಂತೆ ಗುಳಗುಂಪಿ ಕುದುರೆ ಸವಾರಿ, ಲಗೋರಿ, ಕಬಡ್ಡಿ, ಗಿಡಮಂಗನಾಟ, ಮೊದಲಾದವುಗಳಾಗಿವೆ. ಸಂಗೀತ, ನಾಟಕ, ಹವ್ಯಾಸಿ ಕಲಾವಿದರ ತಂಡಗಳಿದ್ದು ತಿಳಿದು ಬರುತ್ತದೆ. ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಕಲಘಟಗಿಗೆ ಕಲೆಗಳ ಘಟ್ಟ ಎಂದರು ತಪ್ಪಾಗಲಾರದು.

ಕನ್ನಡ ನಾಡಿನ ಸಂಸ್ಕೃತಿ, ಸಂಪ್ರದಾಯ, ಆಚರಣೆ, ಧಾರ್ಮಿಕ ವಿಚಾರಗಳು, ದೇಶಿಯ ಹಿನ್ನೆಲೆಯಲ್ಲಿ ರಚಿತವಾದ ಜನಪದ ಕಲೆಗಳು ಇಂದು ಹೆಮ್ಮರವಾಗಿ ಬೆಳೆದಿರುವುದು ಕಂಡು ಬರುತ್ತದೆ. ಇಂಥ ಪ್ರದೇಶದಲ್ಲಿ ಅಧ್ಯಯನದ ದೃಷ್ಟಿಯಿಂದ ಸೀಮಿತವಾದ ವ್ಯಾಪ್ತಿಯೊಳಗೆ "ಕಲಘಟಗಿಯ ತೊಟ್ಟಿಲು" ಕಲಾವಿದರ ಕುರಿತು ಅಧ್ಯಯನ ಮಾಡಲಾಗಿದೆ. ಕಲಾವಿದರ ಹಿನ್ನಲೆ ಈ ಕೆಳಗಿನಂತೆ ನೋಡಬಹುದಾಗಿದೆ.

ಕಲಘಟಗಿಯ ಬಡಿಗೇರ ಕಲಾವಿದರು ಹಲವಾರು ತಲೆಮಾರುಗಳಿಂದ ಜನಪದ ಕಲೆಯನ್ನು ಬೆಳೆಸಿಕೊಂಡು ಬಂದವರು. ವಿಶ್ವಕರ್ಮ ಜನರು ಪರಂಪರಾಗತ ಕೌಶಲ್ಯಕ್ಕೆ ಪ್ರಸಿದ್ಧರಾಗಿದ್ದಾರೆ. ವಿಶ್ವಕರ್ಮ ಜಾತಿಯ ಜನರನ್ನು ಪಾಂಚಾಳ ಜನರೆಂದು ಕರೆಯುತ್ತಾರೆ. ಇವರಲ್ಲಿ ಚಿನ್ನ, ಬೆಳ್ಳಿ, ಕೆಲಸಮಾಡುವ ಅಕ್ಕಸಾಲಿಗರು, ಕಂಚು, ಹಿತ್ತಾಳೆ ಕೆಲಸ ಮಾಡುವರು ಕಂಚಗಾರರು ಕಬ್ಬಿಣ ಕೆಲಸ ಮಾಡುವವರು ಕಮ್ಮಾರರು ಮರದ ಕೆಲಸ ಮಾಡುವವರು ಬಡಿಗೇರರು ಶಿಲ್ಪದ ಕೆಲಸ ಮಾಡುವರು ಶಿಲ್ಪಿಗಳು ಎಂದು ಕರೆಯುತ್ತಾರೆ. ಕರ್ನಾಟಕದ ಎರಡನೆಯ ಹಿಂದೂಳಿದ ವರ್ಗಗಳ ಆಯೋಗದ ಪ್ರಕಾರ ಜಿಲ್ಲೆಯಲ್ಲಿ ೧೯೮೮ ರಲ್ಲಿ ಇವರ ಸಂಖ್ಯೆಯು ೫೬.೩೮೮ ಎಂದು ಅಂದಾಜು ಮಾಡಲಾಗಿತ್ತು. ವಿಶ್ವಬ್ರಹ್ಮನ ಐದು ಮುಖಗಳಿಂದ ಹುಟ್ಟಿದ ಮಕ್ಕಳಾದ ಮನು, ಮಯ, ತ್ವಷ್ಟ, ಶಿಲ್ಪಿ, ಮತ್ತು ವಿಶ್ವಜ್ಞ ಋಷಿಗಳ ಮಕ್ಕಳಾದ ಸನಕ, ಸನಂದನ, ಆಹಬೂವನ, ಪ್ರಾತ್ನಸ, ಮತ್ತು ಸುಪರ್ಣರು ಪಾಂಚಾಲರ ಗೋತ್ರಕಾರೆಂದೂ ಇವರಿಂದ ಮುಂದೆ ೧೨೫ ಗೋತ್ರಗಳು ಹುಟ್ಟಿದವು ಎಂದು ಹೇಳುತ್ತಾರೆ. ಇವರಲ್ಲಿ ಸಗೋತ್ರದಲ್ಲಿ ವಿವಾಹ ಸಂಬಂಧ ಮಾಡುವ ಸಂಪ್ರದಾಯವಿಲ್ಲ ಇವರ ಕುಲದೇವತೆ ಕಾಳಿಕಾ ದೇವತೆ ಇವರು ಅಮವಾಸ್ಯೆಯ ದಿನ ತಮ್ಮ ಔದ್ಯೋಗಿಕ ಉಪಕರಣಗಳನ್ನು ಪೂಜಿಸಿ ನಂತರ ಆ ದಿನ ಕೆಲಸಕ್ಕೆ ಬಿಡುವು ಕೊಡುತ್ತಾರೆ. ಇವರಲ್ಲಿ ಪೂರೋಹಿತ ವರ್ಗವಿದೆ. ಇವರಲ್ಲಿ ಉಪನಯನ ಪದ್ಧತಿಯಿದೆ ಇವರಲ್ಲಿ ವಿಧವಾ ವಿವಾಹ ಮತ್ತು ವಿವಾಹ ವಿಚ್ಛೇಧನಗಳು ಆಚರಣೆಯಲ್ಲಿಲ್ಲ ಇವರು ಕನ್ನಡ ಭಾಷಿಕರು ಹಾಗೂ ಸಸ್ಯಾಹಾರಿಗಳು, ಇವರು ಹುಟ್ಟು ಸಾವು ಮೊದಲಾದ ಸಂದರ್ಭದಲ್ಲಿ ಮೈಲಿಗೆ ಆಚರಿಸುತ್ತಾರೆ. ಮೃತರಿಗೆ ಅಗ್ನಿ ಸಂಸ್ಕಾರ ಮಾಡುತ್ತಾರೆ. ಗುಲಬುರ್ಗಾ ಜಿಲ್ಲೆಯ ತಿಂಥಿಣಿ ಮೌನೇಶ್ವರ, ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಲಿಂಗನಬಂಡೆಯ ವರವಿ ಮೌನೇಶ್ವರ, ಬೆಳಗಾವಿ ಜಿಲ್ಲೆಯ ಶಿರಸಂಗಿ ಕಾಳಿಕಾಂಬಾ ಮೊದಲಾದ ಇವರ ಪ್ರಮುಖ ಯಾತ್ರಾ ಸ್ಥಳಗಳಾಗಿವೆ. ನವಲಗುಂದದಲ್ಲಿರುವ ಜಗದ್ಗುರು ಅಜಾತ ನಾಗಲಿಂಗ

೨೮. ಸರೋಜಿನಿ ಬಾಬರ್ : ಮಹಾರಾಷ್ಟ್ರದ ಜನಪದ ಸಾಹಿತ್ಯ ಪು. ೧೦೨ ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ದೆಹಲಿ ೧೯೭೨

ಮಹಾಸ್ವಾಮಿ ಮಠವು ಜಿಲ್ಲೆಯಲ್ಲಿ ಇವರ ಹೆಸರಾಂತ ಮಠವಾಗಿದೆ.[೨೯] ಇಂಥಾ ದೇವತೆಗಳನ್ನು ಪೂಜಿಸುತ್ತಾ ಕಲಘಟಗಿಯ ಕಲಾವಿದರು ಮುಖ್ಯವಾಗಿ ತೊಟ್ಟಿಲು, ದೇವಿಯ ಮೂರ್ತಿಶಿಲ್ಪ, ಆಟಿಕೆಗೊಂಬೆ ಇತ್ಯಾದಿಗಳನ್ನು ಹಲವಾರು ತಲೆಮಾರುಗಳಿಂದ ರಚಿಸುತ್ತಾ ಬಂದ ಬಡಿಗೇರ ಸಮುದಾಯಗಳು ಕರಕುಶಲ ಕಲೆಯಲ್ಲಿ ಪ್ರಸಿದ್ಧಿ ಪಡೆದಿರುತ್ತಾರೆ. ಇಲ್ಲಿ ಮುಖ್ಯ ಕಲಾವಿದರಾಗಿ ಚನ್ನಬಸಪ್ಪ. ಬಡಿಗೇರ, ಗಂಗಾಧರ, ಬಡಿಗೇರ, ಮಲ್ಲೇಶಪ್ಪ, ಬಡಿಗೇರ, ಶ್ರೀಪಾದ, ಬಡಿಗೇರ, ಅಶೋಕ, ಬಡಿಗೇರ, ಶೀರಸಪ್ಪಾ, ಬಡಿಗೇರ, ಮಾನಪ್ಪ, ಬಡಿಗೇರ ಮುಂತಾದ ಕಲಾವಿದರಾಗಿದ್ದಾರೆ. ಈ ಕಲಾವಿದರಿಗೆ ಸ್ಥಳೀಯವಾಗಿ ದೊರಕುವ ಅಂದರೆ ಖಾಸಗಿ ಡಿಪೋ, ಕಿರುವತ್ತಿ, ಮುಂಡಗೋಡ, ದೇವಿಕೊಪ್ಪ, ಕಲಕೇರಿ, ಪ್ರದೇಶಗಳಿಂದ ಸಾಗುವಾನಿ, ಶಿವಣ್ಣಿ, ಹೊನ್ನೆ, ಬಿಟೆ, ಶ್ರೀಗಂಧ, ಮಾವು ಮುಂತಾದ ಮರದ ತುಂಡುಗಳನ್ನು ಖರೀಧಿಸುತ್ತಾ ತಮಗೆ ಬೇಕಾದ ಗಾತ್ರದಲ್ಲಿ ಕತ್ತರಿಸಿಕೊಂಡು ತೊಟ್ಟಿಲು ತಯಾರಿಕೆ ದೇವಿಯ ಮೂರ್ತಿಶಿಲ್ಪ, ಆಟಿಕೆ ಗೊಂಬೆಗಳು, ಕಾಮರತಿ ಶಿಲ್ಪ, ಭೂತಪ್ಪ, ಮಣ್ಣೆತ್ತು ಮುಂತಾದ ವಿವಿಧ ಸುಂದರವಾದ ಕಲಾಕೃತಿಗಳನ್ನು ತಯಾರಿಸುತ್ತಾರೆ. ಮೂಲ ವರ್ಣವಾದ ಅರಗಿನ ಬಣ್ಣದಿಂದ ತಯಾರಿಸಿದ ಇವರ ಕೃತಿಗಳು ನೂರು ವರ್ಷ ಬಾಳಿಕೆ ಬರುವ ಉದಾಹರಣೆಗಳಾಗಿವೆ. ಹಾಗೇ ಈ ಕಲಾವಿದರು ನಾಟಕ ಪರದೆ ಬರೆಯುವುದು, ಗಣಪತಿ ತಯಾರಿಸುವುದು ಇತ್ಯಾದಿ ಅಂಶಗಳು ಕಂಡುಬರುತ್ತವೆ.

ಕಲಘಟಗಿಯ ಸಾವುಕಾರ ಕಲಾವಿದರ ಹಿನ್ನೆಲೆ ಕುರಿತು ನೋಡುದಾದರೆ ಇವರು ಮೂಲತಃ ಮರಾಠರು ಮಹಾರಾಷ್ಟ್ರದಿಂದ ವಲಸೆ ಬಂದಿರುವುದಾಗಿ ಕಂಡುಬರುತ್ತದೆ. ಎರಡನೆಯ ಹಿಂದೂಳಿದ ವರ್ಗಗಳ ಆಯೋಗದ ಪ್ರಕಾರ ಜಿಲ್ಲೆಯಲ್ಲಿ ೧೯೮೪ ರಲ್ಲಿ ಇವರ ಸಂಖ್ಯೆ ೧.೯೯,೦೨೬ ಎಂದು ಅಂದಾಜು ಮಾಡಲಾಗಿದೆ. ಇವರು ಮಾಂಸಾಹಾರಿಗಳಾಗಿದ್ದು ಬಹುತೇಕ ಬ್ರಾಹ್ಮನ ವಿಧಿ ಆಚರಣೆಗಳನ್ನು ಅನುಸರಿಸುವ ಅಂದರೆ ಇವರಲ್ಲಿ ಜನಿವಾರ ಹಾಕುವ ಸಂಪ್ರದಾಯ ಹುಟ್ಟಿದಾಗ ಹಾಗೂ ಸತ್ತಾಗ ಮೈಲಿಗೆ ಹಾಗೂ ಇತರೆ ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸುವುದು ಇವೇ ಮುಂತಾದ ಪದ್ಧತಿಗಳಿವೆ. ಇವರಲ್ಲಿ ಜಾಧವ, ಪವಾರ್, ಸಿಂದೆ, ಭೋಸ್ಲೆ, ಮುಂತಾದ ಮನೆತನದ ಹೆಸರುಗಳಿವೆ. ಇವರು ಕನ್ನಡ ಹಾಗೂ ಮರಾಠಿಯನ್ನು ಮಾತನಾಡುತ್ತಾರೆ. ಮದುವೆ ಮುಂತಾದ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣ ಪೂರೋಹಿತರು ಬಂದು ನಡೆಸಿಕೋಡುತ್ತಾರೆ. ಇವರು ಎಲ್ಲಮ್ಮಾ, ವೀಠೂಬಾ, ಮಾರುತಿ, ಅಂಭಾಭವಾನಿ, ಖಂಡೋಬಾ, ಜಗದಂಭಾ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಹಾಗೂ ಸೌಂದತ್ತಿ, ಪಂಡರಪುರ, ಧರ್ಮಗಳ ಮೊದಲಾದ ಯಾತ್ರಾಸ್ಥಳಕ್ಕೆ ಹೋಗುವ ಪದ್ಧತಿಯುಂಟು ಇವರಲ್ಲಿ ಶವವನ್ನು ಸುಡುತ್ತಾರೆ. ಕೃಷಿಕರು ಸೈನಿಕರು ಆಗಿದ್ದ ಇವರು ಈಗ ವ್ಯಾಪಾರ ಹಾಗೂ ಇತರೆ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ್ದಾರೆ.[೩೦] ಇಂತಾ ಪ್ರಗತಿಯ ಹಿನ್ನೆಲೆಯಲ್ಲಿ ಕಲಘಟಗಿಯಲ್ಲಿ ನೆಲೆಸಿರುವ ಮರಾಠ ಜನಾಂಗದ ಸಾವುಕಾರ ಕುಟುಂಬದ ಕಲಾಕಾರರು ಸುಮಾರು ಮೂರು ನಾಲ್ಕು ತಲೆಮಾರುಗಳಿಂದ ತೊಟ್ಟಿಲು, ಗ್ರಾಮದೇವತೆಯ ಮೂರ್ತಿಶಿಲ್ಪ, ತೂಗುಮಂಚ, ಸೋಪಾ, ದಿವಾನ್ ಕಾಟ್, ಪಲ್ಲಕ್ಕಿ, ಟೀಪಾಯಿ, ಕುರ್ಚಿ, ಗಣಪತಿ, ಮಣ್ಣೆತ್ತು, ಒನಕೆ, ಭೂತಪ್ಪ, ಸ್ಟ್ಯಾಂಡಿಂಗ್ ತೊಟ್ಟಿಲು ಇನ್ನೂ ಅನೇಕ ಹೊಸಬಗೆಯ ವಿವಿಧ ಪೀಠೋಪಕರಣಗಳನ್ನು ರಚಿಸುತ್ತಾ ಬಂದಿದ್ದಾರೆ.

ಬಿಜಾಪುರ ಸುಲ್ತಾನರ ಕಾಲದಲ್ಲಿ ಅವರ ಸೈನ್ಯದಲ್ಲಿದ್ದ ಮರಾಠಿಗರ ವಲಸೆ ದಕ್ಷಿಣದ ಕಡೆಗೆ ಬಂದುದರಿಂದ ಪೂನಾ ಮುಂತಾದ ಪ್ರದೇಶದ ಮರಾಠ ಜನ ದಕ್ಷಿಣ ಪ್ರಾಂತ್ಯಗಳನ್ನು ಗೆಲ್ಲುವಾಗ ಸೈನ್ಯದೊಂದಿಗೆ ಬಂದವರು ಅನೇಕರು ಮರಳಿ ಹೊಗಲಿಲ್ಲ ಅನುಕೂಲವಾದ ಸ್ಥಳಗಳಲ್ಲಿ ನೆಲೆನಿಂತರೂ ಅಲ್ಲದೆ ಸ್ಥಳೀಯರೊಂದಿಗೆ ಬೆರೆತು ಅಲ್ಲಿನ ಸಾಂಸ್ಕೃತಿಕ ಜೀವನದೊಂದಿಗೆ ಬೆರೆತುಕೊಂಡರು.[೩೧] ಎಂದು ಧಾರವಾಡ ಜಿಲ್ಲೆ ಗ್ಯಾಸೆಟಿಯರ್ ಉಲ್ಲೇಖಿಸುತ್ತದೆ. ಇದೇ ಗ್ಯಾಸೆಟಿಯರ್ ಉಲ್ಲೇಖಿಸುವ ಹಾಗೆ ಯಲ್ಲಾಪುರದ 'ಸಾತ್‌ಸಹೀದ್' ಸಮಾಧಿಗಳು ಪ್ರಸಿದ್ಧವಾಗಿದ್ದು ಸುಮಾರು ೩೪೦ ವರ್ಷಗಳ ಹಿಂದೆ ಬಿಜಾಪುರದ ಸೂಫಿಸಂತ ಹಾಶಿಮ್‌ಪೀರನ ಅನುಯಾಯಿಗಳು ಹವಳದ ಹಿಂಡಸಗೇರಿ ನಿವಾಸಿಗಳು ಆದಿಲ್‌ಷಾನಿಂದ ಸನ್ನತಿ ಪಡೆದು ಇಲ್ಲಿಗೆ ಬಂದು

೨೯. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೧೧೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೩೦. -ಅದೇ- ಪು. ೨೨೩

೩೧. -ಅದೇ- ಪು. ೭೪೨

ಕಾಡು ಕಡಿದು ನೆಲೆ ನಿಲ್ಲುವ ಪ್ರಯತ್ನದಲ್ಲಿ ಪ್ರಾಣತ್ಯಾಗ ಮಾಡಿ ಹುತಾತ್ಮರಾದರಂತೆ ಬಹುಶಃ ಇದು ಸೇನಾಪಾಳ್ಯಯವಾಗಿದ್ದು[೩೨] ಎಂದು ಉಲ್ಲೇಖಿಸುತ್ತಾ, ಈ ಸೇನಾಪಾಳ್ಯಯದೊಂದಿಗೆ ಮೇಲೆ ಹೇಳಿದ ಹಾಗೆ ಸೈನ್ಯದೊಂದಿಗೆ ಬಂದ ಮರಾಠರು ಮರಳಿಹೋಗದೆ ಕಾಡು ಕಡಿದು ಪ್ರಾಣತ್ಯಾಗ ಮಾಡಿದವರಲ್ಲಿ ಉಳಿದಿರಬಹುದು. ಅಲ್ಲದೆ ಮರಳಿ ಹೋಗಲಾರದೆ ಇಲ್ಲಿಯೇ ನೆಲೆನಿಂತಿರಬಹುದು. ಏಕೆಂದರೆ ಮೂಲತಃ ಇವರು ಕಲಾವಿದರೆ ಎಂದು ಸರೋಜಿನಿ ಬಾಬರ್ ತಮ್ಮ "ಮಹಾರಾಷ್ಟ್ರದ ಜನಪದ ಸಾಹಿತ್ಯ" ಎಂಬ ಪುಸ್ತಕದಲ್ಲಿ ದಾಖಲಿಸಿದ್ದಾರೆ. ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಈ ಕಲಾವಿದರಿಗೆ ಉತ್ತಮವಾದ ಸಾಗುವಾನಿ, ಶ್ರೀಗಂಧ, ಹೊನ್ನೆ, ಬೀಟೆ, ಮುಂತಾದವುಗಳು ದೊರೆಯುತ್ತಿರುವಾಗ ಅಲ್ಲಿಯೇ ನೆಲೆನಿಂತು ಕರಕುಶಲ ವಸ್ತುಗಳನ್ನು ತಯಾರಿಸಿರಬಹುದು. ಅಲ್ಲದೇ ಮೊದಮೊದಲು ಕಲಘಟಗಿಯ ತುಂಬೆಲ್ಲ ಕಾಡು ಇದ್ದಿರಬಹುದು. ನಂತರದ ದಿನಗಳಲ್ಲಿ ಕಾಡನ್ನು ನಾಶ ಅಂದರೆ ಜನರು ವಾಸಿಸುವುದಕ್ಕೆ ಮನೆ ನಿರ್ಮಾಣಕ್ಕೆ ಕಾಡನ್ನು ಬಳಸಿಕೊಂಡಿರಬೇಕು ಇಂತಹ ಕಾಡು, ಮತ್ತು ಕಲ್ಲುಗಳಿಂದ ಕೂಡಿದ ಪ್ರದೇಶವಾಗಿ ಇದಕ್ಕೆ ಮೊದಲು 'ಕಲ್ಲುಕುಟಗಿ' ಎಂಬ ಹೆಸರು ಬಂದಿರಬೇಕು ಇಲ್ಲಿಯ ಪ್ರತಿಯೊಂದು ಮನೆಯೂ ಸಾಗವಾನಿ ಮರದ ತುಂಡುಗಳಿಂದಲೆ ಸುಂದರವಾಗಿ ಕೆತ್ತಿದ ವಿನ್ಯಾಸಗಳಿಂದ ನಿರ್ಮಾಣವಾಗಿರುವುದು ಈ ಪ್ರದೇಶದ ಅರಣ್ಯ ಮತ್ತು ಕಲೆಗಾರಿಕೆಯಿಂದಾಗಿರಬಹುದು ಎಂದು ಊಹಿಸಲಾಗಿದೆ.

ಡಾ.ಬಿಕೆ, ಹಿರೇಮಠ ರವರ ಅಭಿನಂದನಾ ಗ್ರಂಥ "ನಿಜದನೆಲೆ" ಯಲ್ಲಿ ಉಲ್ಲೇಖಿಸಿರುವ ಹಾಗೆ ಕಲಘಟಗಿಯ ಕಲಾವಿದರಾದ ಸಾವುಕಾರ್ ಕುಟುಂಬವು ಮರಾಠಾ ಜನಾಂಗವಾದ್ದರಿಂದ ಇವರು ಮೂಲತಃ ಉತ್ತರ ಭಾರತದವರು ದೆಹಲಿ ಇವರ ಪೂರ್ವಜರ ನೆಲೆಯಾಗಿತ್ತೆಂದು ತಿಳಿಯುವುದರ ಜೊತೆಗೆ ಮೊಗಲರ ದಾಳಿಯಿಂದ ನಿರಾಶ್ರಿತರಾಗಿ, ಜಯಪುರಕ್ಕೆ ಬಂದರಂತೆ ಅಲ್ಲಿಂದ ಕೊಲ್ಲಾಪುರ, ಬೆಳಗಾವ, ಹುಲಿಕೊಪ್ಪ, ಗ್ರಾಮಕ್ಕೆ ಬಂದು ನೆಲೆಸಿದರಂತೆ ಮತ್ತೆ ಅಲ್ಲಿಂದ ಕಲಘಟಗಿಗೆ ಶಾಶ್ವತ ನೆಲೆಕಂಡಿರುವುದಾಗಿದೆ.[೩೩] ಎಂದು ತಿಳಿಸುತ್ತದೆ.

ಮರಾಠ ಜನಾಂಗದ ಕುರಿತು ಡಾ. ಚಂದ್ರಶೇಖರ ಕಂಬಾರವರ ತಮ್ಮ ಗ್ರಂಥವಾದ "ಕನ್ನಡ ಜಾನಪದ ವಿಶ್ವಕೋಶ" ಸಂಪುಟ ಎರಡರಲ್ಲಿ ಉಲ್ಲೇಖಿಸಿರುವ ಹಾಗೆ ಮರಾಠರು ಯೋಧರಾಗಿ ಅಥವಾ ಸೈನ್ಯ ಶಿಬಿರದ ಹಿಂಬಾಲಕರಾಗಿ ದಕ್ಷಿಣ ಭಾರತಕ್ಕೆ ಬಂದರಂತೆ, ಅಬ್ರಾಹ್ಮಣರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಠ ಕೃಷಿಕರಾದ 'ಆರೆ' ಎನ್ನುವರು ಇದ್ದಾರೆ. ಆದರೆ ನಿಜವಾದ ಮರಾಠಿ ಜಾತಿಯವರು ಗೋವಾದಿಂದ ಬಂದು ಆ ಜಿಲ್ಲೆಯಲ್ಲಿ ನೆಲೆಸಿದರೆಂದು[೩೪] ತಿಳಿದುಕೊಳ್ಳುವುದಾಗಿದೆ.

ಬಣ್ಣ ಬಣ್ಣದ ಹಾಳೆಗಳಿಂದ, ನಾಜೂಕು ನಕ್ಷೆಗಳಿಂದ ಜಿನಗಾರರು ತಯಾರಿಸುವ ವಸ್ತುಗಳು ಹಳೆಯ ಕಾಲದಿಂದಲೂ ಜನಪ್ರಿಯವಾಗಿವೆ. ಸೋನೆರಿ ಬಣ್ಣ ಮತ್ತು ಇನ್ನೀತರ ಬಣ್ಣಗಳಿಂದ ಮೂಡಿದ ಸುಂದರ ವಸ್ತುಗಳಿಗೆ ಮಂಗಳ ಕಾರ್ಯದಲ್ಲಿ ಹೆಚ್ಚಿನ ಸ್ಥಾನ ಕೊಡಲಾಗುತ್ತಿತ್ತು. ಜೀನಗಾರರ ಈ ಕಲೆಯು ಬಹಳ ಪ್ರಾಚೀನ ಗುಲಾಬಿ, ತಿಳುವು, ಕುರುಕುರಿ ಕಾಗದವನ್ನು ತೆಂಗಿನ ಕಾಯಿಗೆ ಸುತ್ತಿ ಸೋನೆರಿ ಕಾಗದದಿಂದ ಅದಕ್ಕೆ ಆಕರ್ಷಕತೆ  ಬರುವಂತೆ ಮಾಡುತ್ತಾರೆ ಇಂತಹ ತೆಂಗಿನಕಾಯಿಯನ್ನು ಮಂಗಲ ಕೆಲಸಕ್ಕಾಗಿ ಉಪಯೋಗಿಸುತ್ತಾರೆ, ಏಕೆಂದರೆ ಇದು ನೋಡಲು ಸುಂದರ ಕಾಣುತ್ತದೆ. ಇಂತಹ ಕಲಶ, ಲಗ್ನ, ಮುಂಜಿ, ಸಂದರ್ಭದಲ್ಲಿ ಮತ್ತು ಮೂರ್ಹತಕ್ಕೆ ಬೇಕೆ ಬೇಕಾಗುತ್ತದೆ.

ಲಗ್ನದ ಮನೆಯ ಬಾಗಿಲಕ್ಕೆ ಕಟ್ಟಲಾದ ತೋರಣ, ವಧುವರರ ಹಣೆಗೆ ಕಟ್ಟುವ ಬಾಸಿಂಗ್ ಮೆರವಣಿಗೆಯ ಕಾಲಕ್ಕೆ ಬೇಕಾಗುವ ನಕ್ಷತ್ರಮಾಲೆ ತೊಟ್ಟಿಲದ ಮೇಲೆ ಕಟ್ಟುವ ಗುಬ್ಬೆಚೆಟ್ಟು ಮೂದಲಾದ ವಸ್ತುಗಳನ್ನು ಮಾಡುವ ಕಲೆಯಲ್ಲಿ ಜಿನಗಾರು ಪ್ರಖ್ಯಾತರು ಹಳೆಯ ಜಾನಪದ ಗೀತೆಗಳಲ್ಲಿ ಈ ವಿಷಯವಾಗಿ ಉಲ್ಲೇಖಗಳು ದೊರೆಯುತ್ತವೆ.

---

೩೨. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಯರ್ ಧಾರವಾಡ ಜಿಲ್ಲೆ ಪು. ೯೦೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೩೩. ಡಾ. ಬಿ.ಕೆ ಹಿರೇಮಠ : (ಸಂ) ನಿಜದ ನೆಲೆ ಪು. ೧೫೩  ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಕಲಕೋಟ ೨೦೦೩

೩೪. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವ ಕೋಶ ಸಂಪುಟ ೦೨ ಪು. ೧೫೫೫ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಈ ಗೀತೆಗಳಲ್ಲಿ ಜೀನಗಾರರಿಗೂ ಜನಸಾಮಾನ್ಯರಿಗೂ ಇರುವ ಸಂಬಂಧವು ಅಭಿವ್ಯಕ್ತಗೊಂಡಿದೆ ಚಿತ್ರಕಲೆ, ಕಲ್ಪಕತೆ, ಕಾರುವಿದ್ಯೆ ಇವುಗಳ ತ್ರಿವೇಣಿ ಸಂಗಮವೇ ಜೀನಗಾರರ ಹಸ್ತಕೌಶಲ್ಯದ ಈ ಕಲೆ ಚಿತ್ತಾಕರ್ಷಕವಾಗಿದೆ ಮತ್ತು ಜನಪ್ರಿಯವಾಗಿದೆ.[೩೫] ಅಲ್ಲದೆ ಕರ್ನಾಟಕದ ಧಾರವಾಡ ಜಿಲ್ಲೆಯ ಕಲಘಟಗಿಯ ಪಟ್ಟಣದಲ್ಲಿ ಪ್ರತಿನಿತ್ಯ ಅರಳುವ ಸುಂದರವಾದ ವರ್ಣ ವಿನ್ಯಾಸಗಳಿಂದ ತೊಟ್ಟಿಲು, ತೂಗುಮಂಚ, ಸೋಪಾ, ಪಲ್ಲಕ್ಕಿ, ದೇವಿಯ ಮೂರ್ತಿಶಿಲ್ಪ, ಮಣ್ಣೆತ್ತು, ಕಾಮರತಿ ಶಿಲ್ಪ, ಗಣೇಶ, ಗೌರಿಮುಖ, ಪಾಲಿಕೆ, ಆಟಿಕೆ ಗೊಂಬೆಗಳು ಇನ್ನೂ ಇತ್ಯಾದಿ ವಸ್ತು ವಿಷಯಗಳು ಪ್ರಸಿದ್ಧಿ ಪಡೆದಿವೆ. ಮೂಲ ವರ್ಣವಾದ ಅರಗಿನ ಬಣ್ಣದಿಂದ ತಯಾರಿಸಿದ ಈ ಪೀಠೋಪಕರಣಗಳು ಹೊಸ ಹೊಸ ಆಧುನಿಕ ಜಗತ್ತಿನಲ್ಲಿ ತಲೆಯತ್ತಿನಿಂತಿವೆ.

ಮಹಾರಾಷ್ಟ್ರದ ಸರ್ವ ಸಾಮಾನ್ಯರು ಹಬ್ಬ ಹರಿದಿನಗಳು ಮತ್ತು ಕುಲಾಚಾರ, ಕುಲಧರ್ಮ, ಕುಲದೇವರು ಪ್ರಸನ್ನಾಗಿ ತಮ್ಮ ಸಂರಕ್ಷಣೆ ಮಾಡಬೇಕು ಎಂಬ ಅಪೇಕ್ಷೆ ಈ ಆಚರಣೆಗಳ ಮೂಲಕ್ಕಿದೆ.[೩೬] ಮಕ್ಕಳಿಗೆ ಯಾವುದೇ ರೀತಿಯ ಭಾದೆ-ಕೇಡು ಆಗಬಾರದು ದೇವಾದಿ ದೇವತೆಗಳು ಸಂರಕ್ಷಣೆಯನ್ನು ನೀಡಬೇಕು ಎಂಬ ಅಪೆಕ್ಷೆಯಿಂದ ಮಕ್ಕಳ ಕೊರಳಲ್ಲಿ 'ಜಿವತಿ' ಟಂಕ ಕಟ್ಟುತ್ತಾರೆ. 'ಜಿವತಿ ' ಎಂದರೆ ಮಕ್ಕಳ ಸಂರಕ್ಷಣೆ ಮಾಡುವ ದೇವತೆ ಯಾವಾಗಲೂ ಆನಂದದಲ್ಲಿ ಇರುವ ರಕ್ಷಣೆಯನ್ನು ನೀಡುವ ಮಹಾಶಕ್ತಿ ಸಂಪನ್ನ ಮತ್ತು ಎಲ್ಲ ಇಚ್ಚೆ-ಆಕಾಂಕ್ಷೆಗಳಿಂದ ತೃಪ್ತಿ ಪಡೆದ ದೇವತೆ ಈ 'ಜಿವತಿ' ಶ್ರಾವಣದ ಪ್ರತಿ ಶುಕ್ರವಾರ ಮನೆಯ ಗೋಡೆಯ ಮೇಲೆ ಈ 'ಜಿವತಿ'ಯ ಚಿತ್ರಗಳನ್ನು ಬರೆಯುವಾಗ ಮುಖ್ಯವಾಗಿ ತೊಟ್ಟಿಲದಲ್ಲಿ ಮಗು ಮಲಗಿದ ದೃಶ್ಯ ಸುತ್ತಲೂ ಅನೇಕ ಮಕ್ಕಳಗುಂಪು ಆಟಿಕೆಯ ಸಾಮಾನುಗಳನ್ನು ಚಿತ್ರಿಸಿರುತ್ತಾರೆ. ನಂತರ ಪೂಜೆಗೆ ಉತ್ತರಾಣಿ ಎಲೆ ಮತ್ತು ಹೂವುಗಳ ಮಾಲೆ ಮಾಡಿ ದೇವರಿಗೆ ಹಾಕುತ್ತಾರೆ. ಗೋಧಿಯ ಹಿಟ್ಟಿನ ಐದು ದೀಪಮಾಡಿ ಅವುಗಳಿಂದ ಆರತಿ ಬೆಳಗುತ್ತಾರೆ. ಮತ್ತು ಈ ಸಮಯಕ್ಕೆ "ಜಿವತಿ ತಾಯಿ ನನ್ನ ಮಗುವನ್ನು ರಕ್ಷಿಸು ನೀನು ಕರುಣೆಯ ಸಾಗರ ! ನಾನು ಯಾವ ದಿಕ್ಕಿಗೆ ಅಕ್ಷತೆ ಒಗೆಯುವೆನೋ ಆ ಕಡೆ ನೀನು ನನ್ನ ಮಗುವನ್ನು ರಕ್ಷಿಸು" ಎಂದು ತಾಯಂದಿರು ಪ್ರಾರ್ಥಿಸುತ್ತಾರೆ.[೩೭] ಕಲಘಟಗಿಯ ಕಲಾವಿದರು ತೊಟ್ಟಿಲು ತಯಾರಿಕೆಯಲ್ಲಿ ಭಕ್ತಿ ಶ್ರದ್ಧೆಯನ್ನು ಪ್ರತಿ ನಿತ್ಯ ತೋರಿಸುತ್ತಾರೆ. ಈ ಕಲಾವಿದರಲ್ಲಿಯೂ ಅಂಥದೊಂದು ಮನೋಭಾವನೆ ಇದ್ದಿರಬಹುದಾಗಿದೆ.

**ಸಂರಕ್ಷಣೆ**

ಮರವು ಪ್ರಕೃತಿಯ ಜೊತೆ ಬೇಗ ವಿಲೀನವಾಗುವ ವಸ್ತು ಪರಿಸರದಲ್ಲಿ ಉಂಟಾಗುವ ಬದಲಾವಣೇಗಳನ್ನು ಕಲ್ಲಿನಂತೆ ದೀರ್ಘಕಾಲದವರೆಗೆ ಎದುರಿಸದೆ ಬಹುಬೇಗ ನಶಿಸಿ ಹೋಗುತ್ತವೆ. ಕೆಲವು ಮರಗಳು ಮಾತ್ರ ಧೀರ್ಘಾವಧಿಯವರೆಗೆ ಉಳಿದು ಬಂದಿದೆ. ತೇಗವು ಸುಮಾರು ಸಾವಿರ ವರ್ಷಗಳವರೆಗೆ ತನ್ನ ಅಸ್ತಿತ್ವವನ್ನುಳಿಸಿಕೊಳ್ಳುತ್ತದೆ. ಆದರೆ ಮರದ ಧೀರ್ಘಕಾಲದ ಉಳಿವಿಕೆಗೆ ಹೆಚ್ಚಿನ ಆರೈಕೆ ಅವಶ್ಯಕ. ಮರದಲ್ಲಿ ಭೂಸ್ಸು ಬೆಳೆಯದಂತೆ ನೋಡಿಕೊಳ್ಳಬೇಕು ನೀರು ಇತ್ಯಾದಿ ತೇವಾಂಶದಿಂದ ಮರವನ್ನು ರಕ್ಷಿಸುವುದು ಅವಶ್ಯಕ. ಮರಕ್ಕೆ ತೈಲವರ್ಣವನ್ನು ಬಳಸುವುದರಿಂದ ನೀರಿನಿಂದ ಮರಕೆಡುವುದನ್ನು ತಪ್ಪಿಸಿದಂತಾಗುತ್ತದೆ. ವಾರ್ನೀಷ್ ಇತ್ಯಾದಿಗಳನ್ನು ಬಳಸುವುದು ಉತ್ತಮ. ಇಂದು ಮರವು ಕೆಡದೇ ಇರುವಂತೆ ನೋಡಿಕೊಳ್ಳಲು ಅನೇಕ ರಸಾಯನಿಕ ವಸ್ತುಗಳನ್ನು ಬಳಸುವುದುಂಟು.[೩೮] ಈ ಹಿನ್ನೆಲೆಯಲ್ಲಿ ಕಲಘಟಗಿಯ ಕಲಾವಿದರು ಮರದ ತುಂಡುಗಳಿಗೆ ಲೇಪಿಸಿದ ಬಣ್ಣಗಳನ್ನು ಹುಳು ಹುಪ್ಪಟೆ ತಿನ್ನಬಾರದೆಂದು 'ರೋಗಂಧ' ಎಣ್ಣೆಯ ಲೇಪನ ಮಾಡುತ್ತಾರೆ. ಇದರಿಂದ ಯಾವುದೇ ರೀತಿಯ ಹುಳು ಹುಪ್ಪಟೆ ತಗಲುವುದಿಲ್ಲ. ತಯಾರಿಸಿದ ಕಲಾಕೃತಿಯನ್ನು ಹೆಚ್ಚಾಗಿ ನೆರಳಲ್ಲಿ ಇಡುವುದು ಒಳ್ಳೆಯದು. ಇದರ ಬಾಳಿಕೆಯ ಹಿನ್ನೆಲೆಯಲ್ಲಿ ಪ್ರತಿದಿವಸ

---

೩೫. ಸರೋಜಿನಿ ಬಾಬರ್ : ಮಹಾರಾಷ್ಟ್ರದ ಜನಪದ ಸಾಹಿತ್ಯ ಪು. ೧೦೬ ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ದೆಹಲಿ ೧೯೭೨

೩೬. -ಅದೇ- ಪು. ೦೭

೩೭. -ಅದೇ- ಪು. ೦೮

೩೮. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೧೬೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಬಟ್ಟೆಯಿಂದ ಒರೆಸುತ್ತಾ ಇದ್ದರೆ ಹೆಚ್ಚು ನುಣುಪಾಗಿ ಕಾಣುವುದರ ಜೊತೆಗೆ ಬಾಳಿಕೆಯು ಬರುತ್ತದೆ. ಕಲಾಕೃತಿಗೆ ಬಿಸಿನೀರು ಮತ್ತು ಸೋಪಿನ ಪುಡಿಕಲಸಿದ ನೀರಿನಿಂದ ತೊಳೆಯಕೂಡದು. ಇದರಿಂದ ಬಣ್ಣ ಕ್ರಮೇಣ ಮಾಸುತ್ತದೆ. ಈ ರೀತಿಯ ಕ್ರಮಗಳಿಂದ ಕಲಘಟಗಿಯ ತೊಟ್ಟಿಲುಗಳನ್ನು ಸಂರಕ್ಷಿಸಬಹುದಾಗಿದೆ.

*****



೧. ಐತಿಹಾಸಿಕ ರುಸ್ತುಂ ಸಾಹೇಬ ಕೆರೆ



೨. ಐತಿಹಾಸಿಕ ರುಸ್ತುಂ ಸಾಹೇಬ ಕೆರೆ ದಡದಲ್ಲಿರುವ ಶಾಸನಗಳು



೩. ಕಲಘಟಗಿಯ ಅಕ್ಕಿ ಗಿರಣಿ



೪. ಕಲಘಟಗಿಯ ಬೆಂಕಿ ಕಡ್ಡಿಯ ಕಾರ್ಖಾನೆ



೫. ಕಲಘಟಗಿಯ ಮಾರುತಿ ದೇವಸ್ಥಾನ



೬. ಕಲಘಟಗಿಯ ವೆಂಕಟೇಶ್ವರ ದೇವಸ್ಥಾನ



೭. ಕಲಘಟಗಿಯ ಗ್ರಾಮ ದೇವತೆಗಳ ದೇವಸ್ಥಾನಗಳು



೮. ಕಲಘಟಗಿಯ ಬುಟ್ಟಿ ಕಟ್ಟುವರು



೯. ಕಲಘಟಗಿಯ ಕುಂಬಾರರು

ನಮ್ಮ ಪೂರ್ವಜರ ಮುಖ್ಯ ಕಸುಬು ಕೃಷಿಯೇ ಆಗಿದೆ. ಅಲ್ಲದೆ ಮಳೆ, ಬಿಸಿಲು, ಚಳಿ, ಗಾಳಿಯಿಂದ ರಕ್ಷಣೆ ಪಡೆಯಲು ವಸತಿ ನಿರ್ಮಾಣ ಕಾರ್ಯ, ದೈನಂದಿನ ಬದುಕಿನಲ್ಲಿ ದೈವಿ ಆರಾಧನೆಗೆ ಕೆಲವು ವಿಶಿಷ್ಟ ಆಚರಣೆಗಳು ಹಾಗೂ ಮನರಂಜನೆಗೆ ಕೆಲವು ಆಟಗಳು, ಹೀಗೆ ಮುಂತಾದವುಗಳನ್ನು ಹುಟ್ಟುಹಾಕಿಕೊಂಡು ಜೀವನ ನಡೆಸುತ್ತಾ ಬಂದಿದ್ದಾರೆ. ಮನುಷ್ಯ ಜೀವನದಲ್ಲಿ ದಿನನಿತ್ಯದ ಪ್ರತಿಯೊಂದು ಕೆಲಸ ಕಾರ್ಯಗಳಿಗೆ ವಿವಿಧ ರೀತಿಯ ವಸ್ತುಗಳು ಬಳಸಲ್ಪಡುವವು.

ಹಳೆಯ ಮತ್ತು ಹೊಸ ಶಿಲಾಯುಗದಲ್ಲಿ ಮಾನವನು ಅಲೆಮಾರಿ ಅಥವಾ ಬೇಟೆಗಾರಿಕೆಯ ಜೀವನ ಹಂತದಲ್ಲಿಯೇ ತನ್ನ ಹಸಿವನ್ನು ತಣಿಸಲು ಕೆಲವು ಕಾಡುಪ್ರಾಣಿಗಳನ್ನು ಕೊಲ್ಲುವುದಕ್ಕೆ ಸತ್ತ ಪ್ರಾಣಿಗಳ ಚರ್ಮದಿಂದ ಕವಚಗಳನ್ನು ತಯಾರಿಸುವುದಕ್ಕೆ ಅಲ್ಲದೆ ಬೆಳೆ ಬೆಳೆಯಲು ಹುಟ್ಟುಹಾಕಿಕೊಂಡ ಅನೇಕ ಸಲಕರಣೆಗಳು ಮಾನವನ ಸೌಂದರ್ಯ ದೃಷ್ಟಿ ಮತ್ತು ಕಲಾ ಜಾಣ್ಮೆಯನ್ನು ಎತ್ತಿ ತೋರಿಸುತ್ತವೆ. ಹೀಗೆ ಬದುಕಿನ ಮುನ್ನುಡಿಗೆ ಉಪಯುಕ್ತವಾಗುವ ಸಲಕರಣೆಗಳೇ ಮುಂದೆ ಕರಕುಶಲ ಕಲೆಗಳಿಗೆ ದಾರಿ ಮಾಡಿಕೊಟ್ಟಿವೆ. ಅಂದಿನಿಂದ ಇಂದಿನವರೆಗೂ ಕುಶಲಕರ್ಮಿಗಳು ಹಾಗೂ ಅನೇಕ ಕಲಾವಿದರು, ವಿವಿಧ ವಸ್ತುಗಳಲ್ಲಿ ನವೀನ ರೀತಿಯ ವಿನ್ಯಾಸಗಳನ್ನು ಮೂಡಿಸಲು ತಮಗೆ ಬೇಕಾದಂತಹ ಪರಿಕರಗಳನ್ನು ತಯಾರಿಸಿಕೊಳ್ಳುತ್ತಾ ಬಂದಿದ್ದಾರೆ.[೧]

ಇತ್ತೀಚಿನ ದಿನಗಳಲ್ಲಿ ವಿಜ್ಞಾನ ಬೆಳೆದಂತೆ ಮನುಷ್ಯನ ಜ್ಞಾನ ಹೆಚ್ಚಿದೆ ಎಂದು ನಾವು ಭಾವಿಸುತ್ತೇವೆ ನಿಜ. ಆದರೆ ವಿಜ್ಞಾನ ಎಷ್ಟೇ ಬೆಳೆದರೂ ಅದು ಮನುಷ್ಯನ ಬಗ್ಗೆ ವಿವರಣೆಯನ್ನು ಕೊಟ್ಟಿದೆಯೇ ಹೊರತು ಮನುಷ್ಯ ಅದರ ಕೈಗೆ ಸಿಕ್ಕಿಲ್ಲ, ತತ್ರಜ್ಞಾನದ ಬೆಳವಣಿಗೆ ಹಾಗೂ ಬಳಕೆಯಿಂದ ಕೈಗಾರಿಕೆಗಳು ಬೆಳೆದು ಐಶ್ವರ್ಯ ಹೆಚ್ಚಾಗಿದೆ.[೨] ವಿದ್ಯುತ ಚಾಲಿತ ಯಂತ್ರಗಳಿಂದ ಕಾಷ್ಠ ಮಾಧ್ಯಮ, ಶಿಲೆಯ ಮಾಧ್ಯಮ, ಲೋಹ ಮಾಧ್ಯಮಗಳಲ್ಲಿ ಸೂಕ್ಷ್ಮಕುಸುರಿ ಕೆತ್ತನೆಯ ಕೆಲಸವನ್ನು ನಾವು ಇಂದಿಗೂ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಕಾಣುತ್ತೇವೆ. ಪ್ರಮುಖವಾಗಿ ಕಲಘಟಗಿಯ ಕಲೆಯ ಪರಿಕರ ಕುರಿತು ಹೇಳುವುದಾದರೆ. ಇಲ್ಲಿ ಹೆಚ್ಚಾಗಿ ಸಾಗವಾನಿ, ಶಿವಣ್ಣಿ, ಮಾವು, ಬನ್ನಿ, ಕುಂಚಗಳು, ಬಣ್ಣಗಳು, ಉಳಿಗಳು ಇನ್ನೂ ಅನೇಕ ರೀತಿಯಲ್ಲಿ ಉಪಯೋಗಿಸಲ್ಪಡುವ ಪರಿಕರಗಳು ಬಳಕೆಯಾಗುತ್ತವೆ.

ಸಾಮಾನ್ಯವಾಗಿ ತೊಟ್ಟಿಲು ತೂಗುಮಂಚ, ಉಯ್ಯಾಲೆ, ಟೀಪಾಯಿ, ಸೋಪಾ, ಸ್ಟ್ಯಾಂಡಿಂಗ್ ತೊಟ್ಟಿಲು ಆಟಿಕೆ ಸಾಮಾನುಗಳು ಇನ್ನೂ ಮುಂತಾದವುಗಳನ್ನು ನಿರ್ಮಿಸುವಾಗ ಮರ, ಕಬ್ಬಿಣ, ಹಿತ್ತಾಳೆ, ಬಣ್ಣಗಳು, ಕುಂಚಗಳು, ಉಳಿಗಳು ಇನ್ನೂ ಅನೇಕಾನೇಕ ಪರಿಕರಗಳು ಗ್ರಾಮದೇವತೆಯ ಮೂರ್ತಿಶಿಲ್ಪವನ್ನು ರಚಿಸುವಾಗ ಇಲ್ಲಿಯೂ ಸಹ ಸಾಗವಾನಿ, ಬನ್ನಿ, ಮಾವು, ಶಿವಣ್ಣಿ, ಬಣ್ಣಕುಂಚಗಳು, ಅಲಂಕರಣ ವಿವಿಧ ಬಣ್ಣದ ಬಟ್ಟೆಗಳು ಕಬ್ಬಿಣ ತುಂಡುಗಳು ಇನ್ನೂ ಮುಂತಾದ ಪರಿಕರಗಳ ಬಳಕೆಯಾಗುತ್ತವೆ.

೦೧. ಡಾ ಶಿವಪ್ರಕಾಶ ತುಕ್ಕಣ್ಣವರ : ಕರ್ನಾಟಕ ರಥಶಿಲ್ಪಕಲೆ, ಪು. ೩೬ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪
೦೨ ಶಂಕರ ಪಾಟೀಲ : ಚಿತ್ರಕಲಾ ಚಿಂತನೆ, ಪು. ೬೩ ಪ್ರಗತಿ ಪ್ರಕಾಶನ್ ದಾವಣಗೆರೆ ೧೯೯೫

ಈ ಎಲ್ಲ ಪರಿಕರಗಳು ಕಲಘಟಗಿಯ ಕಲೆಗೆ ಮಾತ್ರ ಸಿಮೀತಗೊಂಡು ನಿರ್ಮಾಣವಾದ ಕಲಾಕೃತಿಗಳಾಗಿವೆ.

**ಸಿದ್ಧತಾ ಪರಿಕರ, ಬಣ್ಣಗಳ ತಯಾರಿಕೆ**

ಧಾರವಾಡ ಜಿಲ್ಲೆಯ ಕಲಘಟಗಿಯು ಬಣ್ಣದ ತೊಟ್ಟಿಲುಗಳ ತಯಾರಿಕೆಯ ಕೇಂದ್ರವಾಗಿದ್ದು, ಬಹುಹಿಂದಿನಿಂದಲೂ ಈ ವೃತ್ತಿಯಲ್ಲಿ ನಿರತವಾಗಿವೆ. ಈ ಕಲಾವಿದರು ಬಳಸುವ ಅರಗಿನ ಬಣ್ಣಗಳು ನೂರಾರು ವರ್ಷಗಳ ಬಾಳಿಕೆ ಇವೆ. ಇವರ ಅರಗಿನ ಬಣ್ಣ ತಯಾರಿಕೆಯ ಕುರಿತು ಈ ಕೆಳಗಿನಂತೆ ನೋಡಬಹುದಾಗಿದೆ.

ಈ ಕಲಾವಿದರು ಬಿಡಿಸಿದ ಚಿತ್ರಗಳಿಗೆ ಕೊಡುವ ಬಣ್ಣವನ್ನು ಸ್ವತಃ ತಾವೇ ತಯಾರಿಸಿಕೊಳ್ಳುತ್ತಾರೆ. ಅದಕ್ಕಾಗಿ ಮಾರುಕಟ್ಟೆಯಲ್ಲಿ ಸಿಗುವ ಅರಗು, ರಾಳ, ರೇವಚಿನ್ನಿ, ಗುಬ್ಬಿರಾಳ, ಹೀರೆಡಾಕು, ಮುಂತಾದವುಗಳನ್ನು ಬೆಳಗಾಂವ, ಮುಂಬೈ, ಹೆಬಸೂರು, ಹುಬ್ಬಳ್ಳಿ, ಮುಂತಾದ ಪ್ರದೇಶಗಳಿಂದ ತಂದು ಇವುಗಳೊಂದಿಗೆ ಪುಡಿ ವರ್ಣಗಳನ್ನು ಬಳಸಿ ಕರಗಿಸುವ ಮೂಲಕ ಅರಗು ಬಣ್ಣ ತಯಾರಿಸುತ್ತಾರೆ. ಕರಗಿಸುವ ವಿಧಾನದಲ್ಲಿ ಮುಖ್ಯವಾಗಿ ಎರಡು ಬಿದಿರಿನ ಕೋಲುಗಳನ್ನು ಬಳಸುತ್ತಾರೆ. ನಂತರ ಬೆಂಕಿಯ ಸಹಾಯದಿಂದ ಮೂಲವರ್ಣಗಳನ್ನು ಪಡೆಯುವ ವಿಧಾನವಾಗಿದೆ. ಮೊದಲೂ ಬಿದಿರು ಕೋಲು ತುದಿಯನ್ನು ಸ್ವಲ್ಪಕಾಯಿಸಿ ಅರಗಿನಲ್ಲಿ ಅದ್ದಿ ಆ ಅರಗು ಬಿದಿರು ಕೋಲಿನ ತುದಿಗೆ ಅಂಟಿಕೊಳ್ಳುತ್ತದೆ. ಮತ್ತೆ ಇನ್ನೊಂದು ಬಿದಿರು ತುದಿಯನ್ನು ಸ್ವಲ್ಪಕಾಯಿಸಿ ರಾಳದಲ್ಲಿ ಅದ್ದಿದರೆ ಆ ರಾಳ ಕೋಲಿಗೆ ಅಂಟಿಕೊಳ್ಳುತ್ತದೆ. ಹಾಗೇ ಮತ್ತೆ ಎರಡು ಕೋಲು ತುದಿಗಳನ್ನು ಬೆಂಕಿಯಿಂದ ಕಾಯಿಸಿ ಅರಗುರಾಳವನ್ನು ಎರಡು ಕೋಲಿನಿಂದ ತಕ್ಕಿ ಮಿಶ್ರಣ ಮಾಡುತ್ತಾರೆ. ಈ ಹಂತದಲ್ಲಿ ಅರಗು ಎರಡು ಪ್ರಮಾಣ ರಾಳ ಒಂದು ಪ್ರಮಾಣ ಮೊದಲಿಗೆ ತೆಗೆದುಕೊಂಡಿರುತ್ತಾರೆ. ನಂತರ ಅದರಲ್ಲಿಯ ಒಂದು ಕೋಲಿನಿಂದ ಅರಗು ಮಿಶ್ರಿತ ರಾಳವನ್ನು ಬೇರ್ಪಡಿಸುತ್ತಾರೆ. ನಂತರದಲ್ಲಿ ಇದು ರಾಗಿಯ ಮುದ್ದೆಯ ಹಾಗೆ ಜಿಗುಟಾಗಿರುತ್ತದೆ. ಇದು ಇನ್ನೂ ಬಿಸಿ ಇರುವಾಗಲೇ ವೃತ್ತಾಕಾರ (ರೊಟ್ಟಿಯ) ವಾಗಿ ಮಾಡಿಕೊಂಡು, ಮತ್ತೆ ಇದರಲ್ಲಿ ನಾಲ್ಕು ಭಾಗಮಾಡಿ ಕತ್ತರಿಸಿಕೊಂಡು ಇದರಲ್ಲಿಯ ಮೂರು ಭಾಗವನ್ನು ತೆಗೆದುಕೊಂಡು ಮತ್ತೆ ಬಿದಿರನ್ನು ಸ್ವಲ್ಪಕಾಯಿಸಿ ಮೂರು ಭಾಗವನ್ನು ಅದಕ್ಕೆ ಅಂಟಿಸಿ 'ಪೆವಡಿ' ಹಳದಿ (ಪುಡಿಬಣ್ಣ) ಬಣ್ಣದಲ್ಲಿ ಅದ್ದಿ ಮತ್ತೆ ಕಾಯಿಸುವುದರಿಂದ ಹಳದಿಯ ಅರಗಿನ ಬಣ್ಣ ತಯಾರಾಗುತ್ತದೆ. ಮತ್ತೆ ಇದರಲ್ಲಿ ಮೂರು ಭಾಗಮಾಡಿ ಒಂದು ಹಳದಿ ಭಾಗವನ್ನು ತೆಗೆದುಕೊಂಡು ಗುಲಾಬಿ 'ಕುಪ್ಪಿ' (ಪುಡಿವರ್ಣ) ಸೇರಿಸಿ ಮೇಲೆ ಹೇಳಿದ ಹಾಗೆ ತಯಾರಿಸಿ ಕೆಂಪು ವರ್ಣವನ್ನು ಪಡೆಯುತ್ತಾರೆ. ಎರಡನೆಯ ಹಳದಿ ಇನ್ನೊಂದು ಭಾಗಕ್ಕೆ ನೀಲಿ ಕುಪ್ಪಿ ಪುಡಿವರ್ಣ ತೆಗೆದುಕೊಂಡು ಮೇಲೆ ಹೇಳುವ ಹಾಗೆ ಮಾಡುವುದರಿಂದ ಹಸಿರು ವರ್ಣ ತಯಾರಿಸುತ್ತಾರೆ, ಮೂರನೆಯ ಭಾಗವನ್ನು ಹಾಗೇ ಬಿಡುವುದರಿಂದ ಇದು ಹಳದಿ ವರ್ಣವಾಗಿಯೇ ಉಳಿಯುತ್ತದೆ. ನಾಲ್ಕನೆಯ ಭಾಗಕ್ಕೆ ಚಿಮಣದ ಕಪ್ಪು ಕಾಡಿಗೆಗೆ ಸ್ವಲ್ಪ ನೀರನ್ನು ಚಿಮುಕಿಸಿ ಕೈಯಿಂದ ಕಲಿಸಿ ಮೇಲೆ ಹೇಳುವ ಹಾಗೇ ಮಾಡುವುದರಿಂದ ಕಪ್ಪು ಅರಗಿನ ಬಣ್ಣ ತಯಾರಿಸುತ್ತಾರೆ.

ಇದಲ್ಲದೆ ಜಾಂಬಳಿ ಕುಪ್ಪಿ ಪುಡಿಯಲ್ಲಿ ನೇರವಾಗಿ ಅರಗು ಮಿಶ್ರಿತ ರಾಳದಲ್ಲಿ ಕಾಯಿಸಿ ಜಾಂಬಳಿ ವರ್ಣ ಪಡೆಯುತ್ತಾರೆ. ಇದೇ ರೀತಿಯಾಗಿ ಗುಲಾಬಿ ವರ್ಣವನ್ನು ನೇರವಾಗಿಯೇ ಪಡೆಯುತ್ತಾರೆ. ಹೀಗೆ ಪ್ರತಿಯೊಂದನ್ನು ತಯಾರಿಸುವಲ್ಲಿ ಬೆಂಕಿಯ ಸಹಾಯ ಮುಖ್ಯವಾಗಿರುತ್ತದೆ. ಈ ವರ್ಣಗಳು ತಯಾರಿಸಿದ ತಕ್ಷಣವೇ ಅದನ್ನು ಕೈಯಿಂದ (ಶಾವಗಿ) ಹೊಸೆದು ಅಥವಾ ಚಪ್ಪಟೆಯಾಕಾರ ಮಾಡಿ ಕತ್ತರಿಸಿ ಸ್ವಲ್ಪ ನೀರನ್ನು ಚುಮುಕಿಸಿದರೆ ಮತ್ತೆ ಗಣರೂಪ ಪಡೆಯುತ್ತದೆ. ಮತ್ತೆ ಪೀಠೋಪಕರಣಗಳಿಗೆ ಬಳಸುವ ಸಮಯದಲ್ಲಿ ಮತ್ತೆ ಈ ಬಣ್ಣದ ತುಂಡುಗಳನ್ನು ಬೆಂಕಿಯಿಂದ ಕಾಯಿಸಿ ಗಾಡಕ್ಕೆ ಹಾಕಿದ ಕಟ್ಟಿಗೆಯು ತಿರುಗುತ್ತಿರುವಾಗ ಬಳಸಲಾಗುತ್ತದೆ. ಇಲ್ಲಿ ಕಟ್ಟಿಗೆಯೂ ವೃತ್ತಾಕಾರವಾಗಿ ತಿರುಗುವ ಹಂತದಲ್ಲಿ ವರ್ಣವೂ ಸಹ ವೃತ್ತಾಕಾರವಾಗಿ ಅಂಟಿಕೊಳ್ಳುತ್ತದೆ.

ಇಲ್ಲಿ ಅತಿಮುಖ್ಯವಾದ ಇನ್ನೊಂದು ಅಂಶ ಬಣ್ಣಗಳ ಮಿಶ್ರಣ ಇಲ್ಲಿ ತೊಟ್ಟಿಲು, ತೂಗುಮಂಚ, ಟೀಪಾಯಿ, ಕುರ್ಚಿ, ಸೋಪಾ, ಮುಂತಾದವುಗಳಿಗೆ ಅರಗಿನ ಬಣ್ಣದ ಷೇಡಿಂಗ್ ಮಾಡುವುದು ತುಂಬಾ

ಕುತೂಹಲಕಾರಿಯಾಗಿದೆ. ಇಲ್ಲಿ ಗಾಡಕ್ಕೆ ಹಾಕಿದ ಕಟ್ಟಿಗೆಯು ತಿರುಗುತ್ತಿರುವಾಗ ಬೇಕಾದ ವರ್ಣಲೇಪನ ಮಾಡುತ್ತಾರೆ. ವರ್ಣಗಳ ಷೇಡಿಂಗ್ ಬೇಕಾದರೆ ಬೆಂಕಿಯಲ್ಲಿ ಕಾಯಿಸುತ್ತಾ ಒಂದು ವರ್ಣದ ಪಕ್ಕ ಇನ್ನೊಂದು ವರ್ಣ ಲೇಪನಮಾಡಿ ನಂತರ ಕೇದಗಿಯ ಎಲೆಯನ್ನು ಒಳ್ಳೆಣ್ಣೆಯಲ್ಲಿ ಅದ್ದಿ ಜೋರಾಗಿ ಕೈಯಿಂದ ಒತ್ತಿಹಿಡಿದು ಷೇಡಿಂಗ್ ಮಾಡುತ್ತಾರೆ. ಉದಾ: ಹಳದಿ, ಪಕ್ಕದಲ್ಲಿ ನೀಲಿ ಎರಡು ಮಿಶ್ರಿತ ಹಸಿರು ವರ್ಣ ಬರುವಹಾಗೆ ಮಾಡುತ್ತಾರೆ. ಇದಕ್ಕೆ ಈ ಕಲಾವಿದರು 'ಷೇಡಿಂಗ್' ಎಂದು ಹೇಳುತ್ತಾರೆ. ಇಲ್ಲಿ ಕೇದಗಿಯ ಎಲೆಯನ್ನು ಬಳಸುವುದರಿಂದ ಬಣ್ಣಗಳ ಮಿಶ್ರಣ ಹಾಗೆ ನುಣುಪಾಗಿ ಹೊಳೆಯುತ್ತವೆ. ಈ ಅರಗಿನ ಬಣ್ಣ ಗಾಡಕ್ಕೆ ಹಾಕಿದ ಕಟ್ಟಿಗೆ ತಿರುಗುತ್ತಿರುವಾಗ ಮಾತ್ರ ಬಳಕೆಯಾಗುತ್ತದೆ.

**ಬಿಳಿವರ್ಣ ತಯಾರಿಕೆ**

ಈ ವರ್ಣ ತಯಾರಿಕೆಯಲ್ಲಿ ನಾಲ್ಕು ರೀತಿಯ ವಿಧಗಳನ್ನು ಕಾಣಬಹುದು.

೧] ಸುಣ್ಣದ ಕಲ್ಲಿನಿಂದ ಬಿಳಿವರ್ಣ

೨] ಚಾಕ್ ಪೌಡರನಿಂದ ಬಿಳಿವರ್ಣ

೩] ಜಿಂಕ್ ಪೌಡರನಿಂದ ಬಿಳಿವರ್ಣ

೪] ಬಾಳೇ ಕಲ್ಲಿನಿಂದ ಬಿಳಿವರ್ಣ

ಈ ರೀತಿಯಾಗಿ ತಯಾರಿಸಿದ ಹಾಗೂ ಮಾರ್ಕೆಟ್‌ನಿಂದ ದೊರಕುವ ವರ್ಣಗಳನ್ನು ಕಲಘಟಗಿಯ ಕಲಾವಿದರು ಉಪಯೋಗಿಸುತ್ತಾರೆ.

**೧. ಸುಣ್ಣದ ಕಲ್ಲಿನಿಂದ ಬಿಳಿವರ್ಣ**

ಇಲ್ಲಿ ಸುಣ್ಣದ ಕಲ್ಲುಗಳನ್ನು ಮೊದಲು ನೀರಿನಲ್ಲಿ ಹಾಕಿ, ಅದರಲ್ಲಿ ಉಳಿದಂತಹ ಹಸಿಕಲ್ಲುಗಳನ್ನು ಬೇರ್ಪಡಿಸಿಕೊಂಡು ದೊಡ್ಡದಾದ ಕಲ್ಲಿನ ಮೇಲೆ ಈ ಹಸಿಕಲ್ಲುಗಳನ್ನು ಹಾಕಿ ಗಂಧಬರುವವರೆಗೆ ಅರೆದು ನಂತರ ಸ್ವಲ್ಪ ಸಮಯದ ನಂತರ ನೀರಿನ ಅಂಶ ಹೋಗಿ ಗಟ್ಟಿಯಾಗುತ್ತದೆ. ಆ ಮೇಲೆ ಇದನ್ನು ತಮಗೆ ಬೇಕಾದ ಗಾತ್ರಕ್ಕೆ ಉಂಡೆಮಾಡಿಕೊಂಡು ಬಳಸುವ ಹಂತದಲ್ಲಿ ಇದಕ್ಕೆ ಜಾಲಿಯ ಸೊಸಿದ ಅಂಟನ್ನು ಮಿಶ್ರಣಮಾಡಿ ಚಿತ್ರರಚಿಸಲಾಗುತ್ತದೆ. ಈ ಪದ್ಧತಿಯು ವಿಶೇಷವಾಗಿ ಗಂಗಾಧರ, ಫೀರಾಜೆ, ಸಾವುಕರ್ ಕಲಾವಿದರು ಮೂರು ನಾಲ್ಕು ತಲೆಮಾರುಗಳಿಂದ ಮಾಡುತ್ತಾ ಇಂದಿಗೂ ಸಹ ಇವರು ಇದೇ ಮಾದರಿಯ ವರ್ಣವನ್ನೇ ಬಳಸುತ್ತಾರೆ.

**೨. ಚಾಕ್ ಪೌಡರ್‌ನಿಂದ ಬಿಳಿವರ್ಣ**

ಇಲ್ಲಿ ಚಾಕ್ ಪೌಡರ್‌ನೊಂದಿಗೆ ನೆನೆಹಾಕಿ ಸೋಸಿದ ಜಾಲಿಯ ಅಂಟನ್ನು ಬೆರೆಸಿಕೊಂಡು ಲೇಪನ ಮಾಡಲಾಗುತ್ತದೆ. ಇಲ್ಲಿ ಮುಖ್ಯವಾಗಿ ಬಿಳಿವರ್ಣ ಕೈಗೆ ಹತ್ತದ ಹಾಗೇ ಅಂಟನ್ನು ಮಿಶ್ರಣಮಾಡಬೇಕು. ನಂತರ ಒಣಗಿಸಿ ಇದರ ಮೇಲೆ ಕಲ್ಲಿನಿಂದ ತಿಕ್ಕಿ ಚಿತ್ರ ಬರೆಯಲಾಗುವುದು.

**೩. ಜಿಂಕ್ ಪೌಡರನಿಂದ ಬಿಳಿವರ್ಣ**

ಈ ವರ್ಣವು ಸಹ ತೊಟ್ಟಿಲು ಮತ್ತು ಗ್ರಾಮದೇವತೆ, ಪೀಠೋಪಕರಣಗಳಿಗೂ ಬಳಸುವ ಹಂತದಲ್ಲಿ. ಸೋಸಿದ ಜಾಲಿಯ ಅಂಟನ್ನು ಇಲ್ಲಿಯೂ ಸಹ ಮಿಶ್ರಣ ಮಾಡಿ ಸುಂದರವಾದ ನಕ್ಷಾವಿನ್ಯಾಸಗಳನ್ನು ಮೂಡಿಸಿ ನಂತರ ಇದಕ್ಕೆ ಗ್ಲೇಜಿಂಗ್ ಎಣ್ಣೆ (ವಾರ್ನಿಸ್)ಯನ್ನು ಮೇಲು ಲೇಪನವಾಗಿ ಬಳಸುತ್ತಾರೆ. ಇದರಿಂದ ಚಿತ್ರಗಳು ಬಹಳ ಕಾಲದವರೆಗೆ ಬಾಳುತ್ತವೆ. ಎಂದು ಹೇಳುತ್ತಾರೆ.

**೪. ಬಾಳೆಕಲ್ಲಿನಿಂದ ಬಿಳಿವರ್ಣ**

ಇದು ವಿಶೇಷವಾಗಿ ಗಣಪತಿಗೆ ಬಳಸುವ ವರ್ಣವಾಗಿದೆ. ಇಲ್ಲಿ ಬಾಳೆಕಲ್ಲುಗಳನ್ನು ತಂದು ದೊಡ್ಡ ಕಲ್ಲಿನ ಮೇಲೆ ಹಾಕಿ ಅರೆಯುವುದರಿಂದ ಬಿಳಿದಾದ ಪೌಡರ ಬರುತ್ತದೆ. ನಂತರ ಇದಕ್ಕೆ ಅಂಟನ್ನು ಮಿಶ್ರಣ ಮಾಡಿ ಗಣಪತಿಗೆ ಬಳಸಿ, ನಂತರ ಆಯಿಲ್ ಪೇಂಟ್ ಬಳಸುವರು.

ಈ ನಾಲ್ಕು ಹಂತಗಳಲ್ಲಿ ದೊರಕುವ ಬಿಳಿವರ್ಣವನ್ನು ಇಲ್ಲಿಯ ಕಲಾವಿದರು ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ.

**ಪವಡಿ ಜಲವರ್ಣ ಬಣ್ಣಗಳು ( ಪುಡಿ ಬಣ್ಣ)**

ಈ ವರ್ಣಗಳು ಕಲಾವಿದರಿಗೆ ನೇರವಾಗಿ ಮಾರ್ಕೆಟ್‌ನಿಂದ ದೊರೆಯುತ್ತವೆ. ಇಲ್ಲಿ ದೊರೆಯುವಂತಹ ಕೇಲವೆ ವರ್ಣಗಳು ೧) ಹಸಿರು ೨) ನೀಲಿ ೩) ಬಿಳಿ ೪) ಹಳದಿ ೫) ಕರಿ ೬) ಕೆಂಪು ೭) ಕೇಸರಿ ವರ್ಣಗಳಾಗಿವೆ. ಇಂತಹ ವರ್ಣಗಳಿಗೆ ನೀರನ್ನು ಮಿಶ್ರಣ ಮಾಡಿ ಸೋಸಿದ ಜಾಲೀಯ ಅಂಟನ್ನು ಪ್ರಮಾಣಕ್ಕೆ ತಕ್ಕಂತೆ ಮಿಶ್ರಣಮಾಡಿ ಇದನ್ನು ದೇವಿಯ ಮೂರ್ತಿ, ತೊಟ್ಟಿಲು, ಕುರ್ಚಿ, ಟೀಪಾಯಿ, ಸೋಪಾ, ಇನ್ನೂ ಮುಂತಾದ ಪೀಠೋಪಕರಣಗಳಿಗೆ ಬಳಸುವುದಾಗಿದೆ. ನಂತರ ಈ ಚಿತ್ರದ ಮೇಲೆ ವಾರ್ನೀಸ್ ಎಣ್ಣಿಯನ್ನು ಬಳಸುತ್ತಾರೆ. ಈ ಚಿತ್ರಗಳು ಅರವತ್ತೂ ವರ್ಷಗಳ ಕಾಲ ಬಾಳಿಕೆ ಬರುತ್ತವೆ ಎನ್ನುತ್ತಾರೆ.

**ದೇವಿಗೆ ಬಳಸುವ ಬಣ್ಣಗಳು**

ಇಲ್ಲಿ ವಿಶೇಷವಾಗಿ ಗ್ರಾಮದೇವಿಯ ಮೂರ್ತಿಗಳಿಗೆ ಬಳಸುವ ಬಣ್ಣಗಳು ಕುತೂಹಲವುಂಟು ಮಾಡುತ್ತವೆ. ಮಾರ್ಕೆಟ್‌ನಲ್ಲಿ ಸಿಗುವ ತವರ ಮತ್ತು ಮೀನಸರಿ ಎರಡನ್ನು ಪ್ರಮಾಣಕ್ಕೆ ತಕ್ಕಂತೆ ಕೂಡಿಸಿ ಕುಟ್ಟಿ ಮೃದುವಾಗಿಸಿಕೊಂಡು ನಂತರ ಇದಕ್ಕೆ ನೀರನ್ನು ಮಿಶ್ರಣಮಾಡಿ ಗ್ರಾಮದೇವತೆಯ ಯಾವ ಭಾಗಕ್ಕೆ ಬೆಳ್ಳಿಯ ವರ್ಣ ಬೇಕೋ ಆ ಭಾಗಕ್ಕೆ ಇದನ್ನು ಮೊದಲು ಲೇಪಿಸುತ್ತಾರೆ. ಇದು ಮೊದಲೂ ಬೂದು ವರ್ಣವಾಗಿರುತ್ತದೆ. ನಂತರ ಇದಕ್ಕೆ 'ಒಪ್ಪ' ಹಾಕುವುದು ಅಂದರೆ ಒಪ್ಪದ ಕಲ್ಲಿನಿಂದ ತಿಕ್ಕಿದರೆ ಬೂದುವರ್ಣವೆಲ್ಲ ಬೆಳ್ಳಿಯ ವರ್ಣವಾಗುತ್ತದೆ. ಹಾಗೆ ಬಂಗಾರ ವರ್ಣಬೇಕಾದಲ್ಲಿ ಒಪ್ಪಹಾಕಿದ ಬೆಳ್ಳಿಯ ವರ್ಣದ ಮೇಲೆ ಕೇಸರಿಪುಡಿ ವರ್ಣದಲ್ಲಿ ಪ್ರೇಂಚ್ ಪಾಲೀಶನ್ನು ಮಿಶ್ರಣಮಾಡಿ ಲೇಪಿಸುವುದರಿಂದ ಬಂಗಾರ ವರ್ಣ ಬರುತ್ತದೆ. ಹಾಗೆ ಬೇರೆ ಬೇರೆ ವರ್ಣಗಳು ಬೇಕಾದಲ್ಲಿ ಪವಡಿ ಜಲವರ್ಣ ಬಳಕೆಯಂತೆ ತಯಾರಿಸಿ ದೇವಿಯ ಮೂರ್ತಿಗಳಿಗೆ ಉಪಯೋಗಿಸಿ ಮೇಲೆ "ರೋಗಂದ" ಎಣ್ಣೆಯನ್ನು ಲೇಪಿಸಲಾಗುತ್ತದೆ.

**ಕುಂಚಗಳ ತಯಾರಿಕೆ**

ಚಿತ್ರಗಳಿಗೆ ಬಣ್ಣಬಳಿಯಲು ಕುಂಚಗಳನ್ನು ತಾವೇ ಸಿದ್ಧಪಡಿಸಿಕೊಳ್ಳುತ್ತಾರೆ. ಇದಕ್ಕಾಗಿ ಇವರು ಆಡಿನ, ಅಳಿಲಿನ ಕೂದಲುಗಳನ್ನು ಕುಂಚಗಳ ತಯಾರಿಕೆಗೆ ಉಪಯೋಗಿಸುತ್ತಾರೆ. ಇದರಲ್ಲಿ ಸಣ್ಣದಾದ ಆಡಿನಮರಿಯ ಬಣ್ಣ ಮೇಲಿನ ಕೂದಲುಗಳು ಮತ್ತು ಅಳಿಲಿನ ಬಾಲದ ಕೂದಲುಗಳನ್ನು ಉಪಯೋಗಿಸುತ್ತಾರೆ.

* ಆಡಿನ ಕೂದಲಿಂದ ತಯಾರಿಸಿದ ಕುಂಚದಿಂದ ಬಣ್ಣ ತುಂಬುಲಿಕ್ಕೆ ಉಪಯೋಗಿಸುತ್ತಾರೆ.

* ಅಳಿಲಿನ ಕೂದಲಿಂದ ತಯಾರಿಸಿದ ಕುಂಚಗಳಿಂದ ಸೂಕ್ಷ್ಮಚಿತ್ರಗಳನ್ನು ಅಲ್ಲದೇ ಇದರಿಂದ ಚಿತ್ರದ ಹೊರರೇಖೆಯನ್ನು ಎಳೆಯುವದಕ್ಕೆ ಬಳಸುತ್ತಾರೆ.

ಆಡಿನ ಕೂದಲುಗಳನ್ನು ಕತ್ತರಿಸುವಾಗ ಒಂದು ಕುಂಚಕ್ಕೆ ಬೇಕಾಗುವಷ್ಟು ಕೂದಲುಗಳನ್ನು ಕೈಯಿಂದ ಕತ್ತರಿಸಿ ನೀರಿನಲ್ಲಿ ಹಾಗೇ ಅದ್ದೀ ಒಂದು ಬಟ್ಟೆಯ ಉದ್ದವಾದ ತುಂಡನ್ನು ತೆಗೆದುಕೊಂಡು ಅದಕ್ಕೆ ನೀರು ಚಿಮುಕಿಸಿ ಕತ್ತರಿಸಿದ ಕೂದಲನ್ನು ಹಾಗೇ ಇಟ್ಟು ಬಟ್ಟೆಯನ್ನು ಮಡಚಬೇಕು. ನಂತರ ಮತ್ತೆ ಕೂದಲನ್ನು ಕತ್ತರಿಸಿ ಮೇಲೆ ಹೇಳಿದ ಹಾಗೇ ಮಾಡಿ ಬಟ್ಟೆಯಲ್ಲಿ ಇಟ್ಟು ಬಟ್ಟೆಯನ್ನು ಮಡಚಬೇಕು. ಕತ್ತರಿಸಿದ ಕೂದಲುಗಳನ್ನು ಒಂದು ಬಿದಿರು ಕಡ್ಡಿಯನ್ನು ಒಂದುಗೇಣು ಒಂದು ಬೊಟ್ಟು ಅಳತೆಗೆ ಕತ್ತರಿಸಿಕೊಂಡು ಬಿದಿರು ಕಡ್ಡಿಯನ್ನು ತುದಿಯನ್ನು ಅರ್ಧ ಇಂಚಿನಷ್ಟು ಉಳಿಯಿಂದ ಕೆತ್ತಿ ಪಾಯಿಂಟ್ ಮಾಡಿ ನಂತರ ಆಡಿನ ಕೂದಲುಗಳನ್ನು ನೀರಿನಲ್ಲಿ ಅದ್ದಿ ಪಾಯಿಂಟ್ ಮಾಡಿ ಅದರ ತುದಿಗೆ ದಾರಸುತ್ತಿದರೆ ಕೆಳಭಾಗದಲ್ಲಿ ಕೂದಲುಗಳು ಅಗಲವಾಗುತ್ತವೆ. ಈ ಭಾಗವನ್ನು ಬಿದಿರಿನ ಚೂಪಾದ ತುದಿಯಲ್ಲಿ ಸರಿಯಾಗಿ ಇಟ್ಟು ದಾರಸುತ್ತಿ ನಂತರ ದಾರಕ್ಕೆ ಅಂಟನ್ನು ಹಚ್ಚಿ ಒಣಗಿಸಿ ಅರಗು ಬಣ್ಣವನ್ನು ಲೇಪಿಸುತ್ತಾರೆ. ಈ ರೀತಿಯಾಗಿ ತಮಗೆ ಬೇಕಾದ ಕುಂಚಗಳನ್ನು ತಯಾರಿಸಿಕೊಳ್ಳುತ್ತಾರೆ.

ಡಾ. ಬಿ.ಕೆ. ಹಿರೇಮಠರವರ "ಸಿಜದ ನೆಲೆ" ಗ್ರಂಥದಲ್ಲಿ ಕಲಘಟಗಿಯ ವರ್ಣಚಿತ್ರಕಲೆ ವಿಷಯದ ಕುರಿತು ಹಲವಾರು ವಿಷಯಗಳನ್ನು ಪರಿಚಯಿಸುತ್ತಾ ಕುಂಚಗಳ ಕುರಿತು 'ಡಾ. ಧನವಂತ ಹಾಜವಗೋಳ' ಅವರು ಈ ರೀತಿಯಾಗಿ ಉಲ್ಲೇಖಿಸಿದ್ದಾರೆ. ಕಚ್ಚಾ ಕುಂಚಕ್ಕೆ, ಕತ್ತೆ ಕುದುರೆಗಳ ಕೂದಲು, ಮಧ್ಯಮ ಕುಂಚಕ್ಕೆ ಟಗರಿನ ಕೂದಲು, ಅತೀ ಮೃದುತ್ವದಿಂದ ಕೂಡಿದ ಕುಂಚಗಳಿಗೆ ಅಳಿಲು, ಬೆಕ್ಕುಗಳ ಕೂದಲುಗಳನ್ನು ಬಳಸುತ್ತಾರೆ. ಈ ಕೂದಲುಗಳಿಗಾಗಿ ಬೆಕ್ಕುಗಳನ್ನು ಸಾಕಿರುವುದಾಗಿ ತಿಳಿಯುತ್ತದೆ.[13] ಅಲ್ಲದೇ ಬಣ್ಣಗಳನ್ನು ತಿಳಿಸುತ್ತಾ ಟಗರಿನ ಕೂದಲು, ಕತ್ತೆಯ ಕೂದಲು, ಬೆಕ್ಕುಗಳನ್ನು ಸಾಕುವ ವಿಷಯ ಒಪ್ಪುವುದು ಅಸಾಧ್ಯವಾದ ಮಾತಾಗಿದೆ.

### ರೋಗಂಧ ಎಣ್ಣೆ

ಈ ಕಲಾವಿದರು ಅರಗಿನ ಬಣ್ಣ, ಮತ್ತು ಜಲವರ್ಣಗಳ ಮೇಲೆ ಬಳಸುವ ಎಣ್ಣೆಯೇ 'ರೋಗಂಧ' ಆಗಿದೆ. ಇದರ ತಯಾರಿಕೆಯ ವಿಧಾನ ನೋಡುವುದಾದರೆ ಮೊದಲೂ ಮಣ್ಣಿನ ಮಡಕೆಯ ಅರ್ಧಭಾಗ ಬಟ್ಟೆಯಲ್ಲಿ ಹುದುಗಿಸಿ ನಂತರ ಬೆಂಕಿಯನ್ನು ಹಚ್ಚಿ ಅದರಲ್ಲಿ ಅಗಸಿ ಎಣ್ಣಿಯನ್ನು ಹಾಕಿ ಅದು ಕುದಿಯುವ ಹಂತದಲ್ಲಿ ಬಿಳಿರಾಳ, ಪತ್ರಿ, ಅರಗುಗಳನ್ನು ಹಾಕಿ ಕುದಿಸಿ ನಂತರ ಇದು ಅನದಂತೆ ಆದಾಗ ಇದರ ಹದವನ್ನು ತಿಳಿಯಲು ಕೋಲು ಕಡ್ಡಿಯನ್ನು ಅದರಲ್ಲಿ ಅದ್ದೀ ಮೇಲೆತ್ತಿದ್ದರೆ. ದ್ರವವು ಅದರಗೂಂಟ ಬರುತ್ತದೆ. ನಂತರ ಈ ಎಣ್ಣೆಯನ್ನು ಜಲವರ್ಣ ಮತ್ತು ಅರಗು ಬಣ್ಣದ ಮೇಲೆ ಲೇಪಿಸುತ್ತಾರೆ. ಈ ಲೇಪನದಿಂದ ಚಿತ್ರಗಳು ಕಡಿಮೇ ಅವಧಿಯಲ್ಲಿ ನಾಶವಾಗುವುದಿಲ್ಲ ಎಂದು ಹೇಳುತ್ತಾರೆ.

### ಕೇದಗೆಯ ಎಲೆ

ವೀಠೋಪಕರಣಗಳಿಗೆ ಅತಿ ಅವಶ್ಯವಾಗಿ ಬಳಸುವ ಈ ಕೇದಿಗೆಯ ಎಲೆಯನ್ನು ತಂದು, ಬಿಸಿಲಿನಲ್ಲಿ ಒಣಗಿಸಿ ನಂತರ ಮುಳ್ಳಗಳನ್ನು ತೆಗೆದು ಸುರುಳಿಯಾಕಾರ ಸುತ್ತಿ ಇಡುತ್ತಾರೆ, ಬಳಸುವ ಸಮಯದಲ್ಲಿ ಈ ಎಲೆಯನ್ನು ಗಾಡಕ್ಕೆ ಹಾಕಿದ ಕಟ್ಟಿಗೆಯು ತಿರುಗುತ್ತಿರುವಾಗ ಬಣ್ಣಗಳನ್ನು ಲೇಪಿಸಿ ಆಮೇಲೆ ಈ ಬಣ್ಣಗಳ ಮೇಲೆ ಕೇದಿಗೆಯ ಎಲೆಯನ್ನು ಒಳ್ಳೇ ಎಣ್ಣೆಯಲ್ಲಿ ಅದ್ದಿ ಕೈಯಿಂದ ಜೋರಾಗಿ ಹಿಡಿಯುತ್ತಾರೆ. ಈ ರೀತಿಯಾಗಿ ಹಿಡಿಯುವುದರಿಂದ ವರ್ಣಗಳು ನುಣುಪಾಗಿ ಹೊಳೆಯುತ್ತವೆ.

### ಹುಣುಸೆ ಸರಿ

ಇಲ್ಲಿ ಪ್ರಮುಖವಾಗಿ ಎರಡು ವಿಧಾನಗಳನ್ನು ಕಾಣಬಹುದು. ಜೇಡಿಮಣ್ಣನ್ನು ಕುಟ್ಟಿ ನೆನೆಹಾಕಿ ಸೋಸಿ, ನಂತರ ಉಂಡಿಕಟ್ಟಿ ಮತ್ತೆ ಹುಣುಸೆ ಬೀಜ ರುಬ್ಬಿ, ಕುದಿಸಿ ಜೇಡಿಮಣ್ಣಿನೊಂದಿಗೆ ಬೆರೆಸಿ ಕಾಷ್ಠ ಪಟ್ಟಿಕಗಳಿಗೆ ಕೈಯಿಂದ ಹಚ್ಚಿ ಬಿಸಿಲಿನಲ್ಲಿ ಒಣಗಿಸಿ ನಂತರ ನೀರುಹಾಕಿ ಸಮುದ್ರದಲ್ಲಿ ಸಿಗುವ ನುಣುಪಾದ ಕಲ್ಲಿನಿಂದ ಜೋರಾಗಿ ತಿಕ್ಕಿ ತೊಳೆದು ಹೊಳಪುಗೊಳಿಸುತ್ತಾರೆ. ನಂತರ ಅರಗಿನ ಬಣ್ಣ ಅಥವಾ ಜಲವರ್ಣ ಲೇಪನ ಮಾಡುತ್ತಾರೆ.

ಎರಡನೆಯದಾಗಿ ಹುಣುಸೆಯ ಬೀಜವನ್ನು ಜಜ್ಜಿ ನೀರಿನಲ್ಲಿ ನೆನೆಹಾಕಿ ಒಂದು ದಿವಸಬಿಟ್ಟು ಮರುದಿವಸ ಅದನ್ನು ಚನ್ನಾಗಿ ರುಬ್ಬಿ, ಮತ್ತೆ ಕುದಿಸಿ, ಇದರೊಂದಿಗೆ 'ಮಟ್ಟಿ' (ಬಳಪದ ಕಲ್ಲು) ಯನ್ನು ಮಿಶ್ರಣ ಮಾಡಿ ನಂತರ ಕಟ್ಟಿಗೆಯ ಭಾಗಗಳಿಗೆ ಕೈಯಿಂದ ಅಥವಾ ಕುಂಚಗಳಿಂದ ಲೇಪಿಸಲಾಗುತ್ತದೆ. ಈ ಸರಿಯನ್ನು ಸಣ್ಣ ಸಣ್ಣ ರಂದ್ರಗಳಿಗೆ, ಮತ್ತು ಸಣ್ಣ ಗೊಂಬೆ ಮೂರ್ತಿಗಳಿಗೆ ಕಣ್ಣು, ಮೂಗು, ತುಟಿ, ಹುಬ್ಬು, ರಚಿಸುವಾಗ ಇದಕ್ಕೆ ಸಾಗುವಾನಿ ಕಟ್ಟಿಗೆಯ ಪುಡಿಯನ್ನು ಮಿಶ್ರಣಮಾಡಿ ಆಕಾರ ಕೊಡಲಾಗುತ್ತದೆ.

### ಬಣ್ಣಗಳ ಗುಣಧರ್ಮಗಳು

ಕೆಂಪು – ಅಪಾಯ, ಭಯ, ಹಿಂಸೆಗಳನ್ನು ಸೂಚಿಸುತ್ತಿದ್ದರೂ ಪ್ರೇಮವನ್ನು ಪ್ರಕಟಿಸುವ ಬಣ್ಣವಾಗಿದೆ.

೧೩. ಡಾ. ಬಿ.ಕೆ ಹಿರೇಮಠ : (ಸಂ) ಸಿಜದ ನೆಲೆ ಪು. ೧೫೫ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

೧. ಹಸಿರು – ಸಮೃದ್ಧಿ ಸೂಚಕ ವರ್ಣ
೨. ನೀಲಿ – ಶಾಂತತೆ, ಪರಿಶುದ್ಧವಾದ ಅನಂತತೆಗಳನ್ನು ಸೂಚಿಸುವ ಬಣ್ಣ
೩. ಹಳದಿ – ಶ್ರೀಮಂತಿಕೆಯ ಬಣ್ಣ
೪. ಕೇಸರಿ – ತ್ಯಾಗ, ಸಮರ್ಪಣ ಭಾವಗಳ ಸಂಕೇತಗಳ ಬಣ್ಣ
೫. ಕಪ್ಪು – ದುಃಖ, ದಾರಿದ್ರ್ಯ ಮುಂತಾದವುಗಳ ದ್ಯೋತಕವಾಗಿದೆ
೬. ಬಿಳಿ – ಪರಿಶುದ್ಧತೆ

ಹೀಗೆ ಪ್ರತಿಯೊಂದು ಬಣ್ಣವೂ ತನ್ನದೇ ಆದ ಗುಣವನ್ನು ಹೊಂದಿದ್ದು. ಬಣ್ಣಗಳ ಮಿಶ್ರಣವು ಬೇರೆ ಬೇರೆ ಗುಣಗಳ, ಭಾವನೆಗಳ, ಸನ್ನಿವೇಶಗಳ ಪರಿಪೂರ್ಣ ಅಭಿವ್ಯಕ್ತಿಗೆ ಪೂರಕವಾಗುತ್ತದೆ.[೪] ಇಂತಹ ಗುಣಧರ್ಮಗಳ ಹಿನ್ನೆಲೆಯಲ್ಲಿ ಕಲಘಟಗಿಯ ಕಲಾವಿದರು ವರ್ಣಗಳನ್ನು ಬಳಸಿರುವುದನ್ನು ಕಾಣಬಹುದಾಗಿದೆ.

ಅರಗಿನ ಬಣ್ಣಕುರಿತು ಹಿಂದಿನಿಂದ ಹೇಳುವುದಾದರೆ ಆರನೇಯ ಶತಮಾನದ ಆದಿಯಲ್ಲೇ ಜಪಾನಿಯರು ಚೀನದವರಿಂದ ಅರಗಿನ ಬಣ್ಣದ ಕೆಲಸವನ್ನು ತಮ್ಮದಾಗಿಸಿಕೊಂಡರು. ಇವರು ಮೊದಲೂ ಅರಗಿನ ಕರಿ ಬಣ್ಣವನ್ನು ಉಪಯೋಗಿಸುತ್ತಿದ್ದರು. ನಂತರ ಕಪ್ಪೆಚಿಪ್ಪು ಮತ್ತು ಚಿನ್ನದ ಪುಡಿಗಳನ್ನು ಅಲಂಕರಣದಲ್ಲಿ ಉಪಯೋಗಿಸತೊಡಗಿದರು.[೫] ಬಗಾಟಾ ಕೋರಿನ್ (೧೬೫೮–೧೭೪೩) ಅರಗು ಬಣ್ಣದ ಕೆಲಸದಲ್ಲಿ ಅದ್ವಿತೀಯನಾಗಿದ್ದ.[೬] ಇಂತಹ ಪದ್ದತಿಯು ಇನ್ನೂ ಮುಂದೆವರೆದಿರುವುದನ್ನು ಕಲಘಟಗಿಯ ಕಲೆಯಲ್ಲಿ ಕಾಣಬಹುದಾಗಿದೆ. ಹಾಗೇ ಪ್ರಾಗಿತಿಹಾಸ ಮಾನವರು ಶಿಲಾ ಗುಹೆಗಳಲ್ಲಿ ರಚಿಸಿರುವ ಚಿತ್ರಗಳು ನೈಸರ್ಗಿಕವಾಗಿ ದೊರಕುವ ಹಣ್ಣು, ಎಲೆ, ಹೂ, ಕಾಂಡ, ಇನ್ನೂ ಮುಂತಾದವುಗಳನ್ನು ಪ್ರಾಣಿಗಳ ಕೊಬ್ಬಿನೊಂದಿಗೆ ಮಿಶ್ರಣ ಮಾಡಿ, ಹಾಗೆ ಪುಡಿ ವರ್ಣಗಳಾದ ಬಣ್ಣದ ಮಣ್ಣಿನ ಗಟ್ಟಿಗಳನ್ನು ಕುಟ್ಟಿ ಹಂದಿಯ ರಕ್ತ, ಕೊಬ್ಬನ್ನು ಸೇರಿಸಿ ಚಿತ್ರ ಬರೆದಿರಬಹುದಾಗಿದೆ. ಎಂದು ಊಹಿಸಲಾಗಿದೆ.

**ಉಳಿಗಳು**

ರಚನೆಗೆ ಬೇಕಾಗುವಂತಹ ಉಳಿಗಳನ್ನು ಉಕ್ಕಿನ ತುಂಡುಗಳಿಂದ ತಯಾರಿಸಿದ ಉಳಿಗಳು, ಈ ರಚನೆಯಲ್ಲಿ ಮರದಿಂದ ತಯಾರಿಸಿದ ಕೊಡತಿ, ಮುಂತಾದ ವಸ್ತುಗಳನ್ನು ಬಳಸುತ್ತಾರೆ. ಕ್ಷೇತ್ರಕಾರ್ಯದಲ್ಲಿ ಪರಿಚಯವಾದಂತಹ ಕೆಲವು ಪರಿಕರಗಳನ್ನು ಈ ಕೆಳಗೆ ಹೆಸರಿಸಲಾಗಿದೆ.

* **ತರುಉಳಿ** : ಇದು ಕಟ್ಟಿಗೆಯ ವರಟಾಗಿರುವಲ್ಲಿ ಬಳಸುವಂತಹದ್ದು ಇದರಿಂದ ಕಟ್ಟಿಗೆಯು ಒಂದೇ ಸಮನಾಗಿರುವಂತೆ ಮಾಡುವುದಾಗಿದೆ. ಇದು ಹೆಚ್ಚಾಗಿ ಗಾಡಕ್ಕೆ ಹಾಕಿದ ಮರದ ತುಂಡು ತಿರುಗುತ್ತಿರುವ ಸಮಯದಲ್ಲಿ ಬಳಕೆಯಾಗುತ್ತದೆ.

* **ಮನುಳಿ** : ಇದು ಕಟ್ಟಿಗೆಯ ತುಂಡಿನಲ್ಲಿ ಉಬ್ಬು, ತಗ್ಗು, ರಂದ್ರಹಾಕಲಿಕ್ಕೆ ಹಾಗೆ ತೊಟ್ಟಿಲು, ಸೋಪಾ, ಕುರ್ಚಿ, ಟೀಪಾಯಿ, ಒಣಕೆ, ಮಂಚ, ಲತ್ತಿಗುಣಿ, ಬಾರುಕೋಲು, ಮುಂತಾದವುಗಳಲ್ಲಿ ಮೇಲಿನ ತುದಿಯಲ್ಲಿ ಕಂಡು ಬರುವ ಉಬ್ಬು ತಗ್ಗಿನ ವಿನ್ಯಾಸಗಳನ್ನು ನಿರ್ಮಿಸುವುದಕ್ಕೆ ವಿಶೇಷವಾಗಿ ಬಳಸುತ್ತಾರೆ.

* **ತಟ್ಟುಳಿ** : ಇದು ಮರದ ತುಂಡನ್ನು ನುಣುಪಾಗಿಸುವುದರೊಂದಿಗೆ ಹೊಳಪನ್ನು ಕೊಡುತ್ತದೆ.

* **ಚಂದ್ರಹಾಸ್** : (ರಾಮಬಾಣ) ಇದು ಕಟ್ಟಿಗೆಯನ್ನು ಕೆತ್ತಲಿಕ್ಕೆ ಉಪಯೋಗಿಸುತ್ತಾರೆ.

* **ಕೊಡತಿ** : ಇದು ಜಾಲೀಯ ಮರ ಅಥವಾ ಹುಣಸೇಮರದ ಮಧ್ಯದ ಭಾಗದಿಂದ ಆಯ್ದು ತಯಾರಿಸಿದ್ದು. ಇದು ರಂಧ್ರಗಳನ್ನು ಹಾಕಲಿಕ್ಕೆ ಮತ್ತು ಬೇರೆ ಬೇರೆ ಸಂದರ್ಭದಲ್ಲಿಯೂ ಬಳಕೆಯಾಗುತ್ತದೆ.

---

೧೪. ಕೆ. ವಿ ಕಾಳೆ : ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ ಪು. ೧೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦
೧೫. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೫ ಕಲೆಸಾಹಿತ್ಯ ಪು. ೨೫೨ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೩
೧೬. –ಅದೇ– ಪು. ೨೫೧

* **ಕಿರುಳಿ :** ಇದು ಚೌಕಾಕಾರವಾಗಿರುತ್ತದೆ. ಇದರಿಂದ ಸಣ್ಣ ಸಣ್ಣ ರಂಧ್ರಗಳನ್ನು ತೆಗೆಯಲಿಕ್ಕೆ ಉಪಯೋಗಿಸಲಾಗುತ್ತದೆ.

* **ಬೈರಗಿ ಮತ್ತು ಬಿಲ್ :** ಇವು ಎರಡು ಪ್ರತ್ಯೇಕವಾಗಿದರೂ ಇಲ್ಲಿ ಬಿಲ್ಲಿಗೆ ಚರ್ಮದ ದಾರವಿರುವುದರಿಂದ ಇದನ್ನು ಬೈರಿಗೆ ತೊಡಕು ಹಾಕಿ ಕೈಯಿಂದ ಹಿಂದೆ ಮುಂದೆ ಮಾಡಿದಾಗ ಬೈರಗಿಯಲ್ಲಿಯ ಮೊಳೆಯಿಂದ ಸಣ್ಣ ಸಣ್ಣ ರಂದ್ರಗಳನ್ನು ಹಾಕಲಿಕ್ಕೆ ತುಂಬಾ ಉಪಯೋಗಕಾರಿಯಾಗಿದೆ.

* **ಬಾಚಿ :** ಅಂಕು ಡೊಂಕಾದ ಮರದ ತುಂಡುಗಳನ್ನು ಕೆತ್ತುವುದರೊಂದಿಗೆ ಬೇರೆ ಬೇರೆ ಸಂದರ್ಭದಲ್ಲಿಯೂ ಬಳಕೆಯಾಗುತ್ತದೆ.

* **ಬಾಣ :** ಇದು ವಿಶೇಷವಾಗಿ ಗಾಡಕ್ಕೆ ಹಾಕಿದ ಕಾಷ್ಠ ತುಂಡನ್ನು ಈ ಬಾಣಕ್ಕೆ ದಾರದ ಸಹಾಯದಿಂದ ತೊಡಕಿಸಿ ಕಾಷ್ಠನ್ನು ತಿರುಗಿಸುವುದಕ್ಕೆ ಉಪಯೋಗಿಸಲಾಗುತ್ತದೆ.

* **ಮುಳ್ಳು ಅರ :** ಇದು ಹೆಚ್ಚಾಗಿ ದೇವಿಯ ಮೂರ್ತಿ ರಚನೆಯಲ್ಲಿ ಬಳಕೆಯಾಗುತ್ತದೆ. ಇಲ್ಲಿ ಬಿಡಿ ಬಿಡಿ ಭಾಗಗಳನ್ನು ಮುಳ್ಳ ಅರದಿಂದ ತಿಕ್ಕಿ ಪಾಲೀಷ್ ಮಾಡಲಾಗುತ್ತದೆ. ಈ ರೀತಿಯಾಗಿ ಇದನ್ನು ಉಪಯೋಗಿಸಲಾಗಿದೆ.

* **ಪಾಲೀಷ್ ಪೇಪರ :** ಇದು ತೊಟ್ಟಿಲು ಮತ್ತು ಗ್ರಾಮದೇವತೆ, ಹಾಗೂ ಪೀಠೋಪಕರಣಗಳಿಗೂ ಪೇಪರನಿಂದ ಉಜ್ಜುವುದರಿಂದ ನುಣುಪಾಗಿ ಮಾಡುವ ಗುಣಹೊಂದಿದೆ.

* **ಗರಗಸಗಳು :** ಉದ್ದವಾದ ಮರದ ತುಂಡುಗಳನ್ನು ತಮಗೆ ಬೇಕಾದ ಅಳತೆಗೆ ಕತ್ತರಿಸಲು ಅಥವಾ ತುಂಡು ಮಾಡಲು ಬೇರೆ ಬೇರೆ ರೀತಿಯ ಗರಗಸಗಳು ಬಳಸುವುದುಂಟು.

* **ಅಂಟು :** ಇಲ್ಲಿ ಜಾಲೀಯ ಮರದ ಅಂಟನ್ನೇ ಬಳಸುವುದಾಗಿದೆ. ಇದು ಹೆಚ್ಚು ಜಿಗುಟಾಗಿರುವುದರಿಂದ ಈ ಕಲಾವಿದರು ಪೀಠೋಪಕರಣಗಳಿಗೆ ಮತ್ತು ಗ್ರಾಮದೇವತೆಗಳಿಗೆ, ಆಟಿಕೆ, ವಸ್ತುಗಳಿಗೆ ಬಣ್ಣಗಳ ಮಿಶ್ರಣದಲ್ಲಿ ಕಟ್ಟಿಗೆಯ ಪುಡಿಯಲ್ಲಿಯು ಬಳಕೆಯಾಗುತ್ತದೆ.

* **ಒಪ್ಪದ ಕಲ್ಲು :** ಇಲ್ಲಿ ವಿಶೇಷವಾಗಿ ದೇವಿಯ ಮೂರ್ತಿಗಳಿಗೆ ತವರ ಮಿಶ್ರಿತ ಮೀನಸರಿ ಮೇಲೆ ಈ ಕಲ್ಲಿನಿಂದ ತಿಕ್ಕುವುದರಿಂದ ಬೆಳ್ಳಿಯ ವರ್ಣ ಬರುತ್ತದೆ.

* **ಸುತ್ತಿಗೆಗಳು :** ತೊಟ್ಟಿಲು, ತೂಗುಮಂಚ, ಟೀಪಾಯಿ, ಸೋಪಾ, ಉಯ್ಯಾಲೆಗಳ ಕಮಾನುಗಳಲ್ಲಿ ಸಣ್ಣ ಸಣ್ಣ ಬಣ್ಣದ ಬುಗುರಿಗಳನ್ನು ಮೊಳೆಯಿಂದ ಹೊಡೆಯುವುದಕ್ಕೆ ಮತ್ತೆ ಬೇರೆ ಬೇರೆ ಸಂದರ್ಭದಲ್ಲಿ ಬಳಕೆಯಾಗುತ್ತೆದೆ.

* **ಚಪ್ಪಟೆಯಾಕಾರದ ಉಳಿಗಳು :** ಸುಮಾರು ಎರಡೂವರೆ ಇಂಚು ಅಗಲದಿಂದ ಕಾಲು ಇಂಚು ಅಗಲದ ತುದಿಯುಳ್ಳ ಚಪ್ಪಟೆಯಾಕಾರದ ಉಳಿಗಳನ್ನು ಕಾಣಬಹುದು. ಇವು ಸಂದರ್ಭಕ್ಕೆ ಅನುಗುಣವಾಗಿ ಬಳಕೆಯಾಗುತ್ತದೆ.

* **ಡ್ರಿಲ್ಲಿಂಗ್ ಮಶೀನ್ :** ತೊಟ್ಟಿಲು ನಿರ್ಮಾಣ ಕಾರ್ಯದಲ್ಲಿ ಹಾಗೂ ಪಲ್ಲಕ್ಕಿ, ತೂಗುಮಂಚ, ಕುರ್ಚಿ, ಸೋಪಾ, ಮುಂತಾದ ಪೀಠೋಪಕರಣಗಳಲ್ಲಿ ಕಾಷ್ಠಗಳ ತುಂಡುಗಳನ್ನು ಸರಿದಾಡದಂತೆ ನಟ್ ಬೋಲ್ಟ್‌ಗಳನ್ನು ಅಳವಡಿಸಿರುವುದನ್ನು ಕಾಣುತ್ತೇವೆ. ಈ ಬೋಲ್ಟ್‌ಗಳನ್ನು ಹಾಯಿಸಲಿಕ್ಕೆ ರಂಧ್ರ ಕೊರೆಯಲು ಡ್ರೀಲಿಂಗ್ ಮಶೀನ ಉಪಯೋಗಿಸುವರು.

* **ಸ್ಕ್ರೂ ಡ್ರೈವರ್ಸ :** ತೊಟ್ಟಿಲು, ಸೋಪಾ, ಟೀಪಾಯಿ, ತೂಗುಮಂಚ, ಮುಂತಾದವುಗಳಲ್ಲಿ ರಂದ್ರ ಕೊರೆದಿರುವದನ್ನು ಮುಚ್ಚಲು ಹಿತ್ತಾಳೆಯ ಕ್ಲೀಪ್‌ಗಳನ್ನು ಕೂಡಿಸಿ ಸ್ಕ್ರೂಗಳನ್ನು ಬಿಗಿಯಲು ಇದನ್ನು ಉಪಯೋಗಿಸಲಾಗಿದೆ.

* **ಬಿದಿರು ಚಕ್ಕೆ** : ಸಣ್ಣ ಸಣ್ಣ ಬಿದಿರಿನ ತುಂಡುಗಳನ್ನು ರಚಿಸಿಕೊಂಡು ರಂದ್ರದಲ್ಲಿ ಹೊಡೆವುದರಿಂದ ಮೊಳೆ ಹೊಡೆಯುವ ಅಗತ್ಯವಿಲ್ಲ.

* **ಪಕ್ಕಡಗಳು** : ಪಲ್ಲಕ್ಕಿ ಹಾಗೂ ಸ್ಟ್ಯಾಂಡಿಂಗ್ ತೊಟ್ಟಿಲುಗಳಿಗೆ ಹೆಚ್ಚಾಗಿ ಇದರ ಬಳಕೆಇದೆ. ಎಕ್ಸ್ ಆಕಾರದ ಕಟ್ಟಿಗೆಯ ಮೇಲೆ ಅದೇ ಆಕಾರದ ಕಬ್ಬಿಣದ ಪಟ್ಟಿಗಳಲ್ಲಿ ನಟ್‌ಬೋಲ್ಟ್‌ಗಳನ್ನು ಸರಿಯಾಗಿ ಬಿಗಿಯುದಕ್ಕೆ ಹಲವಾರು ರೀತಿಯ ಪಕ್ಕಡಗಳು ಉಪಯೋಗಿಸುತ್ತಾರೆ.

* **ಕಬ್ಬಿಣದ ಪಟ್ಟಿಗಳು** : ತೊಟ್ಟಿಲು, ತೂಗುಮಂಚ, ದಿವಾನ್‌ಕಾಟ್, ಉಯ್ಯಾಲೆ, ಸೋಪಾಗಳ ಕೆಳಭಾಗದಲ್ಲಿ ಕಬ್ಬಿಣದ ಎರಡು ಅಡ್ಡಪಟ್ಟಿಗಳನ್ನು ಹಾಯಿಸಿ ನಾಲ್ಕು ತುದಿಗೆ ಬಳೆಯಾಕಾರದ ಕಬ್ಬಿಣದ ತುಂಡುಗಳನ್ನು ನಿರ್ಮಿಸಿ ಹಗ್ಗ ಅಥವಾ ಕಬ್ಬಿಣದ ಸರಪಳಿಗಳಿಂದ ಕಟ್ಟಲಿಕ್ಕೆ ಅನುಕೂಲವಾಗಿದೆ.

* **ಬಟ್ಟೀ** : ರೋಗಂಧ ಎಣ್ಣೀ ತಯಾರಿಸಲು, ಅಗಸಿಎಣ್ಣೆ, ಬಿಳಿರಾಳ, ಪತ್ರಿಯ ಅರಗುಗಳನ್ನು ಕುದಿಸಲು ಬಟ್ಟಿಯನ್ನು ಬಳಸುವರು.

* **ಬಣ್ಣ ಕಲಿಸುವ ತಟ್ಟೆಗಳು** : ಇವು ಸಾಮಾನ್ಯವಾಗಿ ಸಿಗುವಂತಹ ತೆಂಗಿನ ಚಿಪ್ಪುಗಳಲ್ಲಿ ಬೇರೆ ಬೇರೆ ವರ್ಣಗಳನ್ನು ಕಲಿಸುವುದಕ್ಕೆ ಮತ್ತು ಚಿತ್ರ ಬರೆಯುವುದಕ್ಕೆ ಬಳಸಲಾಗುತ್ತದೆ.

* **ಕಾಷ್ಠಗಳು** : ಇಲ್ಲಿ ಮುಖ್ಯವಾಗಿ ಸಾಗುವಾನಿ, ಶಿವಣ್ಣಿ, ಮಾವು, ಬನ್ನಿ, ಮರಗಳನ್ನು ಪೀಠೋಪಕರಣಗಳಿಗೆ ಹಾಗೂ ದೇವಿಯ ಶಿಲ್ಪಗಳಿಗೆ ಬಳಸುತ್ತಾರೆ.

* **ಅರಗು ಮತ್ತು ರಾಳ** : ಇದನ್ನು ಬೆಂಕಿಯ ಸಹಾಯದಿಂದ ಕರಗಿಸಿ. ಪುಡಿ ವರ್ಣಗಳ ಮಿಶ್ರಣ ಮಾಡಿ. ರಚಿಸುವ ಸಮಯದಲ್ಲಿ ಕಾಯಿಸಿ, ಕರಗಿಸಿ, ಗಾಡಕ್ಕೆ ಹಾಕಿದ ಕಾಷ್ಠ ತುಂಡುಗಳು ತಿರುಗುತ್ತಿರುವಾಗಲೆ ಲೇಪನಮಾಡುವ ಮಾಧ್ಯಮವಾಗಿದೆ.

* **ಗಾಡ** : ಇದು ಎಲ್ಲ ಪೀಠೋಪಕರಣಗಳಿಗೆ ಬೇಕಾದ ವಸ್ತುವಾಗಿದೆ. ಇದರ ಸಹಾಯದಿಂದ ಕಾಷ್ಠ ತುಂಡುಗಳು ಚಕ್ರದ ಹಾಗೇ ತಿರುಗುತ್ತಾ ಇರುತ್ತವೆ. ಇಲ್ಲಿ ಬಿಲ್ಲು ಸಹ ಉಪಯೋಗವಿದೆ.

* **ಜೇಡಿ ಮಣ್ಣು** : ಇದು ಸ್ಥಳೀಯವಾಗಿ ದೊರೆಯುತ್ತದೆ. ಜೇಡಿ ಮಣ್ಣನ್ನು ಮೊದಲಿಗೆ ಕುಟ್ಟಿ ಪುಡಿಮಾಡಿ ಸಾನಿಸಿ ನಂತರ ಇದಕ್ಕೆ ಹತ್ತಿಯನ್ನು ಬೆರೆಸಿ ನೆನೆಹಾಕಿ ವಿವಿಧ ಮೂರ್ತಿಗಳನ್ನು ತಯಾರಿಸುತ್ತಾರೆ. ಮುಖ್ಯವಾಗಿ ಗಣಪತಿ, ಮಣ್ಣೆತ್ತು, ನಾಗಪ್ಪ ದೇವರು, ಜೋಕುಮಾರ ಮುಂತಾದವು.

* **ಅರಿವೆ** : ಇದು ದುರಗಮುರಗಿಯವರ ದೇವತೆಗೆ ಹೆಚ್ಚಾಗಿ ಬಳಕೆಯಾಗುತ್ತದೆ. ದುರುಗಮುರುಗಿಯವರ ಪೆಟ್ಟಿಗೆಗೆ ಇದನ್ನು ಸರಿಯಿಂದ ಲೇಪನ ಮಾಡಿ ನಂತರ ತೆಳುವಾದ ಲೇಪನ ಕೊಟ್ಟು ವಿನ್ಯಾಸಗಳನ್ನು ಮೂಡಿಸುತ್ತಾರೆ. ನಂತರ ವರ್ಣ ಲೇಪನ ಮಾಡುತ್ತಾರೆ. ಇಲ್ಲಿ ಆಯಿಲ್ ಪೇಂಟ್ ಬಳಕೆಯು ಕಂಡುಬರುತ್ತದೆ.

* **ಟರನಿಂಗ ಮಶೀನ್** : ಇಲ್ಲಿ ಕಾಷ್ಠಗಳನ್ನು ದುಂಡಾಗಿ ಬಾಚಿಯಿಂದ ಕೆತ್ತಿಕೊಂಡು ಉಬ್ಬು – ತಗ್ಗು ಬರುವಂತಹ ಸ್ಥಳಗಳಲ್ಲಿ ಜಾನ್ಮೆಯಿಂದ ಮೊದಲೆ ಕೆತ್ತಿಕೊಂಡಿರುತ್ತಾರೆ. ನಂತರ ಈ ಕಾಷ್ಠನ್ನು ಟರನಿಂಗ್ ಮಶೀನಗೆ ಹಾಕಿ ಇದು ತಿರುಗುವ ಸಂದರ್ಭದಲ್ಲಿ ಗೋಪುರದ ಆಕಾರ ನಿರ್ಮಿಸಿ, ಮತ್ತೆ ತಮಗೆ ಬೇಕಾದ ಆಕಾರವನ್ನು ಇಲ್ಲಿಯೇ ನಿರ್ಮಿಸಿಕೊಳ್ಳುತ್ತಾರೆ. ದೊಡ್ಡ ದೊಡ್ಡ ಕೆಲಸಗಳನ್ನು ಟರನಿಂಗ ಮಶೀನ್‌ದಿಂದಲೇ ನಿರ್ಮಿಸುತ್ತಾರೆ. ಮತ್ತೆ ಇಲ್ಲಿಯೇ ಅರಗಿನ ಬಣ್ಣ ಲೇಪನ ಮಾಡುವುದು ಇದೆ. ಬೆಂಕಿಯ ಸಹಾಯದಿಂದ ಅರಗಿನ ಬಣ್ಣವನ್ನು ಕಾಯಿಸಿ ಕಾಷ್ಠ ತಿರುಗುವ ಸಂದರ್ಭದಲ್ಲಿ ತಮಗೆ ಬೇಕಾದ ವರ್ಣವನ್ನು ಲೇಪನಮಾಡುತ್ತಾರೆ. ಇಲ್ಲಿ ಮುಖ್ಯವಾಗಿ ಅರಗಿನ ಬಣ್ಣ ಮಾತ್ರ ಲೇಪನ ಮಾಡಲಿಕ್ಕೆ ಬರುತ್ತದೆ. ಮತ್ತೆ ಕಾಷ್ಠನಲ್ಲಿ ಗುಂಡುಗಳು, ಬುಗುರಿ, ಚೀನಿ, ಪೋಲ್ಸ್, ಇತ್ಯಾದಿಗಳನ್ನು ನಿರ್ಮಿಸುವ ಸಾಧನವಾಗಿದೆ.



೧. ತವರ ಮತ್ತು ಒಪ್ಪದ ಕಲ್ಲು



೨. ತವರ ಮತ್ತು ಒಪ್ಪದ ಕಲ್ಲು



೪. ಹಳೆಯ ತೊಟ್ಟಿಲಿನ ಅವಶೇಷಗಳು



೪. ಟರ್ನಿಂಗ್ ಮಶಿನ್



೫. ವರ್ಣ ಪರಿಕರಗಳು



೬. ಕೆತ್ತನೆಯ ಹಂತ









೭. ವರ್ಣಲೇಪನದ ಪೂರ್ವದಲ್ಲಿ ಸಿದ್ಧಗೊಂಡ ಪಾಲಕಿಗಳು

* **ನೆಟ್ ಬೋಲ್ಟ್** : ಇದು ಹೆಚ್ಚಾಗಿ ಸ್ಟ್ಯಾಂಡಿಂಗ್ ತೊಟ್ಟಿಲಿಗೆ ಬಳಸುತ್ತಾರೆ. ಅಂತೆಯೇ ಎಲ್ಲಾ ತೊಟ್ಟಿಲಿನಲ್ಲಿ ಬಳಕೆ ಇದರೂ ಸಹ ಈ ತೊಟ್ಟಿಲಿಗೆ ಅವಶ್ಯವಾಗಿ ಬಳಸುತ್ತಾರೆ. ಪೋಲ್ಸ್ (ಕಂಬ) ಗಳ ಮೇಲೆ ತೀರಾ ಭಾರವಾದ ತೊಟ್ಟಿಲು ತೂಗಾಡುವುದರಿಂದ ಅದರ ಭಾರವನ್ನು ಹಿಡಿಯುವದಕ್ಕೆ ಈ ಕಬ್ಬಿಣದ ನಟ್ ಬೋಲ್ಟ್ ಬಿಗಿದಿರುತ್ತಾರೆ.

* **ತಂತಿ** : ಇದು ಸ್ಟ್ಯಾಂಡಿಂಗ ತೊಟ್ಟಿಲು ತೂಗುವಾಗ ಮೇಲಿನ ಪೋಲ್ಸ್ (ಕಂಬ) ಗೆ ಇಳಿಬಿಟ್ಟ 'ಚೀನಿ' ಅಂತ ಕರೆಯುವ ಕಲಾವಿದರು ಇದು ನೋಡುವುದಕ್ಕೆ ಭೋರಮಳ ಸರದ ಹಾಗೆ ಇರುತ್ತದೆ. ಇದರ ಮಧ್ಯದಲ್ಲಿ ರಂದ್ರ ಕೊರೆದು ಕಬ್ಬಿಣದ ತಂತಿ ಹಾಯಿಸಿ ತೊಟ್ಟಿಲು ಕೊಂಡಿಗೆ ಸಿಕ್ಕಿಸುತ್ತಾರೆ. ನಂತರ ತೂಗುವುದಾಗಿದೆ.

* **ಬುಗುರೆ** : ತೊಟ್ಟಿಲು ಸೋಪಾ, ಟೀಪಾಯಿ, ತೂಗುಮಂಚ ಇತ್ಯಾದಿ ಪೀಠೋಪಕರಣಗಳಿಗೆ ಬಳಸುವದಾಗಿದೆ. ಇಲ್ಲಿ ಕಾಷ್ಠವನ್ನು ಬುಗುರೆಯಾಕಾರ ತಯಾರಿಸಿಕೊಂಡು ವರ್ಣಲೇಪನ ಮಾಡಿ ತೊಟ್ಟಿಲಗಳ ಮಧ್ಯ ಅಂದರೆ ಕಮಾನು ಭಾಗದಲ್ಲಿ ಮುಖ್ಯವಾಗಿ ಇಳಿ ಬಿಡಲಾಗುವುದು ಇವುಗಳು ಅಲಗಾಡುವ ರೀತಿಯಲ್ಲಿಯೂ ಇರುತ್ತವೆ. ಮತ್ತು ಸ್ಥಿರವಾದ ರೀತಿಯಲ್ಲಿ ಮೊಳೆಹೊಡೆದು ನಿರ್ಮಿಸುತ್ತಾರೆ. ಇವು ಮೇಲ್ಕಾಣಿಸಿದ ಎಲ್ಲ ಪೀಠೋಪಕರಣದಲ್ಲಿ ಬಳಕೆಯಾಗುತ್ತವೆ. ಅಲ್ಲದೆ ಮಕ್ಕಳು ಆಡುವುದಕ್ಕೆ ಅಂದರೆ ದಾರ ಸುತ್ತಿ ಆಡುವುದಕ್ಕೆ ಬರುವ ಹಾಗೆ ಇದೇ ಮಾದರಿಯಲ್ಲಿ ಬುಗುರಿಯನ್ನು ರಚಿಸಿ ಮಧ್ಯದಲ್ಲಿ ಮೊಳೆಯನ್ನು ಹೋಡೆದು ತಯಾರಿಸುವ ವಿಧಾನವಾಗಿದೆ.

* **ಗುಂಡುಗಳು** : ಇವು ಸಹ ಮೇಲೆ ಹೇಳಿದ ಪೀಠೋಪಕರಣಗಳಿಗೆ ಬಳಸಲಾಗುತ್ತದೆ. ಇವು ಬುಗುರೆಗಿಂತ ಸ್ವಲ್ಪ ಭಿನ್ನವಾಗಿರುತ್ತವೆ. ಅಂದರೆ ದುಂಡಾಗಿ ಕಾಣುತ್ತವೆ. ಇವುಗಳನ್ನು ತಯಾರಿಸಿ ವಸ್ತುಗಳಿಗೆ ಬಳಸಲಾಗುತ್ತದೆ.

* **ಚೀನಿ** : ಇವು ನೋಡುವುದಕ್ಕೆ ಭೋರಮಳ ಸರದ ಹಾಗೆ ಕಾಣುತ್ತವೆ. ಕಾಷ್ಠನಲ್ಲಿ ಆಕಾರ ತಯಾರಿಸಿ ವರ್ಣ ಲೇಪನ ಮಾಡಿ ಮಧ್ಯದಲ್ಲಿ ಆಳವಾಗಿ ರಂಧ್ರ ಕೊರೆದು ತಂತಿಯನ್ನು ಹಾಯಿಸಿ ತೊಟ್ಟಿಲು ಕೊಂಡಿಗಳಿಗೆ ಜೋಡಿಸುತ್ತಾರೆ. ಕೆಲವು ವೃಕ್ಷದ ವಿವಿಧ ಭಾಗಗಳಿಂದ ಅಂದರೆ ತೊಗಟೆ, ದಾರು, ಬೇರು, ಹೂವು, ಹಣ್ಣು ಇವುಗಳಿಂದಲೂ ವಿವಿಧ ಬಣ್ಣಗಳನ್ನು ಪಡೆಯಬಹುದು.

**೧. ತೊಗಟೆಯಿಂದ ಬಣ್ಣ** : ಇದು ಸಾಮಾನ್ಯವಾಗಿ ಕಂದು ಬಣ್ಣದಿಂದ ಕೂಡಿರುತ್ತದೆ. ಮತ್ತಿ, ಕಮರ, ಕರಿಜಾಲಿ, ಇವುಗಳ ತೊಗಟೆಗಳು ಕಂದು ಬಣ್ಣವನ್ನು ಕೊಡುತ್ತವೆ. ಬಿಳಿಜಾಲಿ ತೊಗಟೆ ಕಪ್ಪು ಅಥವಾ ಕೆಂಪು ಬಣ್ಣ ಕೊಡುತ್ತದೆ. ಕಟ್ಟಲ ಮರದ ತೊಗಟೆ ಹಳದಿಬಣ್ಣ ಮತ್ತು ಬುಡಿಗಾನೆಯ ತೊಗಟೆ ಹಳದಿ ಅಥವಾ ಕೆಂಪು ಬಣ್ಣಗಳನ್ನು ಕೂಡುತ್ತದೆ.

**೨. ದಾರುವಿನ ಬಣ್ಣ** : ರಕ್ತ ಚಂದನದ ದಾರುವಿನಿಂದ 'ಸ್ಯಾಂಟಲಿನ್' ಎಂಬ ವ್ಯಾಪಾರ ನಾಮ ಪಡೆದ ಎಳೆಗೆಂಪು ಬಣ್ಣ ದೊರೆಯುತ್ತದೆ.

| | |
|---|---|
| ಹಲಸಿನ ಮರ, ದೊಡ್ಡ ಮರದರಿಸಿನ ಬೆಂಡಕ | : ಹಳದಿ ಬಣ್ಣ |
| ಸಪ್ಪಂಗ ಮಂಜತ್ತಿ | : ಕೆಂಪು ಬಣ್ಣ |
| ಕನಾಗ | : ಕೆನ್ನೀಲಿ |
| ನೀಲಿ ರಂಗು ಮರ | : ನೇರಳೆ ಬಣ್ಣ |
| ಕಗ್ಗಲಿ | : ಕಂದು ಕೆಂಪು.[೬] |

**೩. ಬೇರಿನಿಂದ ಬಣ್ಣ**

ಅನೇಕ ಜಾತಿ ಗಿಡಮರಗಳ ಬೇರಿನಿಂದ ಹಾಗೂ ಬೇರಿನ ತೊಗಟೆಯಿಂದ ವಿವಿಧ ಬಣ್ಣಗಳು ದೊರೆಯುತ್ತವೆ. ಮುಖ್ಯವಾಗಿ ಕೆಲವು ಈ ರೀತಿ ಇವೆ.

---

೨೭. ಅಜ್ಜಂಪುರ ಕೃಷ್ಣಸ್ವಾಮಿ : ಅರಣ್ಯ ಶಾಸ್ತ್ರ ಪು. ೧೯೯ ಸ್ವರ್ಣಂಭಾ ಪಬ್ಲಿಕೇಶನ ಬೆಂಗಳೂರು ೧೯೯೧

ಹಳದಿ ಪಾವಟೆ
ದೊಡ್ಡ ಮರದರಿಸಿನ
ಬುಡಿಗಾನೆ
ದಾಳಿಂಬೆ



ಹಳದಿ ಅಥವಾ ಕೆಂಪು ಛಾಯೆಯ ಬಣ್ಣ

**೪. ಹೂವು, ಹಣ್ಣು, ಬೀಜಗಳಿಂದ ಬಣ್ಣ**

ಅನೇಕ ಗಿಡಮರಗಳ ಪುಷ್ಪಗಳು ಹಣ್ಣು ಬೀಜಗಳಿಂದಲೂ ವಿವಿಧ ರಂಗಿನ ಬಣ್ಣಗಳು ದೊರೆಯುತ್ತವೆ. ಹೆಸರಿಸಬಹುದಾದ ಕೆಲವನ್ನು ಈ ಕೆಳಗೆ ಕೊಡಲಾಗಿದೆ.

**ಹೂವುಗಳು**

| | |
|---|---|
| ದಾಳಿಂಬೆ ಹೂ | : ತಿಳಿಗೆಂಪು |
| ಪಾರಿಜಾತ ಹೂ | : ಕಿತ್ತಳೆ ಬಣ್ಣ |
| ಕಲ್ಲರಿಗೆ ಹೂ | : ಕೆಂಪು ಹಳದಿ ಛಾಯೆ. |
| ಸಂಪಿಗೆ ಹೂ (ಗಂಧರಿಗೆ ಹೂ) | : ಹಳದಿ |
| ಮುತ್ತುಗದ ಹೂ (ಮುಳ್ಳುಮುತ್ತಗದ ಹೂ) | : ಹಳದಿ,ಕಿತ್ತಳೆ ಛಾಹೆ |
| ಸುರಗಿ (ಮೊಗ್ಗು) | : ಕೆಂಪು |
| ತಾಮ್ರ ಪುಷ್ಪಿ | : ಕೆಂಪು |
| ಹಾಲೆ ಹೂ | : ನೀಲಿ |

**ಹಣ್ಣುಗಳು**

ಕಪಿಲ ರಂಗು : ಉಜ್ವಲ, ಕೆಂಪು, ವ್ಯಾಪಾರ ರಂಗದಲ್ಲಿ 'ಕಮೇಲ' ಬಣ್ಣ (Kamela Dye) ಎಂದು ಹೆಸರಿಸಲಾಗಿದೆ.

| | |
|---|---|
| ಹೂವರಸಿ | : ಹಳದಿ |
| ಕೊಡಚಿ | : ಕಪ್ಪು |
| ಕರಿಜಾಲಿ | : ಕಂದು ಕಪ್ಪು |

**ಬೀಜಗಳ ಸುತ್ತಿನ ತಿರುಳಿನಿಂದ**

ರಂಗುಮಾಲೆ : ಕೆಂಪು ಮತ್ತು ಕಿತ್ತಳೆ ಛಾಯೆ, ಇದು 'ಅರ್ನಾಟೋ' ಬಣ್ಣ (Arnatto Dye) ಎಂದು ವ್ಯಾಪಾರ ರಂಗದಲ್ಲಿ ಖ್ಯಾತವಾಗಿದೆ.[೧೮]

**೫. ಗಿಡಗಳಿಂದ**

ಮಂಜಿಷ್ಟ (ಸೋಮಲತೆ) : ಕೆಂಪು, ಉಜ್ವಲ ಕಂದು ಬಣ್ಣ
ಅಂಜೂರ ನೀಲಿಗಿಡ : ನೀಲಿ ಬಣ್ಣ.[೧೯]

**ತೊಟ್ಟಿಲುಗಳ ರಚನಾ ವಿಧಿ-ವಿಧಾನಗಳು**

ಉತ್ತರ ಕರ್ನಾಟಕದಲ್ಲಿ ಹೇಳಿಕೊಳ್ಳುವಂತಹ ಯಾವುದೇ ದಟ್ಟವಾದ ಅರಣ್ಯವಿಲ್ಲ ಅದರೂ ದೇವಾಲಯ ಗೃಹವಾಸ್ತು ಹಾಗೂ ಕೆಲವು ಗ್ರಾಮದೇವತೆ ಶಿಲ್ಪಗಳನ್ನು ರಚಿಸಲು ಹೆಚ್ಚಾಗಿ ಮರವನ್ನೆ ಬಳಸಿದ್ದು ಕಾಣುತ್ತವೆ.

೧೮. ಅಜ್ಜಂಪುರ ಕೃಷ್ಣಸ್ವಾಮಿ : ಅರಣ್ಯ ಶಾಸ್ತ್ರ ಪು. ೨೦೦ ಸ್ವರ್ಣಂಭಾ ಪಬ್ಲಿಕೇಶನ ಬೆಂಗಳೂರು ೧೯೯೧
೧೯. -ಅದೇ- ಪು. ೨೦೧

ಸಾಮಾನ್ಯವಾಗಿ ಇಲ್ಲಿ ಸಿಗುವಂತಹ ಬೇವು, ಗೂಬ್ಬಳಿ, ಬಸ್ಸಿ, ಭಾಗೆ, ಹುಣಸೆ, ಕಗ್ಗಲಿ, ಬಿಳಿಜಾಲಿ, ಕರಿಜಾಲಿ, ಕತ್ತಾಳೆ, ಚಳ್ಳೆ, ಕಳ್ಳಿ, ಈಚಲು, ಚಂಡರಿಕೆ, ಮಾವು, ಹೊಂಗೆ, ಮಳಿಗೆ, ದಿಂಡಿಗ, ನಂದಿ, ಚಿಬ್ಬಲಿ, ಹುರುಗಲ, ಸಾಗುವಾನಿ, ಹಲಸು, ಮುಂತಾದವುಗಳಾದ ಮರಗಳಲ್ಲಿ ಗ್ರಾಮದೇವತೆಗಳ ಪ್ರತಿಮೆಗಳು ಮತ್ತು ವಾಹನಗಳು, ರಥಗಳು, ಪಲ್ಲಕ್ಕಿ, ಅಲ್ಲದೆ ಗೃಹವಾಸ್ತುಗಳು ರಚನೆಗೊಂಡಿವೆ. ಅದರಲ್ಲೂ ಬೇವಿನ ಮರವಂತು ಈ ಪ್ರದೇಶದ ಜನರಿಗೆ ವರದಾನವೇ ಆಗಿದೆ.[೧೦] ಇಂತಹ ಎಲ್ಲ ವಿಚಾರಗಳ ಹಿನ್ನಲೆಯಲ್ಲಿ ಕಲಘಟಗಿಯಲ್ಲಿ ರೂಪಗೊಳ್ಳುವ ತೊಟ್ಟಿಲುಗಳು, ಸೋಫಾ, ಟೀಪಾಯಿ, ತೂಗುಮಂಚ, ಕುರ್ಚಿ ಆಟಿಕೆ, ಸಾಮಾನುಗಳು ಹೆಚ್ಚಾಗಿ ಸಾಗುವಾನಿ ಮರದಿಂದ ನಿರ್ಮಾಣಗೊಂಡಿವೆ. ಅಲ್ಲದೇ ಗ್ರಾಮದೇವತೆಯ ಮೂರ್ತಿಗಳು ಸಹಿತ ಹೆಚ್ಚಾಗಿ ಇದೇ ಮರದಲ್ಲಿಯೇ ರಚನೆಯಾಗಿವೆ.

**ಮರ ಹದಗೊಳಿಸುವಿಕೆ**

ಕಡಿದ ಮರದ ತುಂಡನ್ನು ಉಪಯೊಗಿಸುವ ಮೊದಲೆ ಅನೇಕ ರೀತಿಯಲ್ಲಿ ಸಂಸ್ಕರಿಸುತ್ತಾರೆ. ಮರದ ತುಂಡನ್ನು ಹದಗೊಳಿಸುವುದು ಒಂದು ಹಂತ. ಆಗತಾನೇ ಕಡಿದ ಮರದ ತುಂಡಿನಲ್ಲಿ ನೀರಿನಂಶ ಬಹಳ ಹೆಚ್ಚು ಇರುತ್ತದೆ. ಈ ನೀರನ್ನು ಮರದಿಂದ ತಗೆಯುವ ಕಾರ್ಯಕ್ಕೆ ಮರ ಹದಗೊಳಿಸುವುದು ಎನ್ನುತ್ತಾರೆ. ಕತ್ತರಿಸಿದ ಮರದ ತುಂಡನ್ನು ಗಾಳಿಯಲ್ಲಿ ಬಿಟ್ಟು ನೀರಿನಂಶ ಕಡಿಮೆ ಮಾಡುವುದು. ಕತ್ತರಿಸಿದ ಮರವನ್ನು ಕೃತಕವಾಗಿ ಹದಗೊಳಿಸುವ ವಿಧಾನಕ್ಕೆ ಆವಿಗೆ ವಿಧಾನವೆನ್ನುತ್ತಾರೆ. ಈ ವಿಧಾನದಲ್ಲಿ ಶಾಖ ಹಾಗೂ ಗಾಳಿಯ ಚಲನೆಯನ್ನು ಉಂಟುಮಾಡಿ ಹದಗೊಳಿಸುತ್ತಾರೆ.

ಹದಗೊಳಿಸಬೇಕಾದ ಮರದ ನಿರ್ವಾತ ಕೋಶವೊಂದರಲ್ಲಿಟ್ಟು ಅತಿ ಉಷ್ಣತೆಯನ್ನು ಉಂಟುಮಾಡಿ ನೀರಿನ ಅಂಶ ಬಾಷ್ಪವಾಗಿ ಹೋಗುವಂತೆ ಮಾಡುವ ವಿಧಾನವು ಒಂದೂ. ಈ ವಿಧಾನದಿಂದ ೧೨ ಘಂಟೆಗಳೊಳಗೆ ಮರವನ್ನು ಹದಗೊಳಿಸಬಹುದು. ಇದರಿಂದ ಮರದ ಭಾರ ೨೫-೩೩ರಷ್ಟು ಕಡಿಮೆಯಾಗುತ್ತದೆ. ಅಲ್ಲದೇ ಮರದ ಗಟ್ಟಿತನ, ಬಾಳಿಕೆ, ಸಾಮರ್ಥ್ಯಗಳನ್ನು ಹೆಚ್ಚಿಸುತ್ತದೆ. ಮೆದು ಮರಕ್ಕಿಂತ ಗಟ್ಟಿ ಮರವನ್ನು ಹದಮಾಡಲು, ಹೆಚ್ಚುಕಾಲ ಬೇಕಾಗುತ್ತದೆ. ಕಂಬ ತೊಲೆ, ಕಿಟಕಿ, ಬಾಗಿಲು, ಕಟ್ಟಡ ಸಾಮಗ್ರಿ ಪೀಠೋಪಕರಣಗಳು ಹಾಗೂ ಶಿಲ್ಪಗಳು ಹೀಗೆ ಮರವನ್ನು ಯಾವುದಕ್ಕೆ ಬಳಸಿದರೂ ಅದನ್ನು ಚೆನ್ನಾಗಿ ಹದಗೊಳಿಸಬೇಕು.[೧೧] ಕಲಘಟಗಿಯ ಕಲಾವಿದರು ಮರದ ತುಂಡುಗಳನ್ನು ಗಾಳಿಯಲ್ಲಿ ಬಿಟ್ಟು ನಂತರ ಬಿಡಿಭಾಗಗಳನ್ನು ರಚಿಸಿ ಮತ್ತೆ ಜೋಡಿಸಿ ನಿರ್ಮಾಣ ಮಾಡುತ್ತಾರೆ. ಹಾಗೂ ಈ ಕಲಾವಿದರು ಹೆಚ್ಚಾಗಿ ಬಳಸುವ ಮಾಧ್ಯಮ ಸಾಗುವಾನಿ ಕಟ್ಟಿಗೆಯಾಗಿದೆ. ಈ ರೀತಿ ಹದಗೊಂಡ ಮರದ ತುಂಡಿನಲ್ಲಿ ಎರಡು ಪ್ರಕಾರದ ತೊಟ್ಟಿಲು ಹಾಗೂ ದೇವಿಯ ಮೂರ್ತಿಗಳನ್ನು ನಿರ್ಮಿಸುತ್ತಾರೆ. ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ನೋಡೋಣ.

೧. ತೂಗು ತೊಟ್ಟಿಲಿನ ಬಿಡಿಭಾಗಗಳು

೨. ಸ್ಟ್ಯಾಂಡಿಂಗ್ ತೊಟ್ಟಿಲಿನ ಬಿಡಿಭಾಗಗಳು

೩. ಗ್ರಾಮದೇವತೆಯ ಬಿಡಿಭಾಗಗಳು

೪. ಇನ್ನಿತರ ಪೀಠೋಪಕರಣಗಳು

ಈ ಎಲ್ಲ ಬಿಡಿಭಾಗಗಳ ರಚನಾ ವಿಧಾನ ತಿಳಿಯೋಣ.

**ತೂಗು ತೊಟ್ಟಿಲಿನ ಎಕ್ಕೆ :** ತೊಟ್ಟಿಲುಗಳಿಗೆ ಬಳಸುವಂತಹ ಮರದ ತುಂಡುಗಳನ್ನು ದೇವಿಕೊಪ್ಪ, ಕಿರುವತ್ತಿ, ಕಲಕೇರಿ, ಮುಂಡಗೋಡ, ಮುಂತಾದ ಗ್ರಾಮಗಳಿಂದ ತಂದು ಮೇಲೆ ಹೇಳಿದ ಹಾಗೆ ಹದಗೋಳಿಸಿ, ನಂತರ ತಮಗೆ ಬೇಕಾದ ಅಳತೆಯಲ್ಲಿ ಗರಗಸದಿಂದ ಕತ್ತರಿಸಿಕೊಂಡು, ನಂತರ ಬಾಚಿಯಿಂದ ದುಂಡಾಗಿ ಕೆತ್ತಿ

---

೧೦. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೯೨ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೧೧. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೪ ಯಂತ್ರ ಜಗತ್ತು ಪು. ೪೩೪ ಕರ್ನಾಟಕ ಸಹಕಾರಿ ಪಕಾಶನ ಮಂದಿರ, ಬೆಂಗಳೂರು ೧೯೭೨

ಗಾಡಕ್ಕೆ ಹಾಕಿ ಇಲ್ಲಿ ಬಿಲ್ಲಿನ ಚರ್ಮದ ದಾರವನ್ನು ಮರದ ತುಂಡಿಗೆ ತೊಡಕಿಸಿದ ಮೇಲೆ ಬಲಗೈಯಿಂದ ಬಿಲ್ಲನ್ನು ಹಿಂದೆ ಮುಂದೆ ಸರಿಸುವುದರಿಂದ ಮರದ ತುಂಡು ಚಕ್ರದಹಾಗೆ ತಿರುಗುವುದು, ನಂತರದಲ್ಲಿ ಉಳಿಗಳ ಸಹಾಯದಿಂದ ತಮಗೆ ಬೇಕಾದ ಹಾಗೆ ವಿನ್ಯಾಸಗಳನ್ನು ರೂಪಿಸುವರು ಇಲ್ಲಿ ಮುಖ್ಯವಾಗಿ ಉಳಿಗಳನ್ನು ಎಡಗೈ ಮತ್ತು ಎರಡು ಕಾಲುಗಳ ಮಧ್ಯ ಅಲುಗಾಡದ ಹಾಗೆ ಹಿಡಿದು ರೂಪಿಸುವರು. ನಂತರ ಸ್ಯಾಂಡ್ ಪೇಪರನಿಂದ ಹಿಡಿದು ನಯಗೊಳಿಸಿದ ಮೇಲೆ ಅರಗು ಬಣ್ಣದ ತುಕುಡಿಗಳನ್ನು ಬೆಂಕಿಯಲ್ಲಿ ಕಾಯಿಸಿ ಮರದ ತುಂಡಿಗೆ ಹಿಡಿಯುವುದರಿಂದ ವರ್ಣವು ವೃತ್ತಾಕಾರವಾಗಿ ಲೇಪನವಾಗುತ್ತದೆ. ಮತ್ತೆ ಇದರಲ್ಲಿ ಮಿಶ್ರಿತ ವರ್ಣಗಳು ಬೇಕಾದರೆ ಒಂದು ವರ್ಣದ ಪಕ್ಕದಲ್ಲಿ ಇನ್ನೊಂದು ವರ್ಣ ಹಿಡಿದು ಮಿಶ್ರಿಣ ಮಾಡಲಾಗುವುದು. ಈ ಸುಂದರವಾದ ವರ್ಣ ವಿನ್ಯಾಸದ ಮುಕ್ತಾಯದ ನಂತರ, ವರ್ಣ ಹೊಳಪಿಗೆ ಕೇದಿಗೆಯ ಎಲೆಯನ್ನು ಖಾದ್ಯತೈಲದಲ್ಲಿ (ಒಳ್ಳೇಎಣ್ಣೆ) ಅದ್ದಿ ಕೈಯಿಂದ ಜೋರಾಗಿ ಹಿಡಿಯುವುದರಿಂದ ವರ್ಣಗಳಲ್ಲಿ ಹೊಳಪು ಬರುತ್ತದೆ.

ಇಲ್ಲಿ ತಯಾರಿಸಿದ ಮರದ ತುಂಡುಗಳು ತೂಗುತೊಟ್ಟಿಲು, ಸ್ಟ್ಯಾಂಡಿಂಗ್ ತೊಟ್ಟಿಲು, ಹಾಗೂ ಇನ್ನಿತರ ಪೀಠೋಪಕರಣಗಳಿಗೆ ಉಪಯೋಗಿಸುವ ಒಂದು ಬಿಡಿ ಭಾಗವಾಗಿದ್ದು ಇದಕ್ಕೆ ಕಲಾವಿದರು ಹೇಳುವ ಹಾಗೆ 'ಎಕ್ಕೇ' ಎಂದು ಕರೆಯುವರು.

**ರೇಜೆ** : ಇದು ತೊಟ್ಟಿಲಿನಲ್ಲಿಯ ಎರಡನೆಯ ಪಟ್ಟಿಕೆಯಾಗಿದೆ. ಇದನ್ನು ತೊಟ್ಟಿಲಿನ ಅಳತೆಗೆ ಸರಿಯಾಗಿ ಕತ್ತರಿಸಿಕೊಂಡು ಮಶೀನ್ ಮೂಲಕ ವಿವಿಧ ರೇಖೆಗಳನ್ನು, ಉಬ್ಬು ತಗ್ಗುಗಳನ್ನು, ರಚಿಸಿ ನಂತರ ಸ್ಯಾಂಡ್ ಪೇಪರನಿಂದ ತಿಕ್ಕಿ ನಯಗೊಳಿಸಿ, ನಂತರದಲ್ಲಿ ಹುಣಸೆ ಸರಿಯನ್ನು ಲೇಪಿಸಿ ಒಣಗಿಸಿ ಇದಾದನಂತರ ಸಮುದ್ರದಲ್ಲಿ ಸಿಗುವ ವೃತ್ತಾಕಾರದ ಕಲ್ಲಿನಿಂದ ನೀರು ಹಾಕಿ ಹಲವಾರು ಬಾರಿ ಉಜ್ಜಿ ನುಣುಪುಗೊಳಿಸಿಕೊಂಡು ನಂತರದ ಹಂತದಲ್ಲಿ ಸುಂದರವಾಗಿ ವಿವಿಧ ವರ್ಣಗಳ ರೇಖೆಗಳು, ಚುಕ್ಕೆಗಳು, ಸರಪಳಿಯಾಕಾರ, ಚಿಕ್ಕ ಚಿಕ್ಕ , ಹೂಗಳನ್ನು ರಚಿಸುವದಾಗಿದೆ. ಈ ಪಟ್ಟಿಕೆ ನೋಡುವುದಕ್ಕೆ ದೇವಾಲಯದ ಹೊರಚಾಚಿದ ಭಾಗದಂತೆ ಕಂಡುಬರುತ್ತದೆ. ಪಟ್ಟಿಕೆಯ ಎರಡು ತುದಿಗಳನ್ನು ಜೋಡಿಸುವುದಕ್ಕೆ ಅನುಕೂಲ ಆಗುವ ಹಾಗೆ ಉಳಿಗಳ ಸಹಾಯದಿಂದ ಕತ್ತರಿಸಿ ಇಡಲಾಗಿರುತ್ತದೆ.

**ಕಮಾನು ಪಟ್ಟಿಕೆ** : ಈ ಕಮಾನು ಪಟ್ಟಿಕೆಯು ತೊಟ್ಟಿಲಿನ ಮೂರನೆಯ ಭಾಗವಾಗಿ ರೂಪಗೊಂಡು ರೇಜೆ ಪಟ್ಟಿಕೆಯ ಕೆಳಭಾಗದಲ್ಲಿ ಜೋಡಿಸಲಾಗಿರುತ್ತದೆ. ಈ ಪಟ್ಟಿಕೆಯನ್ನು ಮಶೀನಗಳಲ್ಲಿ ಕತ್ತರಿಸಿಕೊಂಡು ನಂತರ ಉಳಿ ಕೊಡತೆಗಳಿಂದ ಕಮಾನುಗಳನ್ನು ರಚಿಸಿ ಉಜ್ಜಗೊರಡು ಹೊಡೆದು ನಯವಾಗಿಸಿ ಮತ್ತೆ ಮೇಲೆ ಹೇಳಿದಹಾಗೆ ಹುಣಸ ಸರಿಯನ್ನು ಲೇಪಿಸಿ ಒಣಗಿಸಿ ಸಾಪಾದ ಕಲ್ಲಿನಿಂದ ಉಜ್ಜಿ ನಯಗೊಳಿಸಿ ಮತ್ತೆ ಒಣಗಿಸಿದ ಮೇಲೆ ಹಿನ್ನೆಲೆ ಲೇಪನ ಜಲವರ್ಣದಿಂದ ಲೇಪಿಸಿ ಕಮಾನು ಅಂಚುಗಳಿಗೆ ರೇಖೆಗಳನ್ನು ಎಳೆದು ಮೇಲ್ಭಾಗದಲ್ಲಿ ವಿವಿಧ ರೇಖೆಯನ್ನು ಮೂಡಿಸಿ ಕಮಾನುಗಳಿಂದ ಕಮಾನುಗಳ ಮಧ್ಯ ಹೂಕುಂಡ ರಚಿಸುವದಾಗಿದೆ. ಕಮಾನುಗಳ ಮಧ್ಯದಲ್ಲಿ ಸಣ್ಣ ಸಣ್ಣ ಅರಗಿನ ಬಣ್ಣದ ಬುಗುರಿಗಳನ್ನು ಮೊಳೆಯಿಂದ ಹೊಡೆದು ಸುಂದರವಾಗಿ ಕಾಣುವಹಾಗೆ ರಚಿಸುವ ವಿಧಾನವಾಗಿದೆ. ನಂತರ ಈ ಪಟ್ಟಿಕೆಯ ಎರಡು ತುದಿಗಳನ್ನು ಕೊನೆಯ ಹಂತದಲ್ಲಿ ಜೋಡಿಸುವುದಕ್ಕೆ ಅನುಕೂಲವಾಗುವ ಹಾಗೆ ಕತ್ತರಿಸಿಕೊಂಡಿರುತ್ತಾರೆ.

**ರೇಜೆ** : ಇದು ಕಮಾನು ಭಾಗದ ಕೆಳಭಾಗದಲ್ಲಿ ಕಂಡುಬರುವ ಪಟ್ಟಿಕೆಯಾಗಿದೆ. ಇದು ಮೇಲಿನ ರೇಜೆ ಪಟ್ಟಿಕೆಯಿಂದ ಭಿನ್ನವಾಗಿದೆ. ಈ ಪಟ್ಟಿಕೆಯ ಎರಡು ಪಕ್ಕದಲ್ಲಿ ಇಳಿಜಾರು ಕಾಣುವಹಾಗೆ ಮಶೀನ್ ಮೂಲಕ ಕತ್ತರಿಸಿ ಇಲ್ಲಿ ಸಹ ಮೇಲೆ ಹೇಳಿದ ಹಾಗೆ ಹುಣುಸೆ ಸರಿ ಲೇಪಿಸಿ ಒಣಗಿಸಿ, ನಂತರ ದುಂಡಾದ ಸಾಪಾದ ಕಲ್ಲಿನಿಂದ ಉಜ್ಜಿ ನಯಗೊಳಿಸುತ್ತಾರೆ. ಇದರಲ್ಲಿಯೂ ಸಹ ಜಲವರ್ಣ ಲೇಪನಕೊಟ್ಟು ನಂತರ ಇದೇ ವರ್ಣದಿಂದ ರೇಖೆಗಳನ್ನು ಮತ್ತು ಬೇರೆ ಬೇರೆ ವರ್ಣದ ವೃತ್ತಾಕಾರದ ಚುಕ್ಕೆಗಳು ಈ ಪಟ್ಟಿಕೆಯಲ್ಲಿವೆ.

**ಗೊಂಬಿ ಎಳಗಿ** : ಈ ಪಟ್ಟಿಕೆಯು ಸಮಾಂತರವಾಗಿ ಮತ್ತು ಅಗಲವಾಗಿರುತ್ತದೆ. ಈ ಪಟ್ಟಿಕೆಯನ್ನು ಕಲಾವಿದ ಜನಾಕರ್ಷಣೆಯ ಸಲುವಾಗಿ ಸುಂದರವಾದ ಚಿತ್ರಗಳನ್ನು ಧರ್ಮಕ್ಕೆ ಅನುಸಾರವಾಗಿ ಚಿತ್ರಿಸುವುದಕ್ಕೆ

ನಿರ್ಮಿಸಿರಬಹುದು. ಇಲ್ಲಿ ಕಲಾವಿದ ತೊಟ್ಟಿಲು ಬೇಕೆಂದವರ ಧರ್ಮಕ್ಕೆ ಸಂಬಂಧಿಸಿದಂತಹ ಚಿತ್ರಗಳನ್ನು ಮೂಡಿಸುವ ಪಟ್ಟಿಕೆಯಾಗಿದೆ. ಇದರ ರಚನೆಯೂ ಸಹ ಮೇಲೆ ಹೇಳಿದ ಹಾಗೆ ಮಶೀನ್ ಮೂಲಕ ಕತ್ತರಿಸಿ ಹುಣಸೆ ಸರಿ ಲೇಪಿಸಿ ಒಣಗಿಸಿ ಕಲ್ಲಿನಿಂದ ಉಜ್ಜಿ ನಯಗೊಳಿಸಿದ ಮೇಲೆ, ಚಿತ್ರರಚನೆ ಮಾಡುತ್ತಾರೆ. ಇಲ್ಲಿಯೂ ಜಲವರ್ಣದಿಂದ ಚಿತ್ರ ಬರೆಯಲಾಗುತ್ತದೆ.

**ರೇಜಿ** : ಇದು ಮೇಲಿನ ಎರಡು ರೇಜಿಗಳಿಂದ ಭಿನ್ನವಾಗಿರುತ್ತದೆ. ಇಲ್ಲಿ ರೇಜಿಯ ಕೆಳಭಾಗವು ದೇವಾಲಯದ ಪೀಠದ ಹಾಗೆ ನಿರ್ಮಿಸಿದ್ದಾರೆ. ಇಲ್ಲಿಯೂ ಮಶೀನ್ ಮೂಲಕ ಆಕಾರ ಸೃಷ್ಟಿಸಿದ್ದಾರೆ. ತೊಟ್ಟಿಲಿನ ಕೊನೆಯ ಪಟ್ಟಿಕೆಯಾದ ಇದು ಇಡಿ ತೊಟ್ಟಿಲು ಪೀಠದ ಮೇಲೆ ಕುಳಿತಿರುವ ಹಾಗೆ ರಚಿಸುತ್ತಾರೆ. ಇಲ್ಲಿಯೂ ಹುಣಸೆ ಸರಿ, ಕಲ್ಲಿನಿಂದ ಉಜ್ಜಿ ತೊಳೆಯುವುದು ಆಗಿದೆ. ನಂತರ ಜಲವರ್ಣದಿಂದ ಸರಪಳಿಯಾಕಾರದ ರೇಖೆಗಳು ವಿವಿಧ ಬಣ್ಣದ ಹೂಗಳು ಮೂಡಿವೆ.

**ತೊಟ್ಟಿಲು ಕಾಲುಗಳು** : ಇಲ್ಲಿ ಮರದ ತುಂಡನ್ನು ಬಾಚಿಯಿಂದ ದುಂಡಾಗಿ ಕೆತ್ತಿಕೊಂಡು, ನಂತರ ಎರಡನೆಯ ಹಂತದಲ್ಲಿ ಕಾಲುಗಳ ಮೇಲುತುದಿಯಲ್ಲಿ ಮರವನ್ನು ಹಾಗೆ ಬಿಟ್ಟು ತೀರ ಕೆಳಭಾಗದಲ್ಲಿಯೂ ಹಾಗೆ ಬಿಟ್ಟು ಮಧ್ಯದಲ್ಲಿ ಮಾತ್ರ ಬಾಚಿಯಿಂದ ಕೆತ್ತಿ ಈ ಮರದ ತುಂಡನ್ನು ಗಾಡಕ್ಕೆ ಹಾಕಿ ಇಲ್ಲಿ ಬಿಲ್ಲಿನ ಎರಡು ತುದಿಗಳಿಗೆ ಅಂಟಿಕೊಂಡಿರುವ ಚರ್ಮದ ದಾರವನ್ನು ಮಧ್ಯದಲ್ಲಿ ಮರದ ತುಂಡಿಗೆ ತೊಡಕು ಹಾಕಿ ಬಲಗೈಯಿಂದ ಬಿಲ್ಲನ್ನು ಹಿಂದೆ ಮುಂದೆ ಸರಿಸುವುದರಿಂದ ಮರದ ತುಂಡು ಚಕ್ರದ ಹಾಗೆ ತಿರುಗುವುದು, ಮತ್ತೆ ಹಲವಾರು ಉಳಿಗಳಿಂದ ತುಂಡಿನ ತುದಿಭಾಗವನ್ನು ಗೋಪುರದ ಹಾಗೆ ವಿನ್ಯಾಸ ಬರುವಹಾಗೆ ರಚಿಸಿ ಮತ್ತೆ ಕೆಳಭಾಗದಲ್ಲಿ ಸಮನಾಗಿ ಕೂಡುವ ಕಲ್ಪನೆಯೊಂದಿಗೆ ಗುಂಡುಗಳನ್ನು ರಚಿಸಿಕೊಂಡು ವರ್ಣಗಳನ್ನು ಲೇಪಿಸುತ್ತಾರೆ. ಇಲ್ಲಿ ಬೆಂಕಿಯಿಂದ ಕಾಯಿಸುತ್ತಾ ಅರಗಿನ ಬಣ್ಣದ ತುಂಡುಗಳನ್ನು ಮರದತುಂಡಿಗೆ ಹಿಡಿಯುವುದರಿಂದ ಲೇಪನ ಕಾರ್ಯ ಮಾಡುತ್ತಾರೆ. ವರ್ಣಗಳ ಮಿಶ್ರಣ ಕಾರ್ಯದಲ್ಲಿಯೂ ಇದೆ ಪದ್ಧತಿಯನ್ನು ಅನುಸರಿಸುತ್ತಾರೆ. ನಂತರ ಕಾಲುಗಳಿಗೆ ಎಕ್ಕೇ ಜೋಡಿಸುವ ರಂಧ್ರ ಹಾಗೆ ರೇಜಿ, ಕಮಾನು, ಗೊಂಬಿಎಳಗೆ ಜೋಡಿಸುವುದಕ್ಕೆ ನಾಲ್ಕು ಕಾಲುಗಳಿಗೆ ಅಳತೆಗೆ ತಕ್ಕಂತೆ ಕೊರೆದಿರುತ್ತಾರೆ.

**ಗುಂಡುಗಳು** : ಇವು ಮರದ ತುಂಡುಗಳಿಂದ ನಿರ್ಮಿಸಿದವುಗಳಾಗಿವೆ. ಮರದ ತುಂಡು ತಿರುಗುತ್ತಿರುವಾಗ ಉಳಿಗಳ ಸಹಾಯದಿಂದ ರಚಿಸಿ ನಂತರ ವರ್ಣಲೇಪನ ಮಾಡಲಾಗುತ್ತದೆ.

**ತೊಟ್ಟಿಲಿನ ಒಳಭಾಗದ ಮರದ ಹಲಗೆ** : ತೊಟ್ಟಿಲಿನಲ್ಲಿ ಮಕ್ಕಳು ಕುಳಿತುಕೊಳ್ಳುವುದಕ್ಕೂ, ಮಲಗುವುದಕ್ಕೂ, ಮರದ ಹಲಗೆಗಳು ಅವಶ್ಯ. ಈ ಹಲಗೆಗಳನ್ನು ಸ್ಥಳೀಯವಾಗಿ ದೊರಕುವ ಪ್ಲಾವುಡ್ ಅಂದರೆ ಬಾಳಿಕೆ ಬರುವಂತಹ ಮರದ ಹಲಗೆಯನ್ನು ಅಳತೆಗೆ ಅನುಸಾರವಾಗಿ ಕತ್ತರಿಸಿ ಹಾಕುತ್ತಾರೆ. ಮಾರ್ಕೆಟ್‌ನಲ್ಲಿಸಿಗುವ ವೈಟ್ ಪ್ರೈಮರ್ ಲೇಪಿಸಿ ನಂತರ ಆಯಿಲ್ ಪೇಂಟನ್ನು ಲೇಪಿಸಿರುವುದು ಕಂಡುಬರುತ್ತದೆ. ನಂತರ ಈ ಹಲಗೆಗಳನ್ನು ಹೊಂದಿಸಿ ಮೊಳೆಗಳನ್ನು ಹೊಡೆಯುತ್ತಾರೆ.

**ಕಬ್ಬಿಣದ ಪಟ್ಟಿಗಳು ಮತ್ತು ಕಬ್ಬಿಣದ ರಿಂಗು** : ತೊಟ್ಟಿಲು ತೂಗುವುದಕ್ಕೆ ಆಧಾರವಾದ ಈ ಪಟ್ಟಿಕೆಯು ತೊಟ್ಟಿಲಿನ ತೀರ ಕೆಳಭಾಗದಲ್ಲಿ ಹಾಕಲಾಗಿರುತ್ತದೆ. ಈ ಪಟ್ಟಿಕೆಗೆ ನಟ್ ಬೋಲ್ಟ್‌ಗಳನ್ನು ಬಿಗಿಯುವುದು ಅಲ್ಲದೆ ಪಟ್ಟಿಯ ಎರಡು ತುದಿಗಳಲ್ಲಿ ಕಬ್ಬಿಣದ ರಿಂಗುಗಳನ್ನು ರಚಿಸಿರುತ್ತಾರೆ. ಇಲ್ಲಿ ಹಗ್ಗ ಕಟ್ಟಲಿಕ್ಕೆ ಕಬ್ಬಿಣದ ಸರಪಳಿ, ಪ್ಲಾಸ್ಟಿಕ್ ವಾಯರ್ ನಂತಹ ದಾರವನ್ನು ಬಳಸುವುದಕ್ಕಾಗಿ ನಿರ್ಮಿಸುತ್ತಾರೆ.

**ಹಿತ್ತಾಳೆಯ ಕ್ಲಿಪ್‌ಗಳು** : ತೊಟ್ಟಿಲು ಕಾಲುಗಳಲ್ಲಿ ರಂಧ್ರ ಕೊರೆದು ಬಿದಿರಿನ ಚಕ್ಕೆಗಳನ್ನು ಹೊಡೆದಿರುತ್ತಾರೆ. ಇದರಿಂದ ತೊಟ್ಟಿಲಿಗೆ ಮೊಳೆ ಅವಶ್ಯಕತೆ ಇಲ್ಲ. ಇಲ್ಲಿ ಬಿದಿರಿನ ಚಕ್ಕೆಗಳ ಗುರುತು ಕಾಣಿಸದೆ ಮಾಡುವ ಹಾಗೇ ಹಿತ್ತಾಳೆ ಕ್ಲಿಪ್‌ಗಳನ್ನು ಕೂಡಿಸಿ ಸ್ಕ್ರೂಗಳನ್ನು ಬಿಗಿಯುತ್ತಾರೆ.

**ಚಿನೀ** : ಇದು ಮರದ ತುಂಡಿನಿಂದ ಬೋರಮಳದ ಆಕಾರದಲ್ಲಿ ನಿರ್ಮಿಸುತ್ತಾರೆ. ಮಧ್ಯದಲ್ಲಿ ತಂತಿಯೂ ಹಾಯಿಲಿಕ್ಕೆ ಆಳವಾಗಿ ರಂಧ್ರಕೊರೆದು ನಿರ್ಮಿಸುತ್ತಾರೆ. ನಂತರ ಮೇಲೆ ವರ್ಣಲೇಪನ ಮಾಡಲಾಗುತ್ತದೆ.

**ಬಿಡಿಭಾಗಗಳು :** ತೊಟ್ಟಿಲು ತಯಾರಿಕೆಯ ಪೂರ್ವದಲ್ಲಿಯ ಬಿಡಿಭಾಗಗಳು ೧. ಎಕ್ಕೇ, ೨. ರೇಜಿ, ೩. ಕಮಾನು, ೪. ರೇಜಿ, ೫. ಗೊಂಬಿಎಳಗಿ ೬. ರೇಜಿ, ೭. ಕಾಲುಗಳು, ೮. ಮರದ ಹಲಗೆ ೯. ಕಬ್ಬಿಣದ ಪಟ್ಟಿಗಳು ೧೦. ಹಿತ್ತಾಳೆ ಕ್ಲಿಪ್ ೧೧. ಬಣ್ಣದ ಮರದ ಬುಗುರೆಗಳಾಗಿವೆ. ೧೨. ಸರಪಳಿಗಳು ೧೩. ಘಂಟೆಗಳು ಅಲ್ಲದೆ ಚಿನೀಯೂ ಒಂದಾಗಿದೆ.

**ಬಿಡಿಭಾಗಗಳ ಜೋಡಣೆ :** ಇಲ್ಲಿ ತೊಟ್ಟಿಲುಗಳ ಬಿಡಿಭಾಗಗಳನ್ನು ತೆಗೆದುಕೊಂಡು, ಮೊದಲೂ ನಾಲ್ಕು ಕಾಲುಗಳಲ್ಲಿ ಕೊರೆದ ಭಾಗಕ್ಕೆ ನಾಲ್ಕು ಎಕ್ಕೇಗಳನ್ನು ಸೇರಿಸಿ ಅದರಂತೆಯೇ ರೇಜಿ, ಕಮಾನು, ರೇಜಿ, ಗೊಂಬಿಎಳಗಿಗಳನ್ನು ಕಾಲುಗಳಲ್ಲಿ ಕೊರೆದ ತುತೂಗಳಿಗೆ ಸೇರಿಸಿ. ಕೆಳಭಾಗದಲ್ಲಿ ಮರದ ಹಲಗೆಯನ್ನು ಹಾಕಿ ಮೊಳೆಗಳಿಂದ ಹೊಡೆದು, ಆ ಮೇಲೆ ಹಿತ್ತಾಳೆಯ ಕ್ಲಿಪ್‌ನ್ನು ಕೊರೆದು ರಂದ್ರ ಕಾಣಿಸದ ಹಾಗೆ ಜೋಡಿಸುವುದು ಕೊನೆಯದಾಗಿ ಕಬ್ಬಿಣ ಪಟ್ಟಿಗಳನ್ನು ತೊಟ್ಟಿಲಿನ ಕೆಳಭಾಗದಲ್ಲಿ ಅಡ್ಡಹಾಕಿ ಸ್ಕ್ರೂಗಳನ್ನು ಬಿಗಿಯುವುದಾಗಿದೆ.

**ಪೂರ್ಣ ತಯಾರಿ ತೊಟ್ಟಿಲುಗಳು :** ಈ ತೊಟ್ಟಿಲಿಗೆ ಬಳಸುವಂತಹ ಮರದ ತುಂಡುಗಳನ್ನು ದೇವಿಕೊಪ್ಪ , ಕೀರುವತ್ತಿ, ಕಲಕೇರಿ, ಮುಂಡಗೋಡ ಮುಂತಾದ ಗ್ರಾಮಗಳಿಂದ ತಂದು ತಮಗೆ ಬೇಕಾದ ಅಳತೆಗೆ ಗರಗಸದಿಂದ ಕತ್ತರಿಸಿಕೊಂಡು ಸಂಸ್ಕರಿಸಿ ಆಮೇಲೆ ಬಾಚಿಯಿಂದ ದುಂಡಾಗಿ ಕೆತ್ತಿಕೊಂಡು ಮತ್ತೆ ಎರಡನೆಯ ಹಂತದಲ್ಲಿ ಮತ್ತೆ ಬಾಚಿಯಿಂದ ಕೆತ್ತುವ ಸಂದರ್ಭದಲ್ಲಿ ಗೋಪುರ ಬರುವ ಭಾಗವನ್ನು ಹಾಗೆ ಬಿಟ್ಟು ಕೆಳಭಾಗದಲ್ಲಿ ಹಾಗೆ ಬಿಟ್ಟು ಮಧ್ಯದಲ್ಲಿ ಅಳತೆಗೆ ತಕ್ಕಂತೆ ಕೆತ್ತುತ್ತಾರೆ. ನಂತರದ ಹಂತವಾದ 'ಗಾಡ'ಕ್ಕೆ ಕೆತ್ತಿದ ಮರದ ತುಂಡನ್ನು ಹಾಕಿ ಬಿಲ್ಲಿನ ಚರ್ಮದ ದಾರವನ್ನು ಮರದ ತುಂಡಿಗೆ ತೊಡಕಿಸಿದ ಮೇಲೆ ಬಿಲ್ಲನ್ನು ಹಿಂದೆ ಮುಂದೆ ಬಲಗೈಯಿಂದ ಸರಿಸುತ್ತಾ ಇರುವುದರಿಂದ ಮರದ ತುಂಡು ಚಕ್ರದ ಹಾಗೆ ತಿರುಗುತ್ತಾ ಇರುತ್ತದೆ. ಈ ಸಮಯದಲ್ಲಿ ಒರಟಾಗಿರುವ ಮರದ ತುಂಡಿಗೆ 'ತರುವಳಿ' ಯಿಂದ ಹಿಡಿದು ತಮಗೆ ಬೇಕಾದ ಹಾಗೆ ನುಣುಪಾಗಿಸಿಕೊಂಡು ಇಲ್ಲಿ ತರುಉಳಿಯನ್ನು ಎಡಗೈಯಿಂದ ಹಿಡಿದು ಮತ್ತು ಎರಡು ಕಾಲುಗಳಲ್ಲಿ ಈ ಉಳಿಯು ಅಲುಗಾಡದಂತೆ ಕಾಲುಗಳನ್ನು ಜೋರಾಗಿ ಹಿಡಿಯುವುದಕ್ಕೆ ಕಾರಣವಾಗಿದೆ. ನುಣುಪಾದ ಮರದ ತುಂಡಿನಲ್ಲಿ ಗೋಪುರದ ಹಾಗೆ ವಿವಿಧ ಮಾದರಿಗಳನ್ನು ರೂಪಿಸಲು ಚಪ್ಪಟೆಯಾಕಾರದ ಉಳಿಯಿಂದ ಹಿಡಿದು ರೂಪಿಸುತ್ತಾರೆ. ನೋಡುವುದಕ್ಕೆ ಕಂಬದ ಹಾಗೆ ಕಾಣುವ ಈ ಮರದ ತುಂಡಿಗೆ ಕಲಾವಿದರು ಹೇಳುವ ಹಾಗೆ **'ಎಕ್ಕೇ'** ಎಂದು ಕರೆಯುವರು. ನಂತರ ಇದಕ್ಕೆ ಸ್ಯಾಂಡ್ ಪೇಪರ್ ಹಿಡಿದು ಮತ್ತಷ್ಟು ನುಣುಪಾಗಿಸಿ ನೇರವಾಗಿ ಅರಗಿನ ಬಣ್ಣ ಲೇಪನ ಮಾಡುವುದಾಗಿದೆ. ಇಲ್ಲಿ ಅರಗಿನ ಬಣ್ಣ ತುಕುಡಿಗಳನ್ನು ಬೆಂಕಿಯಲ್ಲಿ ಕಾಯಿಸುತ್ತಾ ನೇರವಾಗಿ ಲೇಪನ ಮಾಡಲಾಗುತ್ತದೆ. ಹಾಗೆ ಮಿಶ್ರಣ ವರ್ಣಗಳು, ಸಹ ಆಗಿವೆ. ಬಣ್ಣಗಳ ಹೊಳಪಿಗೆ ಕೇದಿಗೆಯ ಎಲೆಯನ್ನು ಒಳ್ಳೇಎಣ್ಣೆಯಲ್ಲಿ ಅದ್ದಿ ಲೇಪನವಾದಂತಹ ವರ್ಣದ ಮೇಲೆ ಜೋರಾಗಿ ಹಿಡಿಯುತ್ತಾರೆ. ಇದರಿಂದ ವರ್ಣಗಳು ಹೊಳಪಿನೊಂದಿಗೆ ಸುಂದರವಾಗಿ ಕಾಣಿಸುತ್ತವೆ.

ಈ ತೊಟ್ಟಿಲಿನ ಎರಡನೆಯ ಭಾಗವಾಗಿ ಬರುವ ಪಟ್ಟಿಕೆಯು **'ರೇಜಿ '** ಎಂದು ಕರೆಯುವರು. ಇಲ್ಲಿ ಮರದ ಹಲಗೆಯನ್ನು ಮಶೀನ್ ಮೂಲಕ ಕತ್ತರಿಸಿಕೊಂಡು ಉಚ್ಚಗೊರಡು ಹೊಡೆದು ಇದು ನೋಡುವುದಕ್ಕೆ ದೇವಾಲಯದ ಮುಂಚಾಚಿದ ಬಾಗಿದ ಚಾವಣಿಯಂತೆ ಕಂಡುಬರುತ್ತದೆ. ಅಲ್ಲದೆ ಉಚ್ಚಗೊರಡು ಮೂಲಕ ಇಳಿಜಾರನ್ನು ನಿರ್ಮಿಸಿ ನಂತರ ಹುಣಸೆ ಸರಿಯನ್ನು ಲೇಪಿಸಿ ಒಣಗಿಸಿ ಮತ್ತೆ ಸಾಪಾದ ಕಲ್ಲಿನಿಂದ ನೀರು ಹಾಕಿ ಹಲವಾರು ಬಾರಿ ಉಜ್ಜಿ ನುಣುಪುಗೋಳಿಸುತ್ತಾರೆ. ಇದರ ಮೇಲೆ ಜಲವರ್ಣ ಅಂದರೆ 'ಪವಡಿ ಪುಡಿವರ್ಣ' ಇದನ್ನು ನೀರಿನಲ್ಲಿ ಮಿಶ್ರಣ ಮಾಡಿಕೊಂಡು ವಿವಿಧ ವಿನ್ಯಾಸದ ಚಿತ್ತಾರಗಳನ್ನು ಮೂಡಿಸುತ್ತಾರೆ. ಈ ಚಿತ್ತಾರಗಳು ಬೇಗನೆ ನಾಶವಾಗದ ಹಾಗೆ ಸರಿಯಾಗಿ ಅಂಟನ್ನು ಮಿಶ್ರಣಮಾಡಿರುತ್ತಾರೆ. ಹಾಗೆ ತಾಳಿಕೆಯ ದೃಷ್ಠಿಯಿಂದ ಇವರೆ ತಯಾರಿಸಿದ 'ರೋಗಂಧ' ಎಣ್ಣೆಯ ಲೇಪನವನ್ನು ಮಾಡುತ್ತಾರೆ.

ಮೂರನೆಯ ಪಟ್ಟಿಕೆಯಾಗಿ **'ಕಮಾನು'** ಎಂದು ಕರೆಯುವುದಾಗಿದೆ. ಇಲ್ಲಿಯೂ ಸಹ ರೇಜಿ ಪಟ್ಟಿಕೆಯ ಹಾಗೆ ಕೊರೆದು ಉಚ್ಚಗೊರಡು ಹೊಡೆದು ನಂತರ ಕಮಾನುಗಳನ್ನು ಗುರುತಿಸಿಕೊಂಡು ಹಲವಾರು ಉಳಿಗಳ ಸಹಾಯದಿಂದ ಕಮಾನು ನಿರ್ಮಿಸಿ ಮೇಲೆ ಹೇಳಿದ ಹಾಗೆ ಹುಣಸೆ ಸರಿಯನ್ನು ಲೇಪಿಸಿ ಒಣಗಿಸಿ ಕಲ್ಲಿನಿಂದ

ಕೆತ್ತಿ ತೊಳೆದು ನಂತರ ಜಲವರ್ಣದಿಂದ ಹೂಬಳ್ಳಿಯ ವಿನ್ಯಾಸ, ರೇಖೆಗಳು, ಚುಕ್ಕಿಗಳು, ಮುಂತಾದವುಗಳನ್ನು ಮೂಡಿಸಿ ನಂತರದಲ್ಲಿ ರೋಗಂಧ ಎಣ್ಣೆಯನ್ನು ಲೇಪಿಸಿಸುತ್ತಾರೆ.

ನಾಲ್ಕನೆಯದಾಗಿ **'ರೇಜ'** ಇದು ಮೇಲಿನ ರೇಜೆಗಿಂತ ಭಿನ್ನವಾಗಿ ನಿರ್ಮಾಣವಾಗಿರುತ್ತದೆ. ಇದು ಸಹ ತೆಳುವಾದ ಉದ್ದ ಪಟ್ಟಿಕೆಯಾಗಿದ್ದು ಎರಡು ಮಗ್ಗಲು ಇಳಿಜಾರು ರಚಿಸಿ ಇಲ್ಲಿ ಜಲವರ್ಣದಿಂದ ವಿವಿಧ ವಿನ್ಯಾಸಗಳನ್ನು ಮೂಡಿಸಿರುತ್ತಾರೆ.

ಈ ತೊಟ್ಟಿಲಿನ ಐದನೆಯ ಪಟ್ಟಿಕೆಯಾಗಿ **'ಗೊಂಬಿವಳಗಿ'** ಯಾಗಿದೆ. ಇದು ಕಮಾನು ಪಟ್ಟಿಕೆಯಂತೆ ಚಪ್ಪಟೆಯಾಗಿ ಉದ್ದವಾಗಿ ಕಂಡುಬಂದು ಇದನ್ನು ಸಹ ಮೇಲೆ ಹೇಳಿದ ರೀತಿಯಲ್ಲಿ ನಿರ್ಮಿಸಿರುತ್ತಾರೆ. ನಂತರದಲ್ಲಿ ಕಲಾವಿದ ಇಲ್ಲಿ ತೊಟ್ಟಿಲು ಬೇಕೆಂದವರ ಧರ್ಮಕ್ಕೆ ಅನುಸಾರವಾಗಿ ಚಿತ್ರಗಳನ್ನು ಮೂಡಿಸುತ್ತಾನೆ. ಇಲ್ಲಿ ಹೆಚ್ಚಾಗಿ ರಾಮಾಯಣ, ಮಹಾಭಾರತ, ಪುರಾಣ, ಶಿವಶರಣರು, ನಂದಿ, ಗಣೇಶ, ಈಶ್ವರ, ಪಾರ್ವತಿ, ಅಕ್ಕಮಹಾದೇವಿ, ಗೋಪಾಲ, ಕೃಷ್ಣ ಇನ್ನೂ ಮುಂತಾದ ದೃಶ್ಯಗಳನ್ನು ಜಲವರ್ಣದಲ್ಲಿ ಮೂಡಿಸಿರುವುದು ಕಂಡುಬರುತ್ತದೆ. ಇಲ್ಲಿಯೂ ಸಹ 'ರೋಗಂಧ' ಎಣ್ಣೆಯನ್ನು ಚಿತ್ರಗಳ ಮೇಲೆ ಲೇಪಿಸಲಾಗಿದೆ.

ಕೊನೆಯದಾಗಿ **'ರೇಜ'** ಇದು ಮೇಲಿನ ರೇಜೆಗಿಂತ ಭಿನ್ನವಾಗಿ ಕಂಡುಬರುತ್ತದೆ. ಇದು ತೊಟ್ಟಿಲನ್ನೇ ಹೊತ್ತುಕೊಂಡ ಹಾಗೆ ಕಾಣಿಸುತ್ತದೆ. ಇದರ ರಚನೆಯು ಸಹ ಮೇಲಿನಹಾಗೆ ಇದ್ದು ಜಲವರ್ಣದಿಂದ ರೇಖೆ, ಸಣ್ಣ ಸಣ್ಣ ಹೂಗಳು ಸರಪಳಿಯಾಕಾರ ರಚಿಸಿದ್ದಾರೆ. ಅಲ್ಲದೆ ಈ ಪಟ್ಟಿಕೆಯ ಕೆತ್ತನೆಯಲ್ಲಿ ಬದಲಾವಣೆ ಕಂಡಿದೆ. ಇಲ್ಲಿ ಪೀಠದ ಹಾಗೆ ಕೆತ್ತಿ ನಿರ್ಮಿಸಿದ್ದಾರೆ. ಇದರಿಂದ ಇಡೀ ತೊಟ್ಟಿಲು ಇದರ ಮೇಲೆ ನಿಂತಿರುವ ಹಾಗೆ ಕಾಣುತ್ತದೆ.

ತೊಟ್ಟಿಲಿಗೆ ಬೇಕಾದಂತಹ ಮುಖ್ಯವಾದ ಕಾಲು ಇದರ ರಚನೆಯು ಎಕ್ಕೇಯ ಹಾಗೆ ಇದ್ದು ನೇರವಾಗಿ ಅರಗಿನ ಬಣ್ಣ ಲೇಪನ ವಿರುತ್ತದೆ. ಆದರೆ ಯಾವುದೇ ರೀತಿಯ ಚಿತ್ತಾರಗಳನ್ನು ಮೂಡಿಸಿರುವದಿಲ್ಲ ಇಲ್ಲಿ ಚಪಟ್ಟೆ ಮತ್ತು ಮಿಶ್ರಣ ವರ್ಣಗಳನ್ನು ಅರಗಿನ ಬಣ್ಣದಲ್ಲಿ ಮೂಡಿರುತ್ತವೆ.

ಕಲಘಟಗಿಯಲ್ಲಿಯ ತೊಟ್ಟಿಲು, ಸೋಪಾ, ಟೀಪಾಯಿ, ತೂಗುಮಂಚ, ಇನ್ನೂ ಮುಂತಾದ ಪೀಠೋಪಕರಣಗಳನ್ನು ಮೊಳೆ ಹೊಡೆಯದೆ ಜೋಡಿಸುವುದು ವಿಶೇಷವಾಗಿದೆ. ನಾಲ್ಕು ಕಾಲುಗಳಿಗೆ 'ಕಿರುವಳಿ' ಯಿಂದ ರಂಧ್ರವನ್ನು ತೆಗೆದು ಈ ರಂಧ್ರವನ್ನು ಮೊದಲು ಅಳತೆಯಿಂದ ಗುರುತಿಸಿರುತ್ತಾರೆ. ಹಾಗೆ ಎರಡನೆಯದಾಗಿ ಎಕ್ಕೇಯ ಎರಡು ತುದಿಗಳನ್ನು ಸಹ ಚಪ್ಪಟೆ ಉಳಿಯಿಂದ ಅಳತೆಗೆ ತಕ್ಕಂತೆ ಕತ್ತರಿಸಿ ನಾಲ್ಕು ಕಾಲುಗಳ ರಂಧ್ರಗಳಿಗೆ ಸೇರಿಸುತ್ತಾರೆ. ನಂತರ ಮತ್ತೆ ನಾಲ್ಕು ಕಾಲುಗಳಲ್ಲಿ ರೇಜ ಕೂಡಿಸಲಿಕ್ಕೆ ಕೊರೆದು ಎರಡು ತುದಿಗಳನ್ನು ಕೆತ್ತಿ ಕೂಡಿಸಿರುತ್ತಾರೆ. ಮೂರನೆಯದಾಗಿ ಕಮಾನು ಇದನ್ನು ಸಹ ಎರಡು ತುದಿಗಳನ್ನು ಮೇಲೆ ಹೇಳಿದ ಹಾಗೆ ಮಾಡಿ ಕೂಡಿಸಿರುತ್ತಾರೆ. ನಾಲ್ಕನೇಯದಾಗಿ ಮತ್ತೆ ರೇಜ ಇದು ಸಹ ಮೇಲಿನ ಮಾದರಿಯಲ್ಲಿಯ ಕೂಡಿಸಲಾಗಿದೆ. ಐದನೆಯದಾಗಿ ಗೊಂಬಿವಳಗಿ ಇದರ ತುದಿಗಳನ್ನು ಕತ್ತರಿಸಿ ಸೇರಿಸಲಾಗುತ್ತದೆ. ಕೊನೆಯದಾಗಿ ಮತ್ತೆ ರೇಜ ಭಾಗ ಇದು ಸಹ ಮೇಲಿನ ಹಾಗೆ ಕತ್ತರಿಸಿ ಕೂಡಿಸಲಾಗಿದೆ.

ನಂತರ ರಂದ್ರಗಳಲ್ಲಿ ಬಿದಿರಿನ ಚಕ್ಕೆಗಳನ್ನು ಹೊಡೆದು ಗಟ್ಟಿಗೊಳಿಸುತ್ತಾರೆ. ಮತ್ತೆ ಈ ರಂದ್ರಗಳು ಕಾಣದಹಾಗೆ ಹಿತ್ತಾಳೆಯ ಕ್ಲಿಪ್‌ಗಳನ್ನು ಕೂಡಿಸಿರುವುದನ್ನು ಕಾಣಬಹುದಾಗಿದೆ. ಕೊನೆಯ ಹಂತದಲ್ಲಿ ತೊಟ್ಟಿಲಿನ ಕೆಳಭಾಗದಲ್ಲಿ ಮರದ ಹಲಗೆಗಳನ್ನು ಕೂಡಿಸಿ ಮೊಳೆ ಹೊಡೆದು ಮತ್ತೆ ಅದರ ಕೆಳಗೆ ಕಬ್ಬಿಣದ ಎರಡು ಪಟ್ಟಿಕೆಯನ್ನು ಅಡ್ಡಹಾಕಿ ಇದರ ಎರಡು ತುದಿಗಳಲ್ಲಿ ಕಬ್ಬಿಣದ ಬಳೆಗಳನ್ನು ಕೂಡಿಸಿರುತ್ತಾರೆ. ಈ ಪಟ್ಟಿಕೆಗೆ ಸ್ಕ್ರೂಗಳನ್ನು ಬಿಗಿದು ಗಟ್ಟಿಗೊಳಿಸುವುದಾಗಿದೆ. ಹಾಗೆ ಈ ಬಳೆಗಳನ್ನು ಹಗ್ಗ ಕಟ್ಟುವುದಕ್ಕೆ ಕಬ್ಬಿಣದ ಸರಪಳಿ, ವಾಯರ್, ಹಗ್ಗ ಮುಂತಾದವನ್ನು ಕಟ್ಟುವುದಕ್ಕೆ ನಿರ್ಮಿಸಲಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ತೊಟ್ಟಿಲು, ಕುರ್ಚಿ, ಸೋಪಾ, ಟೀಪಾಯಿ, ತೂಗುಮಂಚ, ಸ್ಟ್ಯಾಂಡಿಂಗ್ ತೊಟ್ಟಿಲು ಇನ್ನೂ ಮುಂತಾದವುಗಳಿಗೆ ದುಂಡಾಕಾರವಾಗಿ ರಚನೆಯಾದಂತಹ, ಕಾಲುಗಳು, ಪೋಲ್ಸ್‌ಗಳು,

ಗುಂಡು, ಬುಗುರೆ, ಇನ್ನೂ ಮುಂತಾದವುಗಳಿಗೆ ಮಾತ್ರ ಅರಗಿನ ಬಣ್ಣ ಬಳಸಲಾಗಿದೆ. ಚಪ್ಪಟೆಯಾಕಾರದಲ್ಲಿ ಬರುವ ರೇಜೆ, ಕಮಾನು, ಗೊಂಬಿಎಳಗಿ ಇನ್ನೂ ಮುಂತಾದವುಗಳನ್ನು ಜಲವರ್ಣದಿಂದ ಲೇಪನವಾಗಿರುತ್ತವೆ. ಜಲವರ್ಣದ ಚಿತ್ರಗಳಿಗೆ ಮೇಲು ಲೇಪನವಾಗಿ 'ರೋಗಂಧ' ಎಣ್ಣೆಯನ್ನು ಲೇಪಿಸಿರುತಾರೆ. ಈ ಲೇಪನದಿಂದ ಚಿತ್ರಗಳು ನೂರಾರು ವರ್ಷಗಳ ಬಾಳಿಕೆ ಬರುತ್ತವೆ. ಎಂದು ಹೇಳುತ್ತಾರೆ.

ಈ ರೀತಿಯಲ್ಲಿ ಕಲಘಟಗಿಯ ತೊಟ್ಟಿಲುಗಳು, ಪೀಠೋಪಕರಣಗಳು ಸಮಕಾಲೀನ ಸಂದರ್ಭದ ಜನರ ಬೇಡಿಕೆಯ ಹಿನ್ನೆಲೆಯಲ್ಲಿ ನಿರ್ಮಾಣವಾಗುತ್ತವೆ.

*****

## ಕಲಘಟಗಿಯ ಕಲಾವಿದರು



೧. ಸಿದ್ದಪ್ಪ ತಮ್ಮಣ್ಣ ಸಾವುಕಾರ



ಬಾಲಾಜಿ ಸಾವುಕಾರ



೨. ಗಂಗಾಧರ ಮತ್ತು ಸಹೋದರರು



೩. ಅಶೋಕ ಬಡಿಗೇರ



೪. ತಿಪ್ಪಣ್ಣ ಬಡಿಗೇರ



೫. ಮಲ್ಲೇಶಪ್ಪ ಬಡಿಗೇರ

೧. ಪೀರಾಜೆ ತಮ್ಮಣ್ಣ ಸಾವುಕಾರ





೨. ಶ್ರೀಪಾದ ಬಡಿಗೇರ





೩. ಸತೀಶ್ ಬಡಿಗೇರ





೪. ಸಾವುಕಾರ ಕುಟುಂಬ



೧೦. ಶೋಭಾ ಸಾವುಕಾರ ಕುಟುಂಬ



೧೧. ಲಕ್ಷ್ಮಣ ಸಾವುಕಾರ ಕುಟುಂಬ



೧೨. ರಾಜಶೇಖರ ಬಡಿಗೇರ



೧೩. ಜಗದೀಶ ಬಡಿಗೇರ







ಕಲಾವಿದರ ಸಂಗ್ರಹದಲ್ಲಿರುವ
ಹಳೆಯ ಶಿಲ್ಪಗಳು ಮತ್ತು
ತೊಟ್ಟಿಲು ಬಿಡಿಭಾಗಗಳು





ಪ್ರಾಗೈತಿಹಾಸಿಕ ಮಾನವ ತನ್ನ ಪರಿಮಿತಿಯೊಳಗೆ ಸ್ವತಂತ್ರ, ಆದರೆ ತನ್ನ ಸುತ್ತಲೂ ಯಾವುದೇ ನಿಖರ ಚೌಕಟ್ಟನ್ನು ಹಾಕಿಕೊಳ್ಳದೇ ಜೀವಿಸಿದ್ದ. ಆತ ಸೃಷ್ಟಿಸಿದ ಕಲೆಗೂ ಒಂದು ಪರಿಮಿತಿ ಇದೆ. ಆದರೆ ಆತನ ಕೃತಿಗಳು 'ಚೌಕಟ್ಟು' ಎಂಬ ಮಿತಿಯನ್ನು ಅನುಸರಿಸದೆ ಕಲ್ಪನಾತೀತವಾಗಿ ಬೆಳೆದ ಕ್ರಿಯೆ ಅತ್ತ-ಇತ್ತ ಸಿಕ್ಕಷ್ಟು ಜಾಗದಲ್ಲಿ ಬೇರುಬಿಡುತ್ತಾ ಚಾಲನೆಗೆ ಒಳಗಾಗುತ್ತಾ ಈ ಕ್ರಿಯೆ ತನಗರಿವಿಲ್ಲದೆ, ಅವಕಾಶ ಯೋಜನೆಯೊಂದರಲ್ಲಿ ಆಕಾರ ಪಡೆಯುತ್ತದೆ.[೧] ಈ ಹಿನ್ನಲೆಯಲ್ಲಿ ಬೆಳೆದ ಕಲೆ ಇಂದು ಕಲಾವಿದರಿಗೆ ಮಾದರಿಯಾಗಿ ನಿಂತಿವೆ.

ಸಾಮಾನ್ಯವಾಗಿ ಪ್ರಾಗಿತಿಹಾಸಕಾಲದಿಂದಲೂ ವಿಶೇಷವಾಗಿ ಉತ್ತರ ಭಾರತದ ಹರಪ್ಪಾ ನಾಗರಿಕತೆ ಹಾಗೂ ದಕ್ಷಿಣ ಭಾರತದ ಶಿಲಾ-ತಾಮ್ರಯುಗ ಸಂಸ್ಕೃತಿ ಹಂತದಿಂದಲೂ ಸಾಮಾನ್ಯ ವರ್ಗದವರ ಕಲಾಕೃತಿಗಳು ಹೆಚ್ಚಾಗಿ ಮಣ್ಣಿನ ಗೊಂಬೆಗಳು ಇವುಗಳಲ್ಲಿ ಮಾನವ ಮತ್ತು ಪ್ರಾಣಿಗಳ ಆಕೃತಿಗಳೇ ಹೆಚ್ಚು, ಇದರಲ್ಲಿ ಟೊಳ್ಳು ಅಥವಾ ಗಟ್ಟಿ ಗೊಂಬೆಗಳು ಸಂಗನಕಲ್ಲು, ವಟಗಲ್, ಪಕ್ಕಿಹಾಳ, ನಿಲೂಗಲ್, ಮೊದಲಾದ ಶಿಲಾ-ತಾಮ್ರಯುಗದ ಹಂತದಲ್ಲಿ ಕಂಡುಬಂದಿವೆ.[೨] ಈ ಅವಧಿಯಲ್ಲಿಯೇ 'ಇನಾಮ್‌ಗಾಂವ್' ಒಂದು ಮನೆಯಲ್ಲಿ ಮೃತ್ಪಾತ್ರೆಗಳನ್ನು ಸುಡುವ ಬಟ್ಟಿಯು ಇದ್ದಿತ್ತು ಇನ್ನೊಂದು ಮನೆಯಲ್ಲಿ ಮಣ್ಣಿನ ಕರಂಡಕ ವಿದ್ದು ಅದರಲ್ಲಿ ಮಣ್ಣಿನ ಸ್ತ್ರೀ ಮೂರ್ತಿ ಇದ್ದಿತು ಇದು ಪೂಜಾಕರಂಡಕವೆಂದು ಕಾಣುತ್ತದೆ.[೩] ಹಾಗೆ ಹಿರೇಬೆನಕಲ್ಲಿನ ' ದುರ್ಗದ ದಡಿ' ಯ ಬೆಟ್ಟದ ಮಧ್ಯ ಅಂತರದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಜನರ ಬೂದಿ ಮಿಶ್ರಿತ ಮಣ್ಣಿನ ಕೆಂಪು, ಕಪ್ಪು ದ್ವಿವರ್ಣದ ಮೃತ್‌ಪಾತ್ರೆಗಳು ಸುಟ್ಟ ಮಣ್ಣಿನ ಮಣಿಗಳು ಬಳೆಗಳು ಇನ್ನೂ ಮುಂತಾದ ಇತರ ಅವಶೇಷಗಳಿವೆ.[೪] ಇಂದೂ ಸ್ತ್ರೀಯರು ಬಳಸುವ ಬಳೆಗಳು ಮಣಿ ಮುಂತಾದ ಆಭರಣಗಳು ಹಿಂದಿನ ಮಾದರಿಯನ್ನೇ ಅವಲಂಭಿಸಿವೆ ಆದರೆ ಕಾಲಕ್ರಮೇಣ ಮಾಧ್ಯಮದಲ್ಲಿ ಬದಲಾವಣೆ ಪಡೆದಿದೆ.

ಕೃಷ್ಣಾ ಮತ್ತು ತುಂಗಭದ್ರಾ ನದಿಬಯಲಿನ ಮಸ್ಕಿ ಸಂಸ್ಕೃತಿಯ ಬೂದುವರ್ಣ ಪಾತ್ರೆಗಳು ಬ್ರಹ್ಮಗಿರಿ, ಮಸ್ಕಿ, ಪಕ್ಕಿಹಾಳ, ಕೊಡೆಕಲ್ಲು, ತೇರೆದಾಳ ಉತ್ಖನದಲ್ಲಿ ತೋರಿದೆ. ವೈಜ್ಞಾನಿಕ ಪರೀಕ್ಷೆಯ ಪ್ರಕಾರ ಕ್ರಿ.ಪೂ.೨೨೦೦ ರಿಂದ ೧೫೦೦ ಪ್ರಥಮ ಬಾರಿಗೆ ಬ್ರಹ್ಮಗಿರಿಯಲ್ಲಿ ಅತ್ಯಂತ ಪ್ರಾಚೀನ ಪಾತ್ರೆಗಳು ದೊರೆತವು.[೫] ಜೋರ್ವೆ ಸಂಸ್ಕೃತಿಯ ಭಿನ್ನವಾದ ಕೆಂಪು ಬಣ್ಣದ ಮಡಿಕೆ ಚೂರುಗಳು ಕಂಡುಬಂದಿವೆ.

ಈ ರೀತಿಯಾಗಿ ಮೃತ್ಪಾತ್ರೆಗಳನ್ನು ಅಲಂಕರಿಸುವ ಪದ್ಧತಿ ಹರಪ್ಪಾ ನಾಗರಿಕತೆ (ಕ್ರಿ.ಪೂ ಸು. ೨೫೦೦-೧೭೫೦) ಸೇರಿದಂತೆ ಇದಕ್ಕೂ ಪೂರ್ವದಲ್ಲಿ ಬಲೂಚಿಸ್ತಾನ, ಅಫ್ಘಾನಿಸ್ಥಾನ ಪ್ರದೇಶದ ಕಂಚಿನ ಯುಗದ

---

೦೧. ನೇಮಿರಾಜ ಶೆಟ್ಟಿ : ಪೋಸ್ಟ್ ಮಾಡರ್ನಿಸಂ ಪು ೬ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೫.
೦೨. ಪ್ರೊ. ಜಿ. ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೩೪೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೦೩. -ಅದೇ- ಪು. ೨೩೨
೦೪. -ಅದೇ- ಪು. ೨೫೦
೦೫. -ಅದೇ- ಪು. ೨೭೧

ಸಂಸ್ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತದೆ.[೬] ಈ ರೀತಿಯ ಅಲಂಕರಿಸುವ ಪದ್ಧತಿಯೂ ಕಲಘಟಗಿಯ ಪ್ರದೇಶದ ಮಡಿಕೆಗಳಲ್ಲಿಯೂ ಸಹ ಕಾಣಬಹುದು ಹಾಗೆ ಹರಪ್ಪಾ ಸಂಸ್ಕೃತಿಯ ( ಸು. ಕ್ರಿ. ಪೂ ೨೩೦೦-೧೭೫೦) ಇಟ್ಟಿಗೆಯ ಕಟ್ಟಡಗಳಿಗೆ ಕಲಸು ಮಣ್ಣನ್ನು ಉಪಯೋಗಿಸಲಾಗಿದೆ. ಈ ಕ್ರಮಕ್ಕೆ ಇಂದು 'ಇಂಗ್ಲೀಷ ಬಾಂಡ್' ಎಂದು ಹೆಸರಿಸಲಾಗಿದೆ.[೭] ಪ್ರಾಚೀನ ಈಜಿಪ್ತಿನ ಸಮಾಧಿಗಳಲ್ಲಿ ದೊರಕಿರುವ ಬೊಂಬೆಗಳೇ ಅತೀ ಪ್ರಾಚೀನ ಸಿಂಧೂ ಕಣಿವೆಯ ಹರಪ್ಪಾದಲ್ಲಿ ದೊರಕಿರುವ ಬೊಂಬೆಗಳು ಕೂಡಾ ಹೆಚ್ಚು ಕಡಿಮೆ ಇಷ್ಟೇ ಪ್ರಾಚೀನವು ಈ ಬೊಂಬೆಗಳಿಗೆ ಜೇಡಿಮಣ್ಣನ್ನು ಉಪಯೋಗಿಸುತ್ತಿದ್ದರು ನಂತರ ಸುಣ್ಣ ಲೇಪಿಸಿರುವುದು ಕಂಡುಬರುತ್ತದೆ. ಹಾಗೇ ಗಿಲಿಕೆಗಳು ಪೀಪಿಗಳು, ಹಕ್ಕಿಗಳು, ಬಂಡಿಗಳ ಆಕಾರ ಆಟಕೆಗಳು ದೊರೆತಿವೆ.[೮]

೭ನೆಯ ಶತಮಾನದಲ್ಲಿ ಅರಬ್ಬರು ಸಹ ಜೇಡಿಮಣ್ಣಿನಿಂದ ಗೊಂಬೆಗಳನ್ನು ತಯಾರಿಸುತ್ತಿದ್ದರು.[೯] ಇವುಗಳಲ್ಲಿದೆ ಸಿಂಧೂ ನಾಗರಿಕತೆಯ ನಗರದ ಗೋಡೆಗಳನ್ನು ಮಣ್ಣಿನಿಂದ ರಚನೆಯಾಗಿದ್ದು ಮೆಹೆಂಜೋದಾರೋ ರಸ್ತೆಯನ್ನು ಇಟ್ಟಿಗೆ ಮತ್ತು ಮಡಿಕೆ ಚೂರುಗಳಿಂದ ಭದ್ರಪಡಿಸಲಾಗಿದೆ. ಈ ಇಟ್ಟಿಗೆಗಳನ್ನು ನದಿಗಳ ಆವಿ ಮಣ್ಣಿನಿಂದ ತಯಾರಿಸುತ್ತಿದ್ದರು.[೧೦] ಈ ಇಟ್ಟಿಗೆ ಮತ್ತು ಮಣ್ಣಿನ ಬಳಕೆಯು ಇಂದು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತವೆ. ಇದಲ್ಲದೇ ಕಲಘಟಗಿಯಲ್ಲಿ ಇಟ್ಟಿಗೆ ಸುಡುವ ಬಟ್ಟಿಯು ಇದ್ದೂ ಇಲ್ಲಿನ ಪ್ರತಿಯೊಂದು ಮನೆಯುಸಹ ಇಟ್ಟಿಗೆ ಹಂಚುಗಳಿಂದ ನಿರ್ಮಾಣವಾಗಿವೆ.

ಮೆಸಪೊಟೋಮಿಯಾದ ಯೂಫ್ರಿಟೀಸ್ ತೀರದಲ್ಲಿ ಆವೆ ಮಣ್ಣಿನ ಚಿತ್ರಗಳನ್ನು ರಚಿಸಿ ಸುಟ್ಟು ಅವು ದೀರ್ಘಕಾಲ ಬಾಳುವಂತೆ ಮಾಡಿದರು ಈ ಕಲಾಕೃತಿಗಳು ಕ್ರಿಪೂ. ೨೫೦೦ ವರ್ಷ ಹಿಂದಿನ ಆ ನಾಗರಿಕತೆಯ ಶ್ರೇಷ್ಠಸಾಧನೆ.[೧೧] ಇಂತಹ ಕಲಾಕೃತಿಗಳು ಇಂದು 'ಟೆರಾಕೊಟ' ಎಂದು ಹೆಸರು ಪಡೆದಿವೆ. ಹಾಗೇ ಜಪಾನ ದೇಶದಲ್ಲಿಯೂ ಸಹ ಜೇಡಿಮಣ್ಣಿನ ಕಲಾಕೃತಿಗಳನ್ನು ಕಾಣಬಹುದು.[೧೨] ಗೃಹಪಯೋಗಿ ಸಾಧನಗಳಾಗಿ ಮಣ್ಣಿನ ಕೊಡಗಳು, ದಾಸ್ತಾನಿಡುವ ದಪ್ಪದ ಹೂಜಿಗಳು, ಬೋಗಾಣಿಗಳು, ಲೋಟಗಳು, ವಿವಿಧ ಬಗೆಯ ಮುಚ್ಚಳಗಳು ಆ ಕಾಲದಲ್ಲಿ ಬಳಕೆಯಲ್ಲಿದ್ದವು ಸಾಮಾನ್ಯವಾಗಿ ಮಡಕೆಯ ಶೈಲಿ 'ರೋಮನ್' ಪ್ರಭಾವದಿಂದ ಇಲ್ಲೂ ಕಾಣಿಸಿಕೊಂಡಿರಬೇಕು ಇನ್ನೊಂದು ವಿಶಿಷ್ಟ ಬಗೆಯ ಪಾತ್ರೆ ಚಿಮುಕುದಾನಿ ಇದು ವಿದೇಶಿ ಮೂಲದ ಕುಂಬಾರಿಕೆ ಎನ್ನುವ ಅಭಿಪ್ರಾಯವಿದ್ದರೂ ಈಗ ಈ ಶೈಲಿಯನ್ನು ದೇಶಿಯೆಂದೆ ಪರಿಗಣಿಸಲಾಗಿದೆ.[೧೩] ವಡಗಾಂವ, ಮಾಧವಪುರದಲ್ಲಿ ಮಣ್ಣಿನ ಪಗಡೆಕಾಯಿ ದೊರೆತ್ತಿವೆ. ಪಗಡೆಯಾಟವು ಋಗ್ವೇದ ಕಾಲದಲ್ಲಿ ಇತ್ತು ಎಂದು ತಿಳಿದುಬರುತ್ತದೆ.[೧೪] ಇಲ್ಲಿ ಮಣ್ಣಿನ ಬಳಕೆಯು ಋಗ್ವೇದ ಕಾಲದಲ್ಲಿಯೂ ಸಹ ಬಳಕೆಯಲ್ಲಿತ್ತು ಎಂದು ತಿಳಿದುಬರುತ್ತದೆ. ೧೯೬೫ರಲ್ಲಿ ಬೆಂಗಳೂರು ಬಳಿಯ "ಹಿಂದೂಸ್ತಾನ ಏರೋ ನಾಟಿಕ್ಸ್ ಲಿಮಿಟೆಡ್"ಗಾಗಿ ಓಡು ದಾರಿಯನ್ನು ನಿರ್ಮಿಸುತ್ತಿರುವಾಗ ಕಪ್ಪು, ಕೆಂಪು ಕಾಓಲಿನ್ ಮಡಿಕೆಗಳು ದೊರೆತಿವೆ.[೧೫]

ಹೆಸರಾಂತ ಪುರಾತತ್ವ ಅವಶೇಷೆಗಳ ಸಂಶೋಧಕರಾದ ಡಾ.ಅ.ಸುಂದರ ಅವರು "Pre Historic Art In karanataka"ಎಂಬ ಲೇಖನದಲ್ಲಿ ಪ್ರಾಗಿತಿಹಾಸಕಾಲದ ಮಣ್ಣಿನ ಸುಡಾವೆ ಗೊಂಬೆಗಳ ಕುರಿತು ವಿವರಣೆ ನೀಡಿದ್ದಾರೆ ಹಾಗೆ ಕುಪ್ಪಗಲ್ ಪ್ರದೇಶದಲ್ಲಿ ಜೇಡಿಮಣ್ಣಿನ ಶಿಲ್ಪಗಳು ದೊರೆಯುತ್ತವೆಂದು ಮೊದಲು ತಿಳಿಸಿದವನು 'ರಾಬರ್ಟ್ ಭ್ರೂಸ್ ಪೂಟ್' ಬ್ರಹ್ಮಗಿರಿ, ಪಕ್ಕಿಹಾಳ, ಸಂಗನಕಲ್ಲು, ತೆಕ್ಕಲಕೊಟೆಗಳಲ್ಲಿ ಜೇಡಿಮಣ್ಣಿನ

೦೬. ಪ್ರೊ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೨೪೭ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭.
೦೭. ಪ್ರೊ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೩೨೭ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭.
೦೮. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೫ ಕಲೆಸಾಹಿತ್ಯ ಪು. ೪೨೮ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೩
೦೯. -ಅದೇ- ಪು. ೮೧
೧೦. ಪ್ರೊ. ಹೆಚ್ ರಾಮಲಿಂಗಪ್ಪ. ಭಾರತದ ಇತಿಹಾಸ -೧ ಪು. ೪೭ ಕಲಾ ಪ್ರಕಾಶನ್ ಬೆಂಗಳೂರು ೨೦೦೪
೧೧. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೫ ಕಲೆ ಸಾಹಿತ್ಯ ಪು. ೧೬ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೩
೧೨. -ಅದೇ- ಪು. ೨೫೦
೧೩. ಪ್ರೊ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೩೦೯ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೧೪. -ಅದೇ- ಪು. ೩೧೦
೧೫. -ಅದೇ- ಪು. ೩೨೦

ಶಿಲ್ಪಗಳು ಕಂಡುಬಂದಿವೆ.[೧೬] ಇವುಗಳಲ್ಲದೆ ಕೊಡಗಿನಲ್ಲಿ ಬೃಹತ್ ಶಿಲಾಯುಗದ ಎರಡು ಮಣ್ಣಿನ ಹಸುಗಳು ಕಂಡುಬಂದಿವೆ. ಇವುಗಳಲ್ಲಿ ಒಂದರ ಕಣ್ಣುಗಳನ್ನು ವೃತ್ತಾಕಾರವಾಗಿ ಕೊರೆದಿದೆ. ಕಿವಿಗಳು ಮೇಲೆತ್ತಿದಂತೆ ಕಾಣುತ್ತವೆ. ಬಾಯಿಯನ್ನು ದಂಡಾಕಾರವಾಗಿ ಕೊರೆದು ಕೊನೆಗಳನ್ನು ಗುಂಡಾದ ಆಕಾರದಲ್ಲಿ ಹೊಂದಿಸಲಾಗಿದೆ. ತಲೆಯ ಎಡ ಮತ್ತು ಬಲಗಳಲ್ಲಿ ಮಧ್ಯಮ ಪ್ರಮಾಣದ ಕೊಂಬುಗಳಿವೆ. ಮೂಗಿನ ರೂಪವನ್ನು ಅಚ್ಚುಕಟ್ಟಾಗಿ ರೂಪಿಸಲಾಗಿದೆ. ಮತ್ತೊಂದು ಶಿಲ್ಪವು ಮೇಲ್ಕಂಡಂತೆ ಇದ್ದು ಮೂಗು ಬಾಯಿ ಅಸ್ಪಷ್ಟವಾಗಿದೆ. ಕಿವಿಗಳು ಕಾಣೆಯಾಗಿವೆ ಎಡಕೊಂಬು ಮುರಿದಿದೆ.[೧೭]

ಈ ಸುಡಾವೆ ಮಣ್ಣಿನ ಕೃತಿಗಳಲ್ಲಿ ಮಾತೃದೇವತೆಯ ಗೊಂಬೆ ಮತ್ತು ಆಟದ ಸಾಮಗ್ರಿಗಳು ಬಹು ಅನನ್ಯವಾಗಿವೆ. ಆಟಕ್ಕಾಗಿ ಮಾಡಿದ ಎತ್ತು, ಕೋಣ, ಶಿಲ್ಪಗಳಿಗೆ ಗಾಲಿಯಿದ್ದು ಕತ್ತು ತೂಗಾಡುವಂತೆ ವ್ಯವಸ್ಥೆ ಮಾಡಿದ್ದು ಅವುಗಳಿಗೆ ಜೀವಕಳೆ ಇದೆ.[೧೮] ಇದೇ ರೀತಿಯಲ್ಲಿಯ ನಮ್ಮ ಉತ್ತರ ಕನ್ನಡ ಜಿಲ್ಲೆಗಳಲ್ಲಿ 'ಮಜಾಯಿಸಿಕೆ' ಎಂಬ ಹೆಸರಿನ ಮಣ್ಣಿನ ಕೀಲುಗೊಂಬೆಗಳಿದ್ದವು ಇವುಗಳನ್ನು ಮಣ್ಣಿನಿಂದ ಬಿಡಿ ಬಿಡಿಯಾಗಿ ಮಾಡಿ ದಾರದ ಸಹಾಯದಿಂದ ಇವುಗಳಿಗೆ ಕೀಲುಜೋಡಿಸಿ ಕೈ, ಕಾಲು, ಮುಖ ಅಲುಗಾಡುವಂತೆ ಮಾಡಿರುತ್ತಾರೆ.[೧೯] ಹೀಗೆ ಸಿಂಧೂ ನಾಗರಿಕತೆಯ ಜನರು ಆಭರಣಗಳನ್ನು ಜೇಡಿಮಣ್ಣಿನಲ್ಲಿಯೇ ತಯಾರಿಸುತ್ತಿದ್ದರು ಮತ್ತು ಚರಕದ ಬಿಲ್ಲೆಗಳು, ಗಾಡಿ, ಕುರ್ಚಿ, ಇತ್ಯಾದಿಗಳನ್ನು ತಯಾರುಮಾಡಿ ಸುಟ್ಟು ಬಳಸುತ್ತಿದ್ದರು.[೨೦] ಇವರ ಮುದ್ರಿಕೆಗಳು ೫೦೦೦ಕ್ಕೂ ಹೆಚ್ಚು ಬೆಳಕಿಗೆ ಬಂದಿವೆ. ಇದರಲ್ಲಿ ಬಹುಸಂಖ್ಯೆ 'ಟೆರಾಕೊಟ್' ಜೇಡಿಮಣ್ಣಿನಿಂದ ಮಾಡಲಾಗಿದೆ. [೨೧] ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಕಲೆಯು ಮುಂದೆವರಿದು ಕುಶಲಕಲೆಯು ಅನುಭವದಿಂದ ವಿಕಾಸಗೊಳ್ಳುತ್ತಲೆ ಇರುವ ಕಲೆ ಕೇವಲ ಒಂದು ಕೊರಡಿನಂತೆ ಕಾಣುವ ಮರಮುದ್ದೆಯಂತೆ ಕಾಣುವ ಜೇಡಿಮಣ್ಣಿನಿಂದ ಕಣ್ಮನ ಸೆಳೆಯುವ ಸೊಬಗಿನ ಕುಶಲಕಲಾ ವಸ್ತುಗಳ ರಚನೆ ನಿಜಕ್ಕೂ ಆಯಾ ಪ್ರದೇಶದ ದೇಶದ ಹೆಮ್ಮೆಯ ಸೃಷ್ಠಿಗಳೇ ಸರಿ[೨೨] ಇಂಥಾ ಕುಶಲ ಕಲೆಯಲ್ಲಿ ಕಲಘಟಗಿಯೂ ಹೆಚ್ಚಿನ ಮಹತ್ವವನ್ನು ಪಡೆದಿದೆ.

ನಮ್ಮ ಜನಪದರಿಗೆ ಹೊನ್ನಿಗಿಂತಲೂ ಮಣ್ಣೇ ಮಿಗಿಲು, ಈ ಮಾನವ ಕಾಯ ಮಣ್ಣಿನಿಂದಲೇ ಬಂದುದು, ಮಣ್ಣಿನಲ್ಲೇ ಬದುಕುತ್ತದೆ. ಕೊನೆಗೆ ಮಣ್ಣಿನಲ್ಲೇ ಒಂದಾಗುತ್ತದೆ ಎಂಬುದು ಜನಪದರ ಉಕ್ತಿಯಾಗಿದೆ. ಹೀಗಾಗಿ ಹಳ್ಳಿಯ ರೈತರು ವರ್ಷದಲ್ಲಿ ವಿವಿಧ ರೀತಿಯ ಮಣ್ಣು ಪೂಜೆಗಳನ್ನು ಆಚರಿಸುವರು ಜೇಷ್ಠ ಅಮಾಸ್ಯೆಯಂದು ಅರಳೆಲೆಬಸವ, ಆಷಾಡದಲ್ಲಿ ಗುಳ್ಳವ್ವ , ಶ್ರಾವಣಮಾಸದಲ್ಲಿ ಹುತ್ತಪ್ಪ ಅಥವಾ ನಾಗರ, ಬಾದ್ರಪದಲ್ಲಿ ಗಣಪತಿ, ಬಾದ್ರಪದ ಶುದ್ಧ ಅಷ್ಠಮಿಯಲ್ಲಿ ಜೋಕುಮಾರ, ಬಾದ್ರಪದ ಅಶ್ವಿಜಕಾಲದಲ್ಲಿ ಗುರ್ಜಿ, ಮುಂತಾದ ಮಣ್ಣಿನ ಶಿಲ್ಪಗಳನ್ನು ಪೂಜಿಸುತ್ತಾರೆ.[೨೩] ಇಂಥಹ ಮಣ್ಣಿನ ಮೂರ್ತಿಗಳ ಹಿಂದಿನ ಉದ್ದೇಶಗಳು ಭಿನ್ನವಾಗಿದ್ದವು ಸಾಮಾನ್ಯವಾಗಿ ಆಚರಣೆ ಸಂಬಂಧವಾಗಿ ರಚನೆಗೊಳ್ಳುತ್ತಿದ್ದವು. ನಿರ್ದಿಷ್ಟ ಧಾರ್ಮಿಕ ಕ್ರಿಯೆಯ ನಂತರ ಅವುಗಳನ್ನು ವಿಸರ್ಜಿಸಲಾಗುತ್ತಿತ್ತು ಈಗಲೂ ಹಬ್ಬಗಳ ಸಂದರ್ಭದಲ್ಲಿ ಮಣ್ಣಿನ ಮೂರ್ತಿಗಳನ್ನು ಮಾಡಿ ಪೂಜಿಸಿದ ನಂತರ ವಿಸರ್ಜಿಸುತ್ತಾರೆ.[೨೪] ಈ ಪದ್ಧತಿಯೂ ಗಣಪತಿಯ ಹಬ್ಬದಲ್ಲಿ ಮುಖ್ಯವಾಗಿ ಕಾಣಬರುತ್ತದೆ.

---

೧೬. ಪಿ. ಆರ್ ತಿಪ್ಪೇಸ್ವಾಮಿ : (ಪ್ರ. ಸಂ) ಶಿಲ್ಪಕಲಾ ಪ್ರಪಂಚ ಪು. ೧೦೦ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೪
೧೭. -ಅದೇ- ಪು. ೧೦೩
೧೮. ವಿಜಯಾರಾವ್ : ಶಿಲ್ಪಕಲೆ ಪು. ೧೫ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೫
೧೯. ಡಾ. ಎಸ್. ಸಿ ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪು. ೧೯೨ ಪಿಹೆಚ್.ಡಿ ಮಹಾಪ್ರಬಂಧ ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩
೨೦. ಪ್ರೋ. ಹೆಚ್ ರಾಮಲಿಂಗಪ್ಪ. ಭಾರತದ ಇತಿಹಾಸ -೧ ಪು. ೪೯ ಕಲಾ ಪ್ರಕಾಶನ್ ಬೆಂಗಳೂರು ೨೦೦೪
೨೧. ಪ್ರೋ. ಹೆಚ್ ರಾಮಲಿಂಗಪ್ಪ. ಭಾರತದ ಇತಿಹಾಸ -೧ ಪು. ೫೦ ಕಲಾ ಪ್ರಕಾಶನ್ ಬೆಂಗಳೂರು ೨೦೦೪
೨೨. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೫ ಕಲೆಸಾಹಿತ್ಯ ಪು. ೧೯೧ ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ಬೆಂಗಳೂರು ೧೯೭೩
೨೩. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೪೦ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨
೨೪. ಡಾ. ಸಿ ಮಹದೇವ : ವಿಜಯನಗರದ ಗಾರೆಶಿಲ್ಪ ಪು .೦೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಈ ಮಣ್ಣನ್ನು ಭೂಮಿತಾಯಿಯೆಂದೆ ಪೂಜಿಸಲಾಗುತ್ತದೆಯಲ್ಲದೇ ಮನುಷ್ಯನ ಜೀವನದ ಉದ್ದಕ್ಕೂ ಹಾಸು ಹೊಕ್ಕಾಗಿರುವ ಹಬ್ಬ ಹರಿದಿನಗಳಂತಹ ಸಂದರ್ಭಗಳಲ್ಲಿ ವಿವಿಧ ಆಕಾರಗಳಲ್ಲಿ ಪ್ರಾಣಿಗಳಾಗಿ ದೇವತಾ ಮೂರ್ತಿಶಿಲ್ಪಗಳಾಗಿ ರೂಪತಳೆದು ಪೂಜೆಗೊಳ್ಳುತ್ತವೆ. ಹೀಗೆ ರೂಪತಳೆದು ಪೂಜೆಗೊಳ್ಳುವ ನೂರಾರು ಬಗೆಯ ಮಣ್ಣಿನ ಶಿಲ್ಪಗಳಲ್ಲಿ[೨೫] ಕಲಘಟಗಿಯ ಕಲಾವಿದರ ಸೌಂದರ್ಯ ಪ್ರಜ್ಞೆ ಮತ್ತು ಕಲಾವಂತಿಕೆ ಕಾಣಬಹುದಾಗಿದೆ. ಈ ಮಣ್ಣಿನ ಮಾಧ್ಯಮದ ಜನಪದ ಶಿಲ್ಪಗಳು ಹೆಚ್ಚಾಗಿ ಧರ್ಮ ಹಾಗೂ ವೃತ್ತಿಯ ಹಿನ್ನೆಲೆಯಲ್ಲಿ ಬೆಳೆದು ಬಂದವುಗಳಾಗಿವೆ. ಇಂತಹ ವಿಚಾರಗಳ ಕುರಿತು ಇಲ್ಲಿ ಅಧ್ಯಯನ ನಡೆಸಲಾಗಿದೆ.

ಓರಿಸ್ಸಾದ ಸಂಬಲಪುರ ಜಿಲ್ಲೆಯ ಬಾರಾಪಲಿ, ಆಸ್ಸಾಂನ ಬಿರಬುನ್, ಪಶ್ಚಿಮ ಬಂಗಾಳದ ಬಂಕುರಾ, ಆಂಧ್ರಪ್ರದೇಶದ ಕೊಂಡಪಲ್ಲಿ, ಮಹಾರಾಷ್ಟ್ರದ ಸಾವಂತವಾಡಿ ಮತ್ತು ಕರ್ನಾಟಕದ ಕಲಘಟಗಿ, ಗೋಕಾಕ, ಚನ್ನಪಟ್ಟಣ, ಕಿನ್ನಾಳ, ಮುಂತಾದ ಪ್ರದೇಶಗಳಲ್ಲಿ ಸುಂದರ ಕಲಾತ್ಮಕ ಆಟಿಕೆ ಗೊಂಬೆ, ತೊಟ್ಟಿಲುಗಳು, ಹಣ್ಣು ಹಂಪಲು ಪ್ರಾಣಿ ಪಕ್ಷಿಗಳ ಕಲಾಕೃತಿಗಳನ್ನು ರಚಿಸುವಲ್ಲಿ ಪ್ರಸಿದ್ಧಿಯನ್ನು ಪಡೆದಿವೆ.

ಹಂಪೆಯ ಪ್ರದೇಶದಲ್ಲಿ ಗಾಂಧಾರ ಶೈಲಿಯ ಗೊಂಬೆಗಳು ದೊರೆತಿದ್ದು ಆ ಕುರಿತು 'ಡಾ. ಅ.ಸುಂದರ' ಅವರು ವಿದ್ವತ್ಪೂರ್ಣವಾದ ಲೇಖನವೊಂದನ್ನು ಬರೆದಿದ್ದಾರೆ. ಈ ಗೊಂಬೆಗಳನ್ನಾಧರಿಸಿ ಹಂಪೆಯು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತೆಂದು ಅಭಿಪ್ರಾಯಪಡುತ್ತಾರೆ.[೨೬] ಭಾರತದಲ್ಲಿಯ ಮಡಿಕೆ ತಯಾರಿಕೆ ಕುರಿತು 'ಬರ್ಡವುಡ್' ಹೀಗೆ ಹೇಳುತ್ತಾನೆ. "ಪ್ರಚೋಧನೆಯಲ್ಲಿ ಮತ್ತು ಆಕೃತಿಗಳ ಸರಳತೆಯಲ್ಲಿ ಹಾಗೂ ಅದರ ಬಳಕೆಯ ಹೊಂದಾನಿಕೆ ಮತ್ತು ಕಲೆಯ ಪರಿಶುದ್ಧತೆಯಲ್ಲಿ ನಿಸರ್ಗವನ್ನು ನಂಬುವ ಮತ್ತು ಮನೆಗೆ ಸಂಬಂಧಿತವಾದ ಹಾಗೂ ವೆಚ್ಚ ಹಿಡಿತದ ಗೃಹ ಕೈಗಾರಿಕೆಗಳಲ್ಲಿ ಭಾರತದ ಕುಂಬಾರರ ಕೆಲಸ ಸ್ವಾಭಾವಿಕತೆಗೆ ನೈಜವಾಗಿದೆ" ಎಂದಿದ್ದಾನೆ.[೨೭] ಇಂತಹ ಹೇಳಿಕೆ ಪ್ರಕಾರ ಭಾರತದಲ್ಲಿ ಮೊದಮೊದಲು ಮಣ್ಣಿನ ಬಳಕೆ ಹೆಚ್ಚಾಗಿತ್ತು ಎಂದು ತಿಳಿದುಬರುತ್ತದೆ. ಹಾಗೇ ಮರುಗಿನ ಅಥವಾ ಮರುಗಿಲ್ಲದ ಬಣ್ಣ ಹಾಕಿದ ಮಡಿಕೆಗಳು ಭಾರತದಲ್ಲಿ ಪ್ರಸಿದ್ಧವಾಗಿವೆ.

ಖುರ್ಜಾದ, ದೆಹಲಿ, ರಾಯಪುರ, ಮತ್ತು ಗ್ವಾಲಿಯರ, ಅಲ್ವಾರ, ಜೈಪುರ, ಕಾಶ್ಮೀರ, ಮುಂತಾದ ಪ್ರದೇಶಗಳಾಗಿವೆ. ನಿಜಾಮ್‌ಬಾದನ ಕುಂಬಾರರು ಕರಿಯ ಮೇಲೆ ಅದನ್ನು ಬೇಯಿಸಿ ಪಾದರಸ ಮತ್ತು ತವರದ ಮಿಶ್ರಣದಿಂದ ತಿಕ್ಕಿ ತೀಡಿ ಸುಂದರವಾದ ಬಳ್ಳಿಯ ಹೂವಿನ ಅಲಂಕಾರವನ್ನು ಕೆತ್ತುತ್ತಾರೆ. ಹಾಗೇ ಭುರಮ್‌ಪುರ, ಮಡಿಕೆ ಕೆಲಸ ಪ್ರಾಚೀನ ಖ್ಯಾತಿಯನ್ನು ಹೊಂದಿವೆ. ಇವುಗಳಲ್ಲದೆ ದಕ್ಷಿಣ ಭಾರತದ ವೆಲ್ಲೂರುನಾರ್ತ ಅರ್ಕಾಟ್ ಮತ್ತು ಕುಂಭಕೋಣಂ ಮೆರುಗಿನ ಮಡಿಕೆಗಳಿಗೆ ಹೆಸರಾದ ಸ್ಥಳಗಳಾಗಿವೆ.[೨೮] ಹಾಗೇ ಕಲಘಟಗಿಯು ಮಡಕೆ ತಯಾರಿಕೆಗೆ ಹೆಸರುವಾಸಿಯಾಗಿದೆ.

ಪ್ಯಾರಿಸಿನ ಹೆಸರಾಂತ ಶ್ರೇಷ್ಠ ಕಲಾವಿದರಾದ ಎಡ್ವರ್ಡ ಡೆಗಾನು ತನ್ನ ಜೀವನದ ಕೊನೆಯ ದಿನಗಳಲ್ಲಿ ಚಿತ್ರ ಬರೆಯಲು ಆಗದಷ್ಟು ಕುರುಡತೆ ಆವರಿಸಿದಾಗ ಶಿಲ್ಪಕಲೆಯ ಕಡೆಗೆ ತಿರುಗಿದ ಜೇಡಿಮಣ್ಣು ಅಥವಾ ಜೇನುಮೇನದಲ್ಲಿ ಮಾದರಿಗಳನ್ನು ಮಾಡಿ ಅವುಗಳಿಂದ ಕಂಚಿನ ವಿಗ್ರಹಗಳನ್ನು ತಯಾರಿಸುತ್ತಿದ್ದ.[೨೯] ಈ ಕಲಾವಿದನ ಕೊನೆಯ ಕಲಾಕೃತಿಗಳು ಮಣ್ಣಿನ ಸಹಾಯವನ್ನೇ ಪಡೆದಿವೆ. ಅಲ್ಲದೇ ಮಣ್ಣಿನ ಬಳಕೆ ಕುರಿತು ಮತ್ತೇ ಪ್ರಾಚೀನ ಕಲ್ಪನೆ ಮೂಡಿಬರುತ್ತದೆ. ಆ ಕಾಲದ ಮಾನವ ತಾನು ನೋಡಿದ್ದನ್ನು ಉದ್ದೇಶಕ್ಕನುಗುಣವಾಗಿ ಬಿಡಿಸುವ ಕುಶಲಗಾರ ಚಿತ್ರಗಳು ಸಾಂಕೇತಿಕ ಆದ್ದರಿಂದ ಕೇವಲ ಛಾಯಾ ನಿರೂಪಣಾ ತಂತ್ರವನ್ನು ಬಳಸಿದ್ದು, ಇದು ಚಾರಿತ್ರಿಕ ಯುಗದಲ್ಲೂ ಮುಂದುವರೆಯಿತು.

---

೨೫. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೪೦ ಅಪ್ರಕಟಿತ ಪಿಹಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೨೬. ಡಾ. ಸಿ ಮಹದೇವ : ವಿಜಯನಗರದ ಗಾರೆಶಿಲ್ಪ ಪು.೦೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೨೭. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು.೨೯೫ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೨೮. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು.೨೯೬ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೨೯. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೦೫ ಕಲೆಸಾಹಿತ್ಯ ಪು. ೬೧೦ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೩

ಒಟ್ಟಿನಲ್ಲಿ, ಇವುಗಳು ತೀರಾ ಸರಳವಾಗಿದ್ದರೂ ವಿನ್ಯಾಸದ ಸಂಕೇತಗಳಲ್ಲಿ ಸತ್ವಶಾಲಿಯಾಗಿವೆ. ಭಾವಗಳ ಸಂಕೇತದಲ್ಲಿ ತೀರಾ ಪರಿಣಾಮಕಾರಿಯಾಗಿವೆ. ಈ ಲಕ್ಷಣಗಳೇ ಕಲೆಯ ಜೀವಾಳ ಮುಂದೆ ಇವನ್ನು ಇತಿಹಾಸಕಾಲದ ಮೂರ್ತಿಶಿಲ್ಪ, ವರ್ಣಚಿತ್ರಗಳಲ್ಲಿ ಸುಧಾರಿಸಿದ ತಂತ್ರ ವಿಧಾನಗಳ ಮೂಲಕ ಕಾಣುತ್ತವೆ. ಆದ್ದರಿಂದ ಚಿತ್ರಕಲೆಯ ಅತಿ ಮುಖ್ಯವಾದ ಘಟಕಗಳ ಪರಂಪರೆಯ ಅಡಿಗಲ್ಲನ್ನು ಹಾಕಿದ ಕೀರ್ತಿ ಈ ಪ್ರಾಗೈತಿಹಾಸಿಕ ಮಾನವನಿಗೆ ಖಂಡಿತವಾಗಿಯೂ ಸಲ್ಲುತ್ತದೆ.[೩೦] ಇಂತಹ ಹಲವಾರು ದಾಖಲೆಗಳ ಹಿನ್ನೆಲೆಯಲ್ಲಿ ಇಂದು ಕರ್ನಾಟಕದಲ್ಲಿ ಗೃಹ ಕೈಗಾರಿಕೆಗಳು ಹುಟ್ಟಿಕೊಂಡಿವೆ.

### ಮಣ್ಣು ಮಾಧ್ಯಮ ಹಿನ್ನೆಲೆ

ಧಾರವಾಡ ಜಿಲ್ಲೆಯ ತಾಲೂಕು ಕೇಂದ್ರವಾದ ಕಲಘಟಗಿಯು ಮಲೆನಾಡಿನ ಅಂಚಿನಲ್ಲಿರುವ ಪ್ರದೇಶ ಇದು ಧಾರವಾಡದಿಂದ ದಕ್ಷಿಣಕ್ಕೆ ೩೬ ಕಿ.ಮೀ. ದೂರದಲ್ಲಿದೆ. ಅಧಿಕ ಮಳೆಯಾಗುವ ಈ ಪ್ರದೇಶಗಳಲ್ಲಿ ಜಂಬಿಟ್ಟಿಗೆ (ಲ್ಯಾಟರೈಟ್) ಮಣ್ಣನ್ನು ಕಾಣಬಹುದು. ಅತಿ ಹೆಚ್ಚು ಮಳೆ ಹೆಚ್ಚು ಶಾಖ, ಇವುಗಳ ಪ್ರಭಾವಕ್ಕೆ ಒಳಗಾಗಿ ಮುಖ್ಯ ಅಂಶಗಳು ಇಂಗಿಸಿಲಿಕ, ಕಬ್ಬಿಣ ಮತ್ತು ಅಲ್ಯುಮಿನಿಯಂನ ಆಕ್ಸೈಡ್‌ಗಳ ಪ್ರಬಾವ ಹೆಚ್ಚಾಗುವುದರ ಪರಿಣಾಮವಾಗಿ ಜಂಜಟ್ಟಿಗೆ ಮಣ್ಣು ಉದ್ಭವವಾಗಿದೆ. ಮಲೆನಾಡಿನ ಜಂಬಿಟ್ಟಿಗೆ ಮಣ್ಣು ಇತ್ತೀಚಿಗೆ ಉಂಟಾಗಿದ್ದು ಮಣ್ಣಿನ ಪದರುಗಳು ಬಹು ಆಳದವರೆಗೂ ಒಂದೇ ಸಮನಾಗಿರುವುದನ್ನು ಕಾಣಬಹುದು. ಇವು ಹಳದಿ ಮಿಶ್ರಿತ ಕಪ್ಪಿನಿಂದ ಕಪ್ಪು ಮಿಶ್ರಿತ ಕೆಂಪು ಬಣ್ಣದವರೆಗೂ ಕಂಡುಬರುತ್ತದೆ.[೩೧] ಈ ಮಣ್ಣು ಉತ್ಕೃಷ್ಟವಾದ್ದರಿಂದ ಕಲಘಟಗಿಯ ಕಲಾವಿದರು ಮೂರ್ತಿಶಿಲ್ಪಗಳಿಗೆ ಇದೇ ಮಣ್ಣನ್ನು ಬಳಸುವರು. ಈ ಮಣ್ಣು ಸ್ಥಳೀಯವಾಗಿ ದೊರಕುವುದರಿಂದ ಇಲ್ಲಿಯ ಕಲಾವಿದರಿಗೆ ಹೆಚ್ಚು ಉಪಯುಕ್ತವಾಗಿದೆ. ಅಲ್ಲದೆ ಕೆರೆಯಂತಹ ಸ್ಥಳದಲ್ಲಿ ದೊರಕುವ ಈ ಮಣ್ಣು ಹೆಚ್ಚು ಜಿಗುಟಾಗಿರುತ್ತದೆ. ಅಲ್ಲದೆ ಈ ಮಣ್ಣು ತಂದು ಹಲವಾರು ರೀತಿಯಲ್ಲಿ ಕುಟ್ಟಿ ಪುಡಿಮಾಡಿ ನೆನೆಹಾಕಿ ಮತ್ತೆ ಇದರಲ್ಲಿ ಹತ್ತಿಯನ್ನು ಹಾಕಿ ವಿವಿಧ ರೀತಿಯಲ್ಲಿ ತಯಾರಿಸಿಕೊಂಡು ಮೂರ್ತಿಶಿಲ್ಪಗಳಿಗೆ ಉಪಯೋಗಿಸುತ್ತಾರೆ. ಇಲ್ಲಿ ಹೆಚ್ಚಾಗಿ ರೂಪಗೊಳ್ಳುವ ಶಿಲ್ಪಗಳು ಗಣಪತಿ, ಮಣ್ಣೆತ್ತು, ಗೌರಿ, ಮೂಷಿಕ, ಕೃಷ್ಣ, ಬಲರಾಮ, ನಾಗಪ್ಪ, ದೇವರು, ಲಿಂಗು, ಆನೆ, ಶಿವಭಕ್ತ, ನಾರದ, ಅರ್ಜುನ, ಇನ್ನೂ ಮುಂತಾದ ಶಿಲ್ಪಗಳು ಅಲ್ಲದೆ ನಕ್ಷಾ ವಿನ್ಯಾಸಗಳು ಕಂಡುಬರುತ್ತವೆ.

ಕಲಘಟಗಿಯ ಕಲಾವಿದರು ಬಳಸುವ ಈ ಮಣ್ಣು ಕೆರೆಯಿಂದ ಪಡೆಯುವುದರಿಂದ ಕಲಾವಿದರು ಕೆರೆಯುವ ಹಾಗೆ ಕೆರೆ ಮಣ್ಣು ಎಂದು ಹೇಳುತ್ತಾರೆ. ಹಾಗೆ ಹಲವಾರು ಹೊಲಗದ್ದೆಗಳಿಂದ ಹರಿದು ಬಂದ ಈ ಮಣ್ಣು ಕೆರೆಯಲ್ಲಿ ಹಲವಾರು ವರ್ಷಗಳವರೆಗೂ ನೀರಿನ ಕೆಳಭಾಗದಲ್ಲಿ ಇದ್ದು ನೆನೆದು ಹೆಚ್ಚು ಜಿಗುಟಾಗಿರುತ್ತದೆ. ಆದ್ದರಿಂದ ಅದೇ ಮಣ್ಣನ್ನೇ ಬಳಸುತ್ತೇವೆ ಎಂದು ಹೇಳುತ್ತಾರೆ.

### ೧. ಈಶ್ವರ ಗಣೇಶ

ಈಶ್ವರನ ಬದಲಿಗೆ ಈಶ್ವರನ ಲಿಂಗಕ್ಕೆ ಜನ ಪೂಜಿಸುವರು. ಇದು ದ್ರಾವಿಡ ಜನಾಂಗದ ಮೂಲ ಪೂಜೆ, ಇದರಿಂದಲೇ ಜಗದ ಹುಟ್ಟು. ಇಲ್ಲಿ ಸ್ತ್ರೀ ಪುರುಷರಿಬ್ಬರೂ ಸೇರಿರುವುದುನ್ನು ಸಾಂಕೇತಿಕವಾಗಿ ಕಾಣುತ್ತೇವೆ.[೩೨] ಶಿಶ್ನದೇವ ಎಂದು ಋಗ್ವೇದದಲ್ಲಿ ಬಳಸಿದ್ದರೂ ಹೆಚ್ಚಿನ ವಿವರಗಳನ್ನು ನೀಡುವುದಿಲ್ಲ. ಆದರೆ ಭಾರತೀಯರ ಶೃಂಗಾರ ಮತ್ತು ಲೈಂಗಿಕತೆಗೆ ಪ್ರಾಧಾನ್ಯಕೊಟ್ಟು ಅಥರ್ವಣವೇದ ರಚಿಸುವ ಹೊತ್ತಿಗೆ ಏನೆಲ್ಲಾ ಬದಲಾವಣೆಗಳಾಗಿ ಹೋಗಿದ್ದವು ಎನಿಸುತ್ತದೆ. ಹಾಗಾಗಿ ಶಿಶ್ನ ದೇವ ಇಲ್ಲಿ ಮೂರ್ತರೂಪ ಪಡೆದು ಪೂಜೆಗೆ ಅರ್ಹವ್ಯಕ್ತಿಯಾಗಿ ಮೂಡಿಬಂದ, ಶಿಶ್ನ ಮತ್ತು ಯೋನಿಯನ್ನು ಪ್ರತಿನಿಧಿಸುತ್ತಿರುವುದಕ್ಕೆ ಸಾಕಷ್ಟು ದಾಖಲೆಗಳು ನಮಗೆ ದೊರಕುತ್ತವೆ.[೩೩] ಭಾರತ ಮತ್ತು ಟಿಬೆಟನಲ್ಲಿ ಇದು ಬಹುಪ್ರಾಚೀನ ಕಾಲದಿಂದಲೂ ಸ್ತ್ರೀ ತತ್ವ ಅಥವಾ

---

೩೦. ಅ.ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ ಪು. ೬೬. ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೪

೩೧. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾರವಾಡ ಜಿಲ್ಲೆ ಪು. ೨೭೨ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೩೨. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು.೧೯೫ ಕನ್ನಡ ವಿಶ್ವವಿದ್ಯಾಲಯ ೨೦೦೦

೩೩. ಟಿ ಎನ್ ಕೃಷ್ಣಮೂರ್ತಿ : ಕಲಾವಾರ್ತೆ ಪು. ೧೧. ಕರ್ನಾಟಕ ಲಲಿತಕಲಾ ಅಕಾಡೆಮಿ ೨೦೦೨

ಸ್ತ್ರೀ ಸೃಷ್ಟಿ ಶಕ್ತಿಯ ಸಂಕೇತವಾಗಿದೆ. ಇದು ಒಂದೇ ಅಥವಾ ಪುರುಷ ಸಂಕೇತವಾದ ಲಿಂಗದೊಡಗೂಡಿ ಪೂಜಾವಸ್ತುವಾಗಿದೆ. ಮಹಾಮಾತೆ ಅಂದರೆ ಭೂಮಿ ಮತ್ತು ಫಲವಂತಿಕೆಯ ಪರಿಕಲ್ಪನೆಗಳೊಂದಿಗೆ ಯೋನಿಗೆ ಸಂಬಂಧ ಕಲ್ಪಿಸಲಾಗಿದೆ. ಇತರೆ ಸಂಸ್ಕ್ರತಿಗಳಲ್ಲೂ ಇದಕ್ಕೆ ಸಂವಾದಿಗಳಿವೆ. ಶಿಶ್ನ ಆರಾಧನೆಯಲ್ಲಿ ಯೋನಿಯನ್ನು ಕೆಟ್ಟ ಪ್ರಭಾವಗಳನ್ನುಂಟು ಮಾಡುವಂಥದ್ದು ಎಂದು ಭಾವಿಸಬಹುದು.[೩೪] ಆದರೆ ಈ ಕಲಾಕೃತಿಯಲ್ಲಿ ಕಲಾವಿದನ ಕಲ್ಪನೆಯೂ ತುಂಬಾ ನಾಜುಕಾಗಿದೆ. ಶಿವ ಶಿವಪಾರ್ವತಿಯ ಮಗನಾಗಿ ಹುಟ್ಟಿದ ಗಣೇಶನು ಶಿವನ ಲಿಂಗದಲ್ಲಿಯೇ ಸೃಷ್ಟಿಯಾಗಿದ್ದು ಕಂಡುಬರುತ್ತದೆ. ಗಣೇಶನ ಸೊಂಡಿಲು ಕೆಳ ಮತ್ತು ಮೇಲ್ಭಾಗದಲ್ಲಿ ದಾಸವಾಳಗಿಡದ ಟೊಂಗೆಯನ್ನು ರಚಿಸಿ ಲಿಂಗುಗಣೇಶನಿಗೆ ಇದರಿಂದ ಅರಳಿದ ದಾಸವಾಳ ಹೂವನ್ನೇ ಏರಿಸಿದ್ದಾನೆ. ಇಲ್ಲಿ ಹೂ ಕೆಂಪು ಬಣ್ಣವಾಗಿದ್ದು ಮಧ್ಯದಲ್ಲಿ ತಂತಿಯನ್ನು ಬಳಸಿದ್ದು ಕಂಡುಬರುತ್ತದೆ. ತುದಿಭಾಗಕ್ಕೆ ಬಿಳಿವರ್ಣ ಬಳಿಯಲಾಗಿದೆ. ಹೂವಿನ ಮೇಲ್ಭಾಗ ಹಿಂದೂ ಸಾಂಪ್ರದಾಯದ ಓಂ ಅಕ್ಷರವನ್ನು ಬರೆಯಲಾಗಿದೆ. ಹೂವಿನ ಪ್ರಾರಂಭ ಸ್ಥಳದಲ್ಲಿ ಟೊಂಗೆಯು ತ್ರಿಶೋಲ ಆಕಾರದಲ್ಲಿ ರಚನೆಯಾಗಿದೆ. ಹಣೆನಾಮವಾಗಿ ಕೆಂಪು ಪಟ್ಟಿ ಹಳದಿ ಪಟ್ಟಿಯನ್ನು ಸೃಷ್ಟಿಸಿದ್ದಾರೆ. ಅದೇ ಟೊಂಗೆಯಿಂದ ಮೇಲಕ್ಕೆ ಮತ್ತೊಂದು ಟೊಂಗೆ ಸೃಷ್ಟಿಸಿ ಎಲೆಯನ್ನು ಹಸಿರು ವರ್ಣದಲ್ಲಿ ರಚಿಸಿ ಮೇಲೆ ಕೆಂಪು ವರ್ಣದ ಮೂಷಿಕನು ಈಶ್ವರ ಗಣೇಶನ ಮುಖವನ್ನು ನೋಡುವುದಾದರೆ ಬಾಗಿದ ಎಲೆಯಮೇಲಿಂದ ಕೆಳಗೆ ಬೀಳುತ್ತಿದೆ. ಎನ್ನುವ ಕಾತುರ ನೋಡುಗರಿಗೆ ಉಂಟುಮಾಡುತ್ತದೆ. ಈಶ್ವರ ಗಣೇಶನ ಮುಖಕ್ಕೆ ಸರಿಹೊಂದುವ ಪ್ರಮಾಣ ಉದ್ದವಾದ ಕಣ್ಣು ರಚಿಸಲಾಗಿದೆ. ಇಲ್ಲಿ ಹಲವಾರು ವರ್ಣಗಳಿಂದ ಕಣ್ಣು ಜೀವಂತ ರೇಖೆಯಿಂದ ಜೀವತುಂಬಿ ಕಣ್ಣಿನಲ್ಲಿ ನೆರಳು ಬೆಳಕಿನ ವ್ಯತ್ಯಾಸ ಕಣ್ಣಿನಲ್ಲಿಯ ನೈಜವಾದ ಬಣ್ಣಗಳು ಕಂದು ಮಿಶ್ರಿತ ಬಿಳಿವರ್ಣ ಕಪ್ಪು ಕಾಡಿಗೆಯು ರೆಪ್ಪೆಯ ಕೆಳ ಮತ್ತು ಮೇಲ್ಭಾಗ ರೆಪ್ಪೆಯ ಮೇಲಿನ ಉಬ್ಬು ತಗ್ಗು ಅದಕ್ಕೆ ತಕ್ಕುದಾದ ವರ್ಣ ಗೋದಿಗೆಂಪು ಮೇಲ್ಭಾಗದಲ್ಲಿ ಭಾಗಿದ ಹುಬ್ಬು ಕಂದುವರ್ಣದಲ್ಲಿ ರಚನೆಯಾಗಿದ್ದು ನೆರಳಿನ ವ್ಯತ್ಯಾಸಕ್ಕೆ ಕಪ್ಪನ್ನು ಕೆಳಭಾಗಕ್ಕೆ ಸೂಕ್ಷ್ಮವಾದ ರೇಖೆಯಿಂದ ರಚಿಸಿದ್ದಾರೆ. ಮಣ್ಣಿನಲ್ಲಿ ರಚಿತವಾದ ಈ ಈಶ್ವರ ಗಣೇಶನ ಮೈಯಲ್ಲಿ ಉಬ್ಬು ತಗ್ಗನ್ನು ಕಲಾವಿದ ಜಾನ್ಮೆಮರೆದಿದ್ದಾನೆ. ಗಣೇಶನ ಕೋರೆಯು ಚಿಕ್ಕದಾಗಿದ್ದು ನೋಡುವದಕ್ಕೆ ಎಳಿದಾದ ಮೊಗ್ಗ ತರಹ ಭಾಸವಾಗುತ್ತದೆ. ಸೊಂಡಿಲೂ ಕೆಳಭಾಗದ ಟೊಂಗೆಯೂ ಕೊರೆಯ ಕೆಳಭಾಗದವರೆಗೆ ಚಲಿಸಿ ಹೊರ ರೇಖೆಯನ್ನುವ ಹಾಗೆ ಹಸಿರು ಬಣ್ಣಭಾವನೆ ಗೋಚರಿಸಿದೆ ಮುಂದೆ ಮೊಗ್ಗನ್ನು ಬಿಡಿಸಲಾಗಿದೆ. ಕೆಂಪು ವರ್ಣದಲ್ಲಿ ಮೂಡಿಬಂದ ಮೊಗ್ಗು ಕತ್ತಿನ ಕೊನೆಯ ಹಂತವನ್ನು ತೋರಿಸುತ್ತದೆ. ಸ್ತ್ರೀ ಮಧ್ಯದಲ್ಲಿ ಯೋನಿಯಲ್ಲಿಯ ಸಂಕೇತ ಹುಟ್ಟಿದ ಈಶ್ವರ ಗಣೇಶವಾಗಿದೆ. ಇಲ್ಲಿ ಭೂಮಿತಾಯಿ ಫಲವಂತಿಕೆಯ ಸಂಕೇತವಾಗಿ ಬಳಸಲಾದ ಯೋನಿಯನ್ನು ಗೋದಿಗೆಂಪು ವರ್ಣದಿಂದ ರಾರಾಜಿಸುತ್ತದೆ. ಈಶ್ವರ ಗಣೇಶನಿಗೆ ಹಾಲೆರದರೆ ಕೆಳಭಾಗದ ಯೋನಿಯ ತುದಿಯಿಂದ ಹೊರ ಹೋಗುವುದಕ್ಕೆ ಅನುವುಮಾಡಿರುವುದಾಗಿದೆ. ಇಲ್ಲಿ ಬಂದಂತಹ ಹಾಲು ಭಕ್ತಾಧಿಗಳು ಪ್ರಸಾದದ ಹಾಗೇ ಸ್ವೀಕರಿಸುತ್ತಾರೆ. ಈ ಕಲಾಕೃತಿಯಲ್ಲಿ ಹೆಚ್ಚಾಗಿ ಎರಡು ವರ್ಣವನ್ನು ಉಪಯೋಗಿಸಲಾಗಿದೆ. ನೀಲಿ ಹಲಗೆ ಮೇಲೆ ಕುಳಿತ್ತಿರುವ ಸ್ತ್ರೀ ಸಂಕೇತದ ಈಶ್ವರ ಗಣೇಶಣಾಗಿ ದಟ್ಟನೀಲಿಯ ಬಟ್ಟೆಯ ಮುಂದಿದ್ದಾನೆ. ಗಣೇಶ ಚತುರ್ಥಿಯಂದು ಪೂಜೆಗೊಳ್ಳುವ ಈಶ್ವರ ಗಣೇಶ ಮೂರ್ತಿಶಿಲ್ಪವಾಗಿದೆ.

### ೨. ಗೌರಿ ಗಣೇಶ

ಸಿರಿವಳದಲ್ಲಿದ್ದ ಈ ಸದ್ಭಕ್ತೆ ಗೂಳೆಯ ಹೊರಟು ಹಾದಿ ತಪ್ಪಲು ಒಂದು ಕೊಳ್ಳದಲ್ಲಿ ಹುಲಿಯನ್ನು ಇದಿರುಗೊಂಡಳು. ಆದರೂ ಬೆದರದೆ ಶಿವಧ್ಯಾನದಲ್ಲಿರಲು ಬೇಟೆಗೆಂದು ಬಂದಿದ್ದ ರಾಜ ಇದನ್ನು ಕಂಡು ಮೆಚ್ಚಿ, ಆಕೆಯನ್ನು ತನ್ನೂರಿ ಕೊಂಡೊಯ್ದನು ಇಲ್ಲಿ ಆಕೆ ಗಂಡನೊಡನೆ ಸುಖವಾಗಿದ್ದಳು ಗುರುಲಿಂಗ ಜಂಗಮದ ಸೇವೆಯಲ್ಲಿದ್ದ ಆಕೆಯನ್ನು ಶಿವನು ಕೈಲಾಸಕ್ಕೆ ಆಹ್ವಾನಿಸಲು, ಆಕೆ ತನ್ನ ಏಳು ದಿನದ ಹಸುಗೋಸನ್ನು ಬಿಟ್ಟು ಬರಲಾರೆನೆಂದಳು ಅಂದಿನಿಂದ ಮೂರು ವರ್ಷದ ಮೇಲೆ ಕಾರ್ತಿಕ ಸೋಮವಾರದ ದಿನ ಗಣಾರಾಧನೆ ಮಾಡಿ, ಸಮಾಧಿಯಲ್ಲಿ ಶಿವೈಕ್ಯಳಾದಳು.[೩೫] ಇಲ್ಲಿ ಕಂಡುಬರುವ ಕಲಾಕೃತಿಯು ತುಂಬಾ ಆಕರ್ಷಕವಾಗಿದ್ದು

---

೩೪. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೧೭೦೩ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೩೫. ತ.ಸು.ಶಾಮರಾಯ: ಶಿವಶರಣ ಕಥಾರತ್ನಕೋಶ ಪು.೧೩೦ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ನೋಡುವುದೆ ಒಂದು ಭಾಗ್ಯವೆನಿಸುತ್ತದೆ. ಇಲ್ಲಿ ಗೌರಿಯು ಮಗನಾದ ಗಣೇಶನನ್ನು ಎಡಗೈಯಲ್ಲಿ ಕುಳ್ಳಿರಿಸಿಕೊಂಡಿದ್ದು ಇಬ್ಬರ ಮೈಬಣ್ಣವು ಗೋದಿಗೆಂಪು ಆಗಿದೆ. ಆಭರಣಗಳ ವಿಷಯ ಬಂದಾಗ ಆಭರಣಗಳೆ ಮುಖ್ಯಾವಾಗಿವೆ ಎಂದೆನಿಸುತ್ತದೆ. ಬೆಳ್ಳಿ, ಬಂಗಾರ, ಖಡಗ, ಗೆಜ್ಜೆ, ಉಂಗುರ, ರಟ್ಟೆ ಕವಚ, ನಡುಪಟ್ಟಿ, ಕೊರಳಲ್ಲಿಯ ಆಭರಣ ಮೂಗುತಿ ಕಿವಿಯೋಲೆ, ಹಣೆ ಪದಕ, ಎದೆಕವಚ, ಇತ್ಯಾದಿಗಳು ಕಂಡು ಬಂದು ಇದರಲ್ಲಿ ಕೆಲವು ಸೂಕ್ಷ್ಮದವುಗಳಾಗಿವೆ. ಇವುಗಳನ್ನು ನೇರವಾಗಿ ಮಾರ್ಕೆಟನಿಂದ ತಂದು ಹಾಕಿದ್ದು ಕಂಡುಬರುತ್ತದೆ. ಉದಾ: ಕಿವಿಯಲ್ಲಿ ಕಂಡುಬರುವ ಆಭರಣಗಳು ಮೂಗುನತ್ತು, ಬೈತಾಲೆ ಪಧಕ, ಕೋರಳಲ್ಲಿಯ  ಮುತ್ತಿನ ಸರ, ಇತ್ಯಾದಿಗಳಾಗಿವೆ. ಇಲ್ಲಿ ಗಣೇಶನು ನಾಲ್ಕು ಕೈಗಳನ್ನು ಹೊಂದಿದ್ದು ಒಂದು ಕೈಯಲ್ಲಿ ಹಾವು ಮತ್ತೊಂದು ಅಭಯ ಹಸ್ತವಾಗಿರುವುದರೊಂದಿಗೆ ಕೈಯಿಯ ಮಧ್ಯದಲ್ಲಿ ವೃತ್ತಾಕಾರದ ಬೆಳ್ಳಿವರ್ಣದ ನಾಣ್ಯದ ಹಾಗೆ ಗೋಚರಿಸುವ ವಸ್ತುವಿದೆ. ಇನ್ನೆರೆಡು ಕೈಗಳು ನಮಸ್ಕರಿಸುವಹಾಗಿದ್ದು ಮುಖವು ಮೇಲಕ್ಕೆ ಸ್ವಲ್ಪ ತಿರುಗಿದೆ. ಗೌರಿಯ ಕಣ್ಣುಗಳು ಗಣೇಶನ ಮುಖವನ್ನು ಆಲಿಸುತ್ತಿವೆ. ಗೌರಿಯ  ಹಣೆಯ ನಾಮ ಅರ್ಧಚಂದ್ರನಾಕಾರವಾಗಿ ಕೆಂಪು ಬಣ್ಣದ ಮೂಡಿಬಂದಿದೆ. ಕಣ್ಣಲ್ಲಿ ವರ್ಣಿಸಲಾಗದಂತಹ ಜೀವಂತ ಕಣ್ಣುಗಳೇ ಎನ್ನುವ ಹಾಗೆ ಸೃಷ್ಟಿಸಿದ್ದಾರೆ. ಚೂಪಾದ ಮೂಗು ಗುಲಾಬಿ ಪೊಕಳೆಯಂತ್ತರಳಿದ ಕೆಂದೂಟಿ ರಸ ತುಂಬಿದ ಕನ್ನೆ ಬಾಗಿದ ಹುಬ್ಬು, ಕಲಾವಿದನ ಬಣ್ಣಗಳು ಮೊಡಿಮಾಡಿವೆ. ಸುಂದರವಾದ ಮೈಬಣ್ಣ ಉಬ್ಬಿದ ಸ್ತನಕವಚ ಎಣ್ಣೆಹಾಕಿದ ಹಾಗೆ ಹೊಳೆಯುವ ರಸ ತುಂಬಿದ ದೇಹ  ಮಾಂಸಕಂಡಗಳಲ್ಲಿ ಮೃದುತ್ವ ಒಡಮೂಡಿದೆ. ಗೌರಿಯ ಕೈಯಲ್ಲಿ ವಾಸು ಅಗರ ಬತ್ತಿಯ ಕೊಳವೆಯನ್ನು ಹಿಡಿದಿದ್ದು, ಗೌರಿ, ಗಣೇಶ, ತಲೆಗೂದಲು ಕತ್ತರಿಸಿ ಹಚ್ಚಿದಹಾಗೆ ನಿರ್ಮಿಸಿದ ಕಲಾವಿದನ ಕಲ್ಪನೆ ಅಪಾರ, ಇಡೀ ದೇಹದಲ್ಲಿಯೇ ಬಣ್ಣಗಳ ನೆರಳು–ಬೆಳಕಿನ ಅದ್ಬುತ, ಗೌರಿಯ ಸೀರೆಯು ತೆಳುವಾದ ಸುಂದರ ನಡುವಿಗೆ ಆಕರ್ಷಕವಾಗಿದ್ದು ಬಂಗಾರದ ನಡುಪಟ್ಟಿಯನ್ನು  ಪದಕದೊಂದಿಗೆ ಮೂಡಿದೆ, ತೆಳುಗುಲಾಬಿ ಹಸಿರು, ಬಿಳಿ, ನೀಲಿ ಮಿಶ್ರಿತ ಬಟ್ಟೆಯು ಇದಾಗಿದೆ. ಗಣೇಶನ ಹಣೆಯಲ್ಲಿ ಕೆಂಪು ವರ್ಣದ ತ್ರಿಶೂಲ ರಚನೆಗೂಂಟ ಸೊಂಡಿಲು ತುದಿಯವರೆಗೂ ಸುರುಳಿಯ ವಿನ್ಯಾಸಗಳು ಮೂಡಿವೆ. ಕಾಲ್ಬೆರಳು ಕೈಬೆರೆಳುಗಳಲ್ಲಿ  ಉಗುರುಗಳಿಗೆ ತಿಳಿಗುಲಾಬಿಯಿಂದ ರಚಿಸಲಾಗಿದೆ. ಗಣೇಶನ ತಲೆಯ ಜುಟಿಗೆ ನಾಗರ ಹಾವುಸುತ್ತಿದ್ದು ನಿಜವಾದ ಮುತ್ತುಗಳನ್ನು ಪೋಣಿಸಲಾಗಿದೆ. ಇಲ್ಲಿ ಹಿನ್ನೆಲೆಯಲ್ಲಿ ಗೌರಿ ಗಣೇಶನನ್ನು ಬೇರ್ಪಡಿಸುವ ನಿಟ್ಟಿನಲ್ಲಿ ಕಲಾವಿದ ದಟ್ಟ ನೀಲಿ ವರ್ಣದ ಬಟ್ಟೆಯನ್ನು ಇಳಿಬಿಟ್ಟು  ಅದರ ಹಿನ್ನೆಲೆ ಗುಡ್ಡದ ಹಾಗೇ ಬಿಳಿವರ್ಣ ಸಿಂಪಡಿಸಿದ ಚೀಲದ ತಟ್ಟನ್ನು ನಿರ್ಮಿಸಲಾಗಿದೆ. ಇಲ್ಲಿ ಒಟ್ಟಾರೆ ಕಲಾವಿದನ ವರ್ಣಸಂಯೋಜನೆ ವರ್ಣಿಸಲಾಗದ ಆಸ್ತಿ.

**೩. ಶಿವಾಜಿ ಗಣೇಶ**

ಮರಾಠ ಸಾಮ್ರಾಜ್ಯವು ಮುಸ್ಲಿಂರ ಧಾಳಿಯ ವಿರುದ್ಧ ಹೋರಾಡಿ ತಲೆ ಎತ್ತಿನಿಂತು ಇದು ಶಿವಾಜಿಯ ನಾಯಕತ್ವದಲ್ಲಿ ಒಂದು ಪ್ರಬಲ ಶಕ್ತಿಯಾಗಿ ಬೆಳೆಯಿತು.[೩೬] ಸಾಮ್ರಾಜ್ಯದ ಎಳಗೆಗೆ ಕಾರಣನಾದ ಶಿವಾಜಿಯನ್ನು ಪೂಜಿಸುವುದು ಸಾಮಾನ್ಯವಾಯಿತು. ಅಂತೆಯೆ ಗಣೇಶ ಚತುರ್ಥಿಯೆಂದು ಇಲ್ಲಿ ನಿರ್ಮಾಣವಾದ ಗಣೇಶನು ಮುಖಮಾತ್ರ ಗಣೇಶ ದೇಹಭಾಗವೆಲ್ಲ ಶಿವಾಜಿಯದಾಗಿದೆ. ಇಲ್ಲಿ ಗಣೇಶನಿಗೆ ಶಿವಾಜಿಯ ಬಟ್ಟೆ ತೊಡಿಸಿದ್ದು, ಕೈಯಲ್ಲಿ ಖಡ್ಗ ಹಿಡಿದು ಯುದ್ಧಕ್ಕೆ ಸಿದ್ಧನಾಗಿ ನಿಂತಿರುವ ಭಂಗಿಯಲ್ಲಿ ಒಂದು ಕಾಲು ಮುಂದೆ ಒಂದು ಕಾಲು ಹಿಂದೆ ಮೂಡಿಬಂದಿದೆ. ತಲೆಯ ಮೇಲೆ ಪೇಟವು ಹಳದಿಯ ಹಿನ್ನೆಲೆಯಲ್ಲಿ ರಚಿತವಾಗಿ ಮಧ್ಯದಲ್ಲಿ ಸುಳುವುಗಳಿಂದ ಆವೃತ್ತವಾಗಿದೆ. ಹಣೆನಾಮದಲ್ಲಿ ಕೆಂಪು, ಬಿಳಿಯನ್ನು ಉಪಯೋಗಿಸಿ ಡಿಜೈನ್ ಬರೆಯಲಾಗಿದೆ. ಸುಂದರವಾದ ಹಲವಾರು ವರ್ಣಗಳ ಮಿಶ್ರಣದ ಕಣ್ಣುಗಳು ಜೀವ ತುಂಬಿವೆ. ಯುದ್ಧಕ್ಕೆ ಹೊರಡುವ ಮುಖಭಾವ ತೋರ್ಪಟ್ಟಿದ್ದು ಮುಖ ಮಾತ್ರ ಗಣೇಶನದ್ದಾಗಿದೆ. ಬಿಳಿ ಅಂಗಿತೊಟ್ಟ ಗಣೇಶನು ಶಿವಾಜಿಮಹಾರಾಜರ ಶರೀರದ ರೂಪವನ್ನು ಹೊಂದಿದ ಗಣೇಶನು ಹಳದಿ ಪ್ಯಾಂಟ್, ಮಹಾರಾಜರ ಪಾದರಕ್ಷೆಯನ್ನು ಹೊಂದಿರುವುದಾಗಿದೆ. ಬುಜಕೀರ್ತಿಯಿಂದ ಹಳದಿ ಬಟ್ಟೆಯು ನಡುವಿನಲ್ಲಿ ಕಟ್ಟಿದ ಗಿಳಿಹಸಿರು, ತಿಳಿಗುಲಾಬಿ ಬಟ್ಟೆಯಲ್ಲಿ ಖಡ್ಗ ಇರಿಸುವ ಕವಚವನ್ನು ಸಿಕ್ಕಿಸಲಾಗಿದೆ. ಕೆಳಭಾಗದಲ್ಲಿ ಮೂಷಿಕವಿದ್ದು ಬೂದು ಕೆಂಪು, ಹಳದಿ ವರ್ಣದಲ್ಲಿ ರಚಿತವಾಗಿದೆ. ಹಿನ್ನೆಲೆಯಲ್ಲಿ ದಟ್ಟ ನೀಲಿ ಬಟ್ಟೆ ಇಳಿಬಿಟ್ಟು ಕಲಾವಿದ ಈ ಶಿವಾಜಿ ಶರೀರದ ಗಣೇಶನು ಎದ್ದು ಬರುವ ಕಲ್ಪನೆ ತಂದಿದ್ದಾನೆ.

೩೬. ತಂಬಂಡ ವಿಜಯ ಪೊಣಚ್ಚ : ಚರಿತ್ರೆ  ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೦೪ ಪು. ೬೮೧  ಕನ್ನಡ ವಿಶ್ವವಿದ್ಯಾಲಯ ೨೦೦೧



೧. ಈಶ್ವರ ಗಣೇಶ



೨. ಗೌರಿ ಗಣೇಶ



೩. ಶಿವಾಜಿ ಗಣೇಶ



೪. ಗಣಪತಿ

### ೪. ಗಣಪತಿ

ಅಸುರೇದ್ರನೆಂಬ ರಕ್ಕಸನಿಗೆ ಮಗಧಮುನಿಯ ಕೃಪೆಯಿಂದ ಗಜಮುಖನೆಂಬ ಮಗ ಹುಟ್ಟಿದ ಮಗನ ತಪಸ್ಸಿಗೆ ಮೆಚ್ಚಿ ಶಿವ ವರವಿತ್ತ ದೇವತೆಗಳೆಲ್ಲ ಅವನನ್ನು ಓಲೈಸಬೇಕಾಯಿತು. ಅವರು ಶಿವನಲ್ಲಿ ದೂರಲು, ಆತ ಓಂಕಾರವನ್ನು ನೋಡಿದಾಗ ಆದರಿಂದ ಗಣಪತಿ ಹುಟ್ಟಿಬಂದ ಆ ಗಣಪತಿ ಗಜಮುಖನನ್ನು ಸಂಹರಿಸಿದ.[೩೭] ಇಲ್ಲಿ ಕಂಡು ಬರುವ ಗಣಪತಿಯು ಸುಂದರವಾಗಿದ್ದು ನಾಲ್ಕು ಕೈಗಳನ್ನು ಹೊಂದಿದೆ. ಗಣಪತಿಯ ಮೈಬಣ್ಣವಾಗಿ ತೆಳುಗುಲಾಬಿ ವರ್ಣಬಳಸಲಾಗಿದ್ದು ಇದು ನೈಜತೆಗೆ ಹತ್ತಿರವಾಗಿದೆ. ಬಾಗಿದ ಹುಬ್ಬು ಚಿಕ್ಕ ಚಿಕ್ಕದಾದ ಕಣ್ಣು ಕಪ್ಪು ಬಣ್ಣದಿಂದ ಮೂಡಿಬಂದಿವೆ. ಕೊರಳಲ್ಲಿ ಕೈಗಳಲ್ಲಿ ರುದ್ರಾಕ್ಷಿ ಧರಿಸಿದ್ದು ಹಣೆಯ ಮೇಲಿಂದ ಸೊಂಡಿಲು ಕೆಳಭಾಗದವರೆಗೂ  ನಾಮವನ್ನು ಎಳೆಯಲಾಗಿದೆ. ಈ ಗಣಪತಿಯು ಕಟ್ಟೆಯಂತ್ತಿರುವ ಪೀಠದ ಮೇಲೆ ಕುಳಿತಿದ್ದು ಎಡಗಾಲನ್ನು ಕೆಳಕ್ಕೆ ಡೊಂಕಿಸಿ ಇಳಬಿಡಲಾಗಿದೆ. ಬಲಗಾಲನ್ನು ಮಡಚಿ ಪೀಠದ ಮೇಲೆ ಇಟ್ಟಿದ್ದು, ಕೇಸರಿ ವರ್ಣದ ಪಂಚೆರಚಿತವಾಗಿದೆ. ನೋಡುವುದಕ್ಕೆ ಪೈಬರ್ ಮಾಧ್ಯಮದಲ್ಲಿ ರಚಿತವಾಗಿ  ಕಾಣುವಹಾಗಿದೆ. ಬಲಗಾಲಿನ ಎದುರಿಗೆ ಪುಟ್ಟಗಣಪತಿಯೊಂದು ಇದು ವಿಸರ್ಜನೆಯ ದಿನದೆಂದು ವಿಸರ್ಜಿಸಲು ತಯಾರು ಮಾಡಿರುವ ಹಾಗೇ ಕಾಣಿಸುತ್ತದೆ. ಈ ಗಣೇಶನ ಎದುರಿಗೆ ಗ್ರಂಥವು ಕಂಡುಬಂದು ಇದು ವಿಧ್ಯಾದೇವತೆ ಎಂದು ಭಾಸವಾಗುತ್ತದೆ. ಇಲ್ಲಿ ಕಟ್ಟೆಗೆ ನೀಲಿ ಬಣ್ಣ ಬಳೆಯಲಾಗಿದೆ. ಕೆಳಭಾಗದಲ್ಲಿ ಹಸಿರು ಬಣ್ಣದ ಹಲಗೆಯನ್ನು ಹಾಕಿದ್ದಾಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ. ಈ ಗಣಪತಿಯ ಜುಟ್ಟನ್ನು ಕಟ್ಟಿದ್ದು ಕಂಡುಬಂದ ವಿಶೇಷವಾಗಿದೆ.



### ೫. ಗಣೇಶ

ಮೂಲದಲ್ಲಿ ಈತ ದ್ರಾವಿಡ ದೇವತೆ. ಈಗ ಸಾರ್ವಜನಿಕವಾಗಿ ಎಲ್ಲರೂ ಇವನನ್ನು ಪೂಜಿಸುವರು ವಿಧ್ಯಾದೇವತೆಯಾದ ಈತನನ್ನು ಗಣಗಳ ಪತಿ, ವಿಘ್ನವಿನಾಶಕ. ವಿಘ್ನನಿವಾರಕ, ವಿನಾಯಕ, ಜನನಾಯಕ ಎಂದೆಲ್ಲಾ ಕರೆಯುತ್ತಾರೆ. ಸುಣ್ಣ-ಬಣ್ಣ ಮಿಶ್ರತ ಜೇಡಿಮಣ್ಣಿನಿಂದ ಇವನ ಮೂರ್ತಿಯನ್ನು ಮಾಡುತ್ತಾರೆ. ಜನರ ಅಭಿರುಚಿ, ಬೇಡಿಕೆಗನುಗುಣವಾಗಿ ಇವನ ಸ್ವರೂಪ ಭಿನ್ನವಾಗುತ್ತಾ ಬಂದಿದೆ.[೩೮] ಆದರೆ ಇಲ್ಲಿಯ ಗಣೇಶನು ಕಪ್ಪು ಬಣ್ಣದಲ್ಲಿ ಇದ್ದು ಇದು ನೋಡುವುದಕ್ಕೆ ಕಲ್ಲು ಮಾಧ್ಯಮದ ಹಾಗೇ ಭಾಸವಾಗುತ್ತದೆ. ಆಭರಣಗಳಲ್ಲಿ ಒರಟು ಒರಟಾಗಿ ಹಾಕಿದ ಉಳಿಗಳ ಕಚ್ಚುಗಳು ಆಭರಣಗಳಿಗೆ ವಿಶೇಷತೆ ಎನಿಸಿವೆ. ಕಣ್ಣು, ಮತ್ತು ಹುಬ್ಬು, ಕಿವಿಗಳಲ್ಲಿ ಸೂಕ್ಷ್ಮವಾದ ಬಿಳಿವರ್ಣದಿಂದ ಕೂಡಿದ ರೇಖಾವಿನ್ಯಾಸ ಕಂಡುಬರುತ್ತದೆ. ಹಿನ್ನೆಲೆಯಲ್ಲಿ ಬಿಳಿವರ್ಣದ ವೃತಾಕಾರವಿದ್ದು ತಿಳಿಗುಲಾಬಿ ವರ್ಣದ ಮುಂದೆ ನಿಂತ ಗಣೇಶನ ಶಿಲ್ಪವಾಗಿದೆ. ಈ ಶಿಲ್ಪಕ್ಕೆ ಕಲಾವಿದರೇ ಹೇಳುವ ಹಾಗೆ ಹಂಪೆಯ ಸಾಸಿವೆಕಾಳು ಗಣೇಶನ ಮಾದರಿ ಎನ್ನಬಹುದು ಎಂದು ಹೇಳುತ್ತಾರೆ.

### ೬. ಗಣೇಶ

ಶಿವ ಮತ್ತು ಪಾರ್ವತಿಯರು ಇಲ್ಲಿ ಶಿವನು ಗಂಡಾನೆಯಾಗಿ ಪಾರ್ವತಿ ಹೆಣ್ಣಾನೆಯಾಗಿ ವೇಷ ಬದಲಿಸಿಕೊಂಡರು. ಪಾರ್ವತಿಯು ಆನೆಯ ರೂಪದ ಒಬ್ಬ ಮಗನಿಗೆ ಜನ್ಮನೀಡಿದಳು ಆ ಮಗುವಿಗೆ ಗಣಪತಿ ಎಂದು ನಾಮಕರಣ ಮಾಡಲಾಯಿತು. ಪಾರ್ವತಿಯ ದೇಹದಲ್ಲಿ ಉಳಿದಿದ್ದ ಹೊಟ್ಟನ್ನೆಲ್ಲ ಒಟ್ಟುಗೂಡಿಸಿ ಎಣ್ಣೆಯೊಂದಿಗೆ ಬೆರೆಸಿ ಮನುಷ್ಯಾಕೃತಿ ರೂಪಸಿದಳು. ಅದರ ಮೇಲೆ ಪವಿತ್ರ ಗಂಗಾಜಲ ಚಿಮುಕಿಸಿ ಜೀವ ತುಂಬಿದಳು ಆ ಹುಡುಗನಿಗೆ ಗಣೇಶ ಎಂದು ಕರೆದಳು. ತನ್ನ ಸ್ನಾನದ ಕೋಣೆಗೆ ಕಾವಲುಗಾರನಾಗಿ ನಿಲ್ಲಿಸಿದಳು ಶಿವನು ಅಲ್ಲಿಗೆ ಪ್ರವೇಶಿಸಿದಾಗ ಗಣೇಶ ಅವನನ್ನು ತಡೆದನು ಕೋಪಗೊಂಡ ಶಿವನು ಗಣೇಶನ ತಲೆಯನ್ನು ಕತ್ತರಿಸಿದನು ಪಾರ್ವತಿಯು ಶೋಕಾನ್ವಿತಳಾದಳು. ಪಾರ್ವತಿಯನ್ನು ಸಮಾಧಾನಪಡಿಸಲು ಶಿವನು ಗಣೇಶನಿಗೆ ಬೇರೊಂದು ತಲೆಯನ್ನು ಕಡಿದು ತರುವಂತೆ ದೂತರಿಗೆ ಆಜ್ಞೆ ಮಾಡಿದನು.[೩೯] ಧೂತರಿಗೆ ಮೊದಲು ಕಂಡಿದ್ದು

---

೩೭. ತ.ಸು.ಶಾಮರಾಯ: ಶಿವಶರಣ ಕಥಾರತ್ನಕೋಶ ಪು. ೧೮೯ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೩೮. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು  ವಿಶ್ವಕೋಶ ೨ ಪು. ೨೦೦  ಕನ್ನಡ ವಿಶ್ವವಿದ್ಯಾಲಯ ೨೦೦೦

೩೯. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೧ ಪು.೬೧೯ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಆನೆ ಆನೆಯ ತಲೆಯನ್ನು ತಂದು ಗಣಪತಿಯ ಭುಜದ ಮೇಲೆ ಇಟ್ಟರು. ಗಣಪತಿಯು ಅಂದಿನಿಂದ ಗಜಾನನ ಎನಿಸಿಕೊಂಡನು. ಮುಂದೆ ಗಜಮುಖನಾಗಿ ವಿಘ್ನ ವಿನಾಶಕನಾಗಿ ಹಿಂದೂ ಜನಪ್ರಿಯ ದೇವರುಗಳಾಗಿ ಪೂಜಿಸಲ್ಪಡುತ್ತಾನೆ. ಗಣೇಶನು ವಿದ್ಯೆ, ಬುದ್ಧಿ ಮತ್ತು ವಿವೇಕಗಳ ದೇವತೆ. ಒಳ್ಳೆಯ ಲಿಪಿಕಾರ, ಧರ್ಮಶಾಸ್ತ್ರಗಳನ್ನು ಕಲಿತವನ್ನು ಈ ಕಾರಣಗಳಿಂದ ಅವನ ಹೆಸರು ಲೆಕ್ಕದ ಪುಸ್ತಕದ ಪ್ರಥಮ ಪುಟದಲ್ಲಿ ಬರೆಯುವುದಾಗಿದೆ.

ಗಣೇಶನ ಉಬ್ಬು ಹೊಟ್ಟೆಯ, ಹಳದಿ ಚರ್ಮದ ನಾಲ್ಕು ಕೈ, ಏಕದಂತ ಆನೆಯ ತಲೆ, ದೃಡಕಾಯ ದೇವತೆ ಕೈಯಲ್ಲಿ ಶಂಖ, ಚಕ್ರ, ಗಧೆ, ಮತ್ತು ಪದ್ಮಗಳನ್ನು ಹಿಡಿದು ಮೂಷಿಕ ವಾಹನವಾಗಿ ಸಂಚರಿಸುತ್ತಾನೆ. ಶಿವನಿಗೆ ಸಂಬಂದಪಟ್ಟಂತೆ ದೇವತೆಗಳಲ್ಲಿ ಗಣಪತಿಯು ಪ್ರಮುಖವಾದ ಸ್ಥಾನವನ್ನಲಂಕರಿಸುವನು. ಭರತಖಂಡದಲ್ಲಿ ಗಣಪತಿಯ ಪೂಜೆಯೂ ಕ್ರಿ.ಶ.ಆರನೆಯ ಶತಮಾನದಿಂದ ಬಳಕೆಯಲ್ಲಿದೆ.[೪೦] ಗಣಪತಿಯ ಮೂರ್ತಿಗಳನ್ನು ಇಂದು ಹಂಪೆಯ ಹೇಮಕೂಟದಲ್ಲಿ ಕಂಡುಬಂದಿದ್ದು ಇದು ವಿಜಯನಗರ ಕಾಲದಲ್ಲಿ ರಚನೆಯಾಗಿ ಪೂಜಿಸಲ್ಪಡುತ್ತದೆ. ಕೋಟೆಯ ಹೊರದ್ವಾರದಲ್ಲಿಯೂ ಪ್ರವೇಶ ದ್ವಾರ, ಸಾಮಾನ್ಯವಾಗಿ ಎಡಕ್ಕೂ ಬಲಕ್ಕೂ ತಿರುಗಿಕೊಂಡಿರುವ ಗಣಪತಿಯ ವಿಗ್ರಹಗಳು ಬಹುಮುಖ್ಯವಾದವು ಗಣಪತಿಯ ಬೃಹದಾಕಾರದ ಉದರದಲ್ಲಿ ಬ್ರಹ್ಮಾಂಡವೇ ಅಡಗಿದೆ. ಎಂದು ನಂಬಲಾಗಿದೆ. ದೇವತೆಯಾಗಿ ಗಣೇಶನ ಪ್ರಾಮುಖ್ಯತೆಯನ್ನು ಮೊದಲಿಗೆ ಪುರಾಣಗಳಲ್ಲಿ ಕಾಣುತ್ತೇವೆ. ಇಲಿಯೊಂದಿಗೆ ಆತನ ಸಂಬಂಧ ಆತನ ಉಗಮವನ್ನು ಸೂಚಿಸುತ್ತದೆ. ವಿದ್ವಾಂಸರು ಇದನ್ನು ನಿರಾಕರಿಸಿ ಪುರೋಹಿತರ ವರ್ಗದಲ್ಲಿ ಉಗಮಿಸಿದನು ಎಂದು ಪರಿಗಣಿಸುತ್ತಾರೆ. ಇಲಿಗಳ ಪಾವಿತ್ರ್ಯದ ಬಗೆಗೆ ನಂಬಿಕೆ ಬೆಳೆದು ಅವುಗಳನ್ನು ವಿನಾಶಗೊಳಿಸುವುದು ಕಷ್ಟದ ಸಮಸ್ಯೆಯಾಗಿ ಪರಿಣಮಿಸುತ್ತದೆ. .

ಈ ಕಲಾಕೃತಿಯಲ್ಲಿ ಗಣೇಶನ ಮೈಬಣ್ಣ ತಿಳಿ ಕೇಸರಿ ವರ್ಣವಾಗಿದ್ದು ಬಂಗಾರ ವರ್ಣದ ಕಿರೀಟದಾರಿಯಾಗಿದ್ದಾನೆ. ವರ ಹಸ್ತದೊಂದಿಗೆ ಗಧೆ, ತ್ರಿಶೂಲ ಹೊಂದಿದ್ದಾನೆ. ಕಾಮನ ಬಿಲ್ಲಿನಾಕಾರದ ಕಪ್ಪು ಬಣ್ಣದಲ್ಲಿ ರಚನೆಯ ಹುಬ್ಬು, ಸಣ್ಣದಾಗಿ ಕಾಣುವ ಕಣ್ಣು ನೋಡುವುದಕ್ಕೆ ವರ ನೀಡುವಹಾಗೇ ಕಲಾವಿದ ತನ್ನ ಕಲ್ಪನೆಯ ಮೂಲಕ ತನ್ನ ಚಾತುರ್ಯವನ್ನು ವ್ಯಕ್ತಪಡಿಸಿದ್ದಾನೆ. ಕಿವಿಗಳಲ್ಲಿ ರಿಂಗೂ ಸಹ ಕಂಡುಬರುತ್ತದೆ. ಹಣೆಯ ಮೇಲೆ ನಾಮ ಬಂಗಾರದ ಆಭರಣಗಳು ಕಂಡುಬರುತ್ತವೆ. ಬುಜಗಳ ಮೇಲಿಂದ ಕೆಳಗೆ ಬಿದ್ದ ಕಪ್ಪು ವಸ್ತ್ರ ಬಿಳಿ ಪಂಚೆಯನ್ನು ಅದರ ಮೇಲ್ಭಾಗದಲ್ಲಿ ಹಸಿರು ಮಿಶ್ರತ ಬಿಳಿ ವರ್ಣದ ವಸ್ತ್ರವನ್ನು ಧರಿಸಿದ್ದಾನೆ. ಬಲಗಾಲಿನ ಹತ್ತಿರ ನಾಗರಾಜ ಬೂದು ಬಿಳಿ ಕೆಂಪು ವರ್ಣಬಳಸಲಾಗಿದೆ. ಎಡಗಾಲಿನ ಹತ್ತಿರ ಕಪ್ಪು ವರ್ಣದಿಂದ ಇಲಿಯೂ ಕಾಲಲ್ಲಿ ಬಿಳಿವರ್ಣದ ಹಣ್ಣು ಅಂದರೆ ಬಳಲುಕಾಯಿ ಆಕಾರವಾಗಿ ಗೋಚರಿಸುತ್ತದೆ. ಹಿನ್ನೆಲೆಯಾಗಿ ನೀಲಿ ಬೆಟ್ಟ, ಹಸಿರು ಮರಗಳು ಜಾಂಬಳಿ ಆಕಾಶ ಕಪ್ಪು ಮಿಶ್ರಿತ ನೀಲಿ ಬಣ್ಣದಲ್ಲಿ ಸಮುದ್ರವನ್ನು ರಚಿಸಿದ್ದಾರೆ.

**೭. ಮಣ್ಣೆತ್ತು**

ಕಾರ ಹುಣ್ಣಿಮೆಯಲ್ಲಿ ದೊಡ್ಡವರು ಜೀವಂತ ಎತ್ತುಗಳನ್ನು ತೆಗೆದುಕೊಂಡು ಮೆರೆಸುತ್ತಾ, ಹಾರಿಸುತ್ತಾ ಕರಿ ಕಡದರೆ ಮಣ್ಣೆತ್ತಿನ ಅಮವಾಸೆ ದಿವಸ ಹುಡುಗರು ಹಳ್ಳದಲ್ಲಿ ಇಲ್ಲವೆ ಹೊಲದಲ್ಲಿ ಸಿಗುವ ಜಿಗುಟು ಮಣ್ಣು ತೆಗೆದುಕೊಂಡು ಮಣ್ಣೆತ್ತುಗಳನ್ನು ಮಾಡುತ್ತಾರೆ. ಮಣ್ಣೆತ್ತುಗಳು ಸಣ್ಣವೂ, ದೊಡ್ಡವು ಇರುತ್ತವೆ. ಈ ಮಣ್ಣೆತ್ತುಗಳನ್ನು ಹಿರಿಯರು ಮಾಡಿಕೊಡುವರು. ಅವುಗಳನ್ನು ಬಣ್ಣ ಬಣ್ಣಗಳಿಂದ ಬ್ಯಾಗಡಿಗಳಿಂದ ಸಿಂಗರಿಸುವರು ಸಂಜೆಯವರೆಗೆ ಊರು ತುಂಬ ಮರೆಸುತ್ತಾ, ಸಂಜೆ ಹೋತ್ತು ಕರಿ ಕಡಿದು ಆ ಮಣ್ಣೆತ್ತುಗಳನ್ನು ತಂದು ಜಗಲಿಯ ಮೇಲೆ ಇಟ್ಟು ಪೂಜಿಸುವರು.[೪೧] ಇಲ್ಲಿ ಕಾಣಬರುವ ಮಣ್ಣೆತ್ತು ಒರಟು ರೇಖೆಯಿಂದ ಕೂಡಿದ್ದು ಕೆಂಪು, ಹಳದಿ ಎರಡೆ ವರ್ಣ ಬಳಸಲಾಗಿದೆ. ಇದು ದೇವಾಲಯ ಮುಂದೆ ಕುಳಿತಿರುವ ಸಾಮಾನ್ಯ ನಂದಿಯ ಭಂಗಿಯಲ್ಲಿಯೇ ಕಂಡು ಬರುತ್ತದೆ.

---

೪೦. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೧ ಪು.೬೨೧ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೪೧. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೨೦೦ ಕನ್ನಡ ವಿಶ್ವವಿದ್ಯಾಲಯ ೨೦೦೦



೫. ಗಣೇಶ



೬. ಗಣೇಶ



೭. ಮಣ್ಣೆತ್ತು



೮. ಲಿಂಗು





೯. ಮಣ್ಣಿನ ವಿವಿಧ ಮೂರ್ತಿಗಳು

### ೮. ಲಿಂಗು

ಭಾರತದಲ್ಲಿ ಪುರುಷ ಲೈಂಗಿಕ ಅಂಗವನ್ನು ಲಿಂಗು ಎಂದು ಕರೆಯುತ್ತಾರೆ. ಶಿಶ್ನದ ಈ ಸಂಕೇತವನ್ನು ಭಾರತೀಯ ಕಲೆ ಬಹು ಪ್ರಾಚೀನ ಕಾಲದಿಂದಲೇ ಬಳಸಿಕೊಂಡಿದೆ. (ಕ್ರಿ.ಪೂ. ಮೂರನೆ ಸಹಸ್ರ ವರ್ಷದ ಸಿಂಧೂ ಕಣಿವೆಯ ನಾಗರೀಕತೆಯ) ಮತ್ತು ಇಂದಿಗೂ ಇದೂ ಹಿಂದೂ ದೇವಾಲಯಗಳಲ್ಲಿ ಅತ್ಯಂತ ಸಾಮಾನ್ಯವಾದ ಪೂಜಾವಸ್ತುವಾಗಿದೆ.

ಲಿಂಗಕ್ಕೆ ಶಿವನ ಸಂಬಂಧ ಕಲ್ಪಸುತ್ತಾರೆ. ಇದು ದೇವರ ಪುರುಷ ಸೃಷ್ಟಿ ಶಕ್ತಿಯನ್ನು ಆ ಮೂಲಕ ವಿಶ್ವದ ಉತ್ಪತ್ತಿ ಶಕ್ತಿಯನ್ನು ಸಂಕೇತಿಸುತ್ತದೆ. ಇದನ್ನು ದೇವರ ಸ್ಥಿರವಾದ, ಮೂಲ ಭೂತವಾದ, ಅಚಲವಾದ ರೂಪ ಎಂದು ಪರಿಗಣಿಸಲಾಗುತ್ತದೆ. ಶಿವದೇವಾಲಯಗಳ ಗರ್ಭಗುಡಿಯಲ್ಲಿ ಶಿಶ್ನಸ್ತಂಭ ಅಥವಾ ಕಂಭವನ್ನು ಪೀಠದ ಮೇಲೆ ಸ್ಥಾಪಿಸಲಾಗುತ್ತದೆ.[೪೨] ಆದರೆ ಇಲ್ಲಿ ಕಾಣಬರುವ ಲಿಂಗವು ಚಿಕ್ಕದಾಗಿದ್ದು ಕಂಡುಬರುತ್ತದೆ. ಕಲಾವಿದನ ಕಲ್ಪನೆಯಲ್ಲಿ ಉಬ್ಬು ತಗ್ಗುಗಳನ್ನು ರಚಿಸಿರುವುದು ಕಂಡುಬರುತ್ತದೆ.

### ೯. ಮಣ್ಣಿನಲ್ಲಿ ವಿವಿಧ ಕಲಾಕೃತಿಗಳು

ಇಲ್ಲಿ ಕಲಾವಿದರ ಮನೆಯೇ ಒಂದು ಆರ್ಟ್‌ಗ್ಯಾಲರಿ ಎನ್ನುವ ಹಾಗೆ ಚಿಕ್ಕ ಚಿಕ್ಕ ಮೂರ್ತಿಶಿಲ್ಪಗಳನ್ನು ತಯಾರಿಸಿ ಇಟ್ಟಿರುವುದು ಕಂಡುಬರುತ್ತದೆ. ಇಲ್ಲಿಯು ಈ ಶಿಲ್ಪಗಳು ಮಣ್ಣೆತ್ತು, ಗೌರಿ, ನಾಗರ ಪಂಚಮಿಯ ನಾಗಪ್ಪ ದೇವರು, ಈಶ್ವರ, ಲಿಂಗು, ಕೃಷ್ಣ, ಬಲರಾಮ, ಮೂಷಿಕ ಇತ್ಯಾದಿ ಮೂರ್ತಿಗಳು ಪೂಜೆಗೊಳ್ಳುವುದಕ್ಕೆ ಸಿದ್ದವಾಗಿವೆ. ಈ ಎಲ್ಲಾ ಕಲಾಕೃತಿಗಳಲ್ಲಿ ಹೆಚ್ಚಾಗಿ ಒರಟು ರೇಖೆಗಳು ಪ್ರಮುಖ ಪಾತ್ರವಹಿಸಿವೆ. ಚುಕ್ಕೆಗಳು, ರೇಖೆಗಳು, ಹೆಚ್ಚಾಗಿ ಹಳದಿ, ಕೆಂಪು, ಬಿಳಿ ವರ್ಣವನ್ನೇ ಬಳಸಿದ್ದು ಕಂಡುಬರುತ್ತದೆ. ಈ ಶಿಲ್ಪಗಳು ಗೌರಿ ಹುಣ್ಣಿಮೆ, ಕಾರಹುಣ್ಣಿಮೆ, ಮಣ್ಣೆತ್ತಿನ ಅಮವಾಸೆ ಮುಂತಾದ ಸಂದರ್ಭದಲ್ಲಿ ಪೂಜೆಗೊಳ್ಳುತ್ತವೆ.

### ೧೦. ನಾಗರ ಮೂರ್ತಿಗಳು

ವಿಶೇಷವಾಗಿ ನಾಗರ ಪಂಚಮಿಯೆಂದು ಹೆಚ್ಚಾಗಿ ಪೂಜೆಗೊಳ್ಳುವುದಾಗಿದೆ. ಇದು ಹೆಣ್ಣು ಮಕ್ಕಳ ಹಬ್ಬ, ನಾಗಪ್ಪ ದೇವರು ಹೆಣ್ಣು ಮಕ್ಕಳ ಆರಾಧ್ಯ ಧೈವ ಫಲಸಂತಾನ ಸುಖ ಸಮೃದ್ಧಿ ಸೌಭಾಗ್ಯ ನೀಡುವ ದೈವ ಇದು ಅದಕ್ಕಾಗಿ ಸ್ತ್ರೀ ಬಳಗವೆಲ್ಲ ಅವನನ್ನು ಆರಾಧಿಸುತ್ತಾರೆ. ಅವನ ಗಾಥಾ ಹಾಡುತ್ತಾ ಅವನ ಮೂರ್ತಿ ಮಾಡಿ ಹಾಲು ಎರೆಯುತ್ತಾರೆ.

ಎರೆಮಣ್ಣಿನಿಂದ ಕುಂಬಾರರು ನಾಗಪ್ಪ ದೇವರು ಮೂರ್ತಿಯನ್ನು ಮಾಡುತ್ತಾರೆ. ಜನ ತಮಗೆ ಬೇಕಾದಷ್ಟು ಎತ್ತರ ಮತ್ತು ಅಗಲವಾದ ಮೂರ್ತಿಯನ್ನು ಹೇಳಿ ಮಾಡಿಸುವರು ಆ ದಿವಸ ಲಗ್ನವಾದ ನಾರಿಯರೆಲ್ಲ ಸೇರಿ ನಾಗಪ್ಪ ದೇವರ ಪದ ಹಾಡುತ್ತಾ ಅವನಿಗೆ ಹಾಲೇರೆದು ನೈವೇದ್ಯ ಅರ್ಪಿಸಿ ಜೋಕಾಲಿ ಆಡುವರು ಬಡವರು ಮಣ್ಣಿನ ನಾಗಪ್ಪನ್ನು ಮಾಡಿಸಿದರೆ ಶ್ರೀಮಂತರು ಬೆಳ್ಳಿ ಬಂಗಾರ ನಾಗಪ್ಪನನ್ನು ಮಾಡಿಸಿ ಆರಾಧಿಸುವರು.[೪೩] ಈ ನಾಗರ ವಿಷಪೂರಿತವಾದುದಾಗಿದೆ. ಇದನ್ನು ತಿಳಿದು ತಿಳಿದೂ ಯಾರೂ ಅದನ್ನು ಕೊಲ್ಲುವದಿಲ್ಲ ಆಕಸ್ಮಾತಾಗಿ ಅದನ್ನು ಕೊಂದರೆ ಅದರ ದೇಹವನ್ನು ಮಾನವನ ದೇಹದಂತೆ ಸಂಸ್ಕಾರಗಳೊಂದಿಗೆ ಸುಡುತ್ತಾರೆ. ಮಕ್ಕಳಿಲ್ಲದ ಹೆಂಗಸರು ಒಂದು ವರ್ಷ ಅಥವಾ ಮೂರು ವರ್ಷಗಳವರೆಗೆ ಪ್ರತಿತಿಂಗಳ ಐದನೇ ದಿನದಂದು ಹೂವು, ನೀರು ಹಾಲಿನಿಂದ ಹಾವನ್ನು ಪೂಜಿಸುತ್ತಾರೆ. ನಾಗರ ಹಾವು ಸಾವಿರ ವರ್ಷಗಳವರೆಗೆ ಜೀವಿಸುತ್ತದೆ ಎಂದು ಕೊಡಗಿನವರು ಭಾವಿಸುತ್ತಾರೆ.[೪೪] ಇಲ್ಲಿ ರಚಿತವಾದ ನಾಗಪ್ಪ ದೇವರು ಚಿಕ್ಕದು ಇನ್ನೂ ರಚನಾ ಹಂತದಲ್ಲಿಯೇ ಇದೇ ಮಧ್ಯದಲ್ಲಿಯದು ನೀಲಿಬಣ್ಣ ಹೊಂದಿ ಬಿಳಿವರ್ಣದ ರೇಖೆಯನ್ನು ಒರಟು

---

೪೨. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ ಕೋಶ ಸಂಪುಟ ೦೨ ಪು ೧೭೬೨ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೪೩. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೨೦೦ ಕನ್ನಡ ವಿಶ್ವವಿದ್ಯಾಲಯ ೨೦೦೦

೪೪. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು ೧೧೫೬ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಒರಟಾಗಿ ಎಳೆಯಲಾಗಿದೆ. ಕೆಂಪು ಬಿಳಿ ಚುಕ್ಕೆಗಳು ಮೂಡಿವೆ. ಇದರ ಪಕ್ಕದ ಈ ನಾಗಪ್ಪನ ಇಡಿ ದೇಹವನ್ನು ಸುರುಳಿಯಾಕರ ಸುತ್ತಿಕೊಂಡು ಕುಳಿತಿದ್ದು ಮಣ್ಣಿನ ಮೇಲೆಯೇ ನೇರವಾಗಿ ಬಣ್ಣ ಬಣ್ಣದ ರೇಖೆಗಳು ಮೂಡಿವೆ. ಬಿಳಿ ಕೆಂಪು ಹಳದಿ ಪ್ರಮುಖ ವರ್ಣವಾಗಿವೆ. ಇಲ್ಲಿ ನಾಲಿಗೆ ಹೊರಚಾಚಿದ್ದು ಅಲ್ಲದೇ ಎರಡಕ್ಕಿಂತ ಎತ್ತರವಾಗಿ ಕಂಡುಬರುತ್ತದೆ.

### ೧೧. ಗೌರಿ

ಈಕೆ ಹೆಣ್ಣುಮಕ್ಕಳ ದೇವತೆಯಾಗಿದ್ದಾಳೆ ದೀಪಾವಳಿ ಹಬ್ಬದ ದಿವಸ ಪ್ರತಿಕೇರಿಯ ಹೆಣ್ಣ ಮಕ್ಕಳು ಸೇರಿ ಊರಿನ ಬಾವಿಗೆ ಹೋಗಿ ಪೂಜೆ ಮಾಡಿಕೊಂಡು ಹಾಡುತ್ತಾ ಬಂದು ತಮ್ಮ ಕೇರಿಯ ಅಂಗಳದಲ್ಲಿ ಗೌರಮ್ಮನನ್ನು ಸ್ಥಾಪಿಸುತ್ತಾರೆ. ಅಂದಿನಿಂದ ಗೌರಿ ಹುಣ್ಣುಮೆ ಬರುವರೆಗೆ ಹೆಣ್ಣು ಮಕ್ಕಳು ಪ್ರತಿದಿನ ಗೌರಮ್ಮನಿಗೆ ದೀಪ, ಧೂಪಗಳಿಂದ ಪೂಜಿಸುವರು.

ಗೌರಮ್ಮನ ಮೂರ್ತಿಯನ್ನು ಕಟ್ಟಿಗೆಯಿಂದ ಬಡಿಗೇರರು ಮಾಡುವವರು ಮಣ್ಣಿನಲ್ಲಿ ಕುಂಬಾರರು ಮಾಡುವರು ಆದರೆ ಇಲ್ಲಿ ಸಾವುಕಾರ ಮಾಡುವುದು ವಿಶೇಷ ಗೌರಮ್ಮನ ಮೂರ್ತಿಯನ್ನು ಅಂದಗೊಳಿಸಲು ಸುಣ್ಣ ಬಣ್ಣವನ್ನು ಜೇಡಿಯ ಮಣ್ಣಿನಲ್ಲಿ ಮಿಶ್ರಣ ಮಾಡುತ್ತಾರೆ ಮಣ್ಣಿನ ಮೂರ್ತಿಯನ್ನು ಮೂರಡಿ ಎತ್ತರ ಒಂದಡಿ ಅಗಲವಿರವುದು. ಈ ಮೂರ್ತಿಯನ್ನು ಆಭರಣಗಳಿಂದ ಸಿಂಗರಿಸಿ ದಂಡೆಕಟ್ಟಿ ಚಂದ್ರಕುಂಕಮ ಹಚ್ಚಿ ಆರಾಧಿಸುವರು. ಗೌರಿಹುಣ್ಣಿಮೆ ಮುಗಿದ ಬಳಿಕವೂ ಬರುವ ವರ್ಷದವರೆಗೆ ಆ ಮೂರ್ತಿಯನ್ನು ಹಾಗೆ ಪೂಜಿಸುತ್ತಾರೆ ಈಕೆ ಹೆಣ್ಣು ಮಕ್ಕಳಿಗೆ ಸುಖಸಂಪತ್ತು, ಮುತ್ತೈದೆತನ, ಫಲಸಂತಾನ ನೀಡುವ ದೇವತೆ ಎಂಬುದು ಜನಪದರ ನಂಬಿಕೆ.[೪೫] ಇಲ್ಲಿಯೂ ಒರಟು ಒರಟಾಗಿ ಚಿತ್ರಿಸಿರುವ ರೇಖೆಗಳು ಕಂಡುಬರುತ್ತವೆ. ಇಲ್ಲಿ ಹಳದಿ ಹಿನ್ನೆಲೆಯಲ್ಲಿ ಕೆಂಪು ವರ್ಣದ ರೇಖೆಯನ್ನು ಎಳೆಯಲಾಗಿದೆ. ಅಲ್ಲಲ್ಲಿ ಬಂಗಾರ ವರ್ಣದ ಚುಕ್ಕೆಗಳು ಕಂಡುಬರುತ್ತವೆ. ಎರಡು ಕಾಲುಗಳನ್ನು ಮಡಚಿ ಎದುರಿಗೆ ಕುಳಿತಿರುವ ಗೌರಿ ಇದಾಗಿದೆ.

### ೧೨. ಮೂಷಿಕ

ಪ್ರಾಚೀನ ಕಾಲದ ಒಬ್ಬವರ್ತಕ ಚತುರನಾದ ಉದ್ಯೋಗಶೀಲನು ಆದ ಒಬ್ಬವ್ಯಕ್ತಿಯ ಯಾವುದೇ ರೀತಿಯ ಬಂಡವಾಳ ವಿಲ್ಲದೆ ಹಣಗಳಿಸಬಹುದೆಂದು ತೊರಿಸುವುದಕ್ಕೆ ಕಥಾಸರಿಸ್ತಾಗರದ ಕಥಾ ಪೀಠಲಂಬಕದಲ್ಲಿ ಇವನ ಕಥೆಯನ್ನು ಹೇಳಲಾಗಿದೆ. ತನ್ನ ಉದ್ಯೋಗದಿಂದ ಒಬ್ಬ ವರ್ತಕ ಈ ಹೆಸರನ್ನು ಪಡೆದುಕೊಂಡನು ಒಬ್ಬ ನಿರ್ಗತಿಕನಾದ ಒಬ್ಬ ಬಡವ, ಶ್ರೀಮಂತ, ವರ್ತಕನೊಬ್ಬನ ಮನೆಗೆ ಹೊದನು ಆಗ ಆತ ಜಾತಿಯ ಒಬ್ಬನಿಗೆ ಬುದ್ಧಿವಾದ ಹೇಳುತ್ತಿದ್ದನು ಆ ವರ್ತಕ ನೋಡು ಇಲ್ಲಿ ಸತ್ತ ಇಲಿಯೊಂದು ಬಿದ್ದಿದೆ ಬುದ್ಧಿವಂತನಾದವನು ಇದನ್ನು ಬಂಡವಾಳವನ್ನಾಗಿ ಉಪಯೋಗಿಸಿಕೊಂಡು ಹಣಗಳಿಸಬಲ್ಲ ನಿನಗೊಸ್ಕರ ನಾನು ವ್ಯಾಪಾರಕ್ಕಾಗಿ ಬೇಕಾದಷ್ಟು ಹಣವನ್ನು ಕೊಟ್ಟೆ ಇಲಿಯೊಂದರಿಂದ ವ್ಯಾಪಾರವನ್ನು ಆರಂಭಿಸಿದ ವರ್ತಕನಿಗೆ 'ಮೂಷಿಕ' ಎಂಬ ಅಡ್ಡಹೆಸರು ಬಂತು.[೪೬]

ಇಲ್ಲಿ ಸಾಮಾನ್ಯವಾಗಿ ಮಣ್ಣಿನಿಂದ ನಿರ್ಮಿತವಾಗಿರುತ್ತದೆ. ಕಪ್ಪು-ಬೂದುಬಣ್ಣವನ್ನು ಮಾತ್ರ ಇದಕ್ಕೆ ಉಪಯೋಗಿಸುತ್ತಾರೆ. ಆದರೆ ಇಲ್ಲಿ ಬಂಗಾರದ ವರ್ಣ ಕಂಡುಬಂದಿರುವುದು ವಿಶೇಷವಾಗಿದೆ. ಇದು ಗಣೇಶನ ವಾಹನ ಗಣೇಶನನ್ನು 'ಅಖುರಥ' 'ಮೂಷಿಕರಥ'ವೆಂಬ ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. ಬಗ್ಗ (ಮಗ್ಗ) ಜನಾಂಗದವರು ಗೌರಿಹಬ್ಬದ ಮೂರನೆಯ ದಿನವನ್ನು 'ಇಲಿವಾರ' ಎಂದು ಭಾವಿಸುತ್ತಾರೆ ಬಾಗಲಕೋಟೆ ಜಿಲ್ಲೆಯ ಇಳಕಲ್ಲಿನಲ್ಲಿ ಇಲಿಪೂಜೆಹಬ್ಬ ವರ್ಷಕೊಮ್ಮೆ ನಡೆಯುತ್ತದೆ. ಇದನ್ನು ಇಲಿವಾರ ಇಲಿಯಮ್ಮನ ಹಬ್ಬ ಎನ್ನುತ್ತಾರೆ. ಇಳಕಲ್ಲಿನಲ್ಲಿ ನೇಕಾರರು, ವ್ಯಾಪಾರಿಗಳು, ಈ ಪೂಜೆಯನ್ನು ನಡೆಸಿಕೊಂಡು ಬರುವದಕ್ಕೆ ಕಾರಣ ಇವರ ಉಪಜೀವನದ ಕುಲಕಸುಬಾದ ನೇಕಾರಿಕೆಯಲ್ಲಿ ಇಲಿಗಳು ತೊಂದರೆ ಕೊಟ್ಟು ಬೆಲೆಬಾಳುವ ಸೀರೆಗಳನ್ನು

---

೪೫. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೨೦೦ ಕನ್ನಡ ವಿಶ್ವವಿದ್ಯಾಲಯ ೨೦೦೦

೪೬. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು ೧೬೪೪ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫



೧೦. ನಾಗ ಮೂರ್ತಿಗಳು



೧೧. ಗೌರಿ





೧೨. ಮೂಷಕ



೧೩. ಆನೆಗಳು

ಕಡಿದು ಹಾಳುಮಾಡುದಿರಲೆಂದು ಇಲಿಯನ್ನು ತೃಪ್ತಿಪಡಿಸುವ ಆಚರಣೆಯಿದಾಗಿದೆ. ಈ ಪರಂಪರೆ ಬಾದಾಮಿ. ಕಮತಿಗಿ ಹಾಗೂ ಕೊಪ್ಪಳದಲ್ಲಿಯೂ ನಡೆಯುತ್ತದೆ.[೪೭] ಇಲ್ಲಿ ರಚಿತವಾದ ಇಲಿಯೂ ಬಂಗಾರದ ವರ್ಣದಿಂದ ಕೂಡಿದ್ದು ಮತ್ತೊಂದು ಇನ್ನೂ ರಚನಾ ಹಂತದಲ್ಲಿಯೇ ಇದೆ.

### ೧೩. ಆನೆಗಳು

ಇಂದ್ರನ ವಾಹನವಾದ ಬಿಳಿ ಆನೆಯನ್ನು ಐರಾವತವೆಂತಲೂ ಕರೆಯುತ್ತಾರೆ ಇದು ಇಂದ್ರನ ಪಟ್ಟದಾನೆ ಭದ್ರ ಮನಸೆಂಬ ಗಜದಿಂದ ಜನಿಸಿದ್ದು, ಪೂರ್ವದಿಕ್ಕಿನಲ್ಲಿದೆ ಎಂಬ ನಂಬಿಕೆಯಿದೆ. ಮೊದಲು ಇಂದ್ರನಿಗೆ ಉಚ್ಚೈಶ್ರವಸ್ ಎಂಬ ಕುದುರೆ ವಾಹನವಾಗಿತ್ತು. ಕ್ರಮೇಣ ಸ್ಥೂಲಕಾಯನಾದ ಐರಾವತವನ್ನು ವಾಹನವನ್ನಾಗಿ ಮಾಡಿಕೊಂಡನಂತೆ. ಆನೆ ಹಯಗ್ರೀವ ಹಾಗೂ ವಸುಗಳ ವಾಹನವೂ ಆಗಿದೆ. ವಿರೂಚನ ಹಾಗೂ ಪ್ರಹ್ಲಾದನ ರಥಗಳಿಗೆ ಆನೆಗಳನ್ನು ಕಟ್ಟಲಾಗಿದೆ.

ಸಾಮಾನ್ಯವಾಗಿ ಪ್ರಾಚೀನ ದೇವಾಲಯಗಳ ದ್ವಾರಗಳಲ್ಲಿ ಬೃಹತ್ ಕಲ್ಲಿನಿಂದ ಇಲ್ಲವೇ ಲೋಹದಿಂದ ಆನೆಯ ಗಾತ್ರದಲ್ಲಿ ಶಿಲ್ಪವನ್ನು ನಿರ್ಮಿಸಿದುದ್ದು ಆ ಶಿಲ್ಪದಲ್ಲಿ ಸುಳುಹು ನಕ್ಷೆಗಳ ಅಲಂಕಾರ, ಕೊರಳಲ್ಲಿ ದೊಡ್ಡಗಾತ್ರದ ಗಂಟೆ ಆ ಗಂಟೆಯ ಮೇಲೆ ಕಲಾತ್ಮಕತೆಯ ಕುಸುರಿ ಕೆಲಸದಲ್ಲಿ ಶಿಲ್ಪಿಯ ಚಾಕಚಕ್ಯತೆಯನ್ನು ಕಾಣಬಹುದು. ಕಟ್ಟಿಗೆಯಿಂದ ನಿರ್ಮಿಸಿದ ಆನೆಗಳಿಗೆ ವರ್ಣ ವಿನ್ಯಾಸವನ್ನು ಮಾಡಿರುತ್ತಾರೆ. ಕಪ್ಪು ವರ್ಣದ ಶರೀರ ಬಿಳಿಬಣ್ಣದ ಕೋರೆಗಳಿಂದ ರಚಿತವಾಗಿರುತ್ತದೆ.[೪೮] ಇಲ್ಲಿ ಮಣ್ಣಿನಿಂದ ರಚಿತವಾದ ಆನೆಯು ನೈಜಾಕೃತಿಯಲ್ಲಿ ಮೂಡಿಬಂದಿವೆ. ಮರದ ತುಂಡುನ್ನು ಹೊತ್ತು ಸಾಗುತ್ತಿರುವ ಆನೆಗಳು ಇವಾಗಿವೆ ಇಲ್ಲಿ ಆನೆಗಳಿಗೆ ನೇರಳೆ ಬಣ್ಣ ಬಳಿದು ಕೊರೆಗೆ  ಬಿಳಿವರ್ಣ ರಚಿಸಿದ್ದು ಬಾಯಿಗೆ ಕೆಂಪನ್ನು ಹಾಕಿದ್ದು ಕಂಡುಬರುತ್ತದೆ. ಬಾಗಿದ ಹುಬ್ಬಿಗೆ ಒಂದೇ ಒಂದು ಸೂಕ್ಷ್ಮ ಕಪ್ಪು ರೇಖೆಯನ್ನು ಎಳೆಯಲಾಗಿದೆ. ಅತಿ ಚಿಕ್ಕದಾದ ಬಿಳಿ ಮತ್ತು ಕಪ್ಪು ಬಣ್ಣದಿಂದ ಕಣ್ಣನ್ನು ರಚಿಸಲಾಗಿದೆ. ಆನೆಯು ಬಲಭಾಗಕ್ಕೆ ಹೊರಟಿದ್ದು ಮತ್ತೊಂದು ಆನೆಯು ಎದುರು ಭಾಗದಲ್ಲಿ ಬರುತ್ತಿದೆ.

### ೧೪. ಕೋಣದ ಮುಖ

ಕೋಣವನ್ನು ಕಟ್ಟಿಗೆಯಲ್ಲಿ ದೇವತಾ ಮೂರ್ತಿಗಳ ಮುಂದೆ ನಿಲ್ಲಿಸುತ್ತಾರೆ. ಮೈಗೆ ಕಪ್ಪು ಬಣ್ಣ ಕೋಡುಗಳಿಗೆ ಬಿಳಿಯ ಬಣ್ಣವನ್ನು ಹಚ್ಚಿರುತ್ತಾರೆ. ನೋಡಲು ಭಯಾನಕವಾಗಿ ಕಾಣುತ್ತದೆ. ಆದರೆ ಇಲ್ಲಿ ರಚರನೆಯಾದ ಕೋಣದ ಮುಖ ಶಿಲ್ಪವು ಮಣ್ಣು ಮತ್ತು ಕಟ್ಟಿಗೆಯಿಂದ ನಿಮಾರ್ಣವಾಗಿದೆ. ಇಲ್ಲಿ ಕಲಾವಿದನು ನೈಜತೆಗೆ ಹೆಚ್ಚಿನ ಮಹತ್ವ ನೀಡಿದ್ದಾನೆ. ಮುಖ, ಮೂಗು, ಕಿವಿ, ಕತ್ತುಗಳಲ್ಲಿ ಕಂಡುಬರುವ ರೇಖೆಗಳು ಕಲಾವಿದ ತುಂಬಾ ಜಾಣ್ಮೆಯಿಂದ ರಚಿಸಿದ್ದಾನೆ. ಕೋಡುಗಳಿಗೆ ಮತ್ತು ಕಿವಿಗಳಿಗೆ ಮರದ ತುಂಡನ್ನು ಬಳಸಿಕೊಂಡಿರುವುದು ಕಾಣುತ್ತದೆ. ಇಲ್ಲಿ ಹೆಚ್ಚಾಗಿ ಕಪ್ಪು ವರ್ಣದಿಂದ ಸ್ಪ್ರೇ ಮಾಡಲಾಗಿದೆ.ಕಣ್ಣು ಮೂಗು ಬಾಯಿಗಳಿಗೆ ಕೆಂಪುವರ್ಣ ಬಳಸಲಾಗಿದ್ದು ಕೆಂಪು ಮರದ ಹಲಗೆಯ ಮೇಲೆ ಕೂಡಿಸಲಾಗಿದೆ. ನೋಡಲು ಸುಂದರವಾಗಿ ಕಾಣುವ ಕೋಣದ ಮುಖ ಶಿಲ್ಪವು ದೇವರ ಮುಂದೆ ನಿಲ್ಲಿಸಿರುತ್ತಾರೆ. ಆದರೆ ಈ ಶಿಲ್ಪದ ಮುಖದಲ್ಲಿ ಮುಗ್ಧತೆವಿದ್ದು ಸುಂದರವಾಗಿ ಕಾಣುವ ಕೃತಿಯಾಗಿದೆ. ಅಲ್ಲದೆ ಇದು ಮನೆಯ ಶೋಕೆಸ್‌ನಲ್ಲಿ ಇಡುವ ಶಿಲ್ಪವಾಗಿ ನಿಮಾರ್ಣಗೊಂಡಿದೆ.

### ೧೫. ಅಮ್ಮಾರು (ದೇವಿ)

ಆಂಧ್ರಪ್ರದೇಶ ಮತ್ತು ಮದ್ರಾಸ್‌ಗಳಂತಹ ಪ್ರದೇಶಗಳಲ್ಲಿ ಪೂಜೆಗೊಳ್ಳುವ ಈ ದೇವತೆಯನ್ನು ಅಮ್ಮಾರು ದೇಪಿಯಂದು ಕರೆಯುತ್ತಾರೆ ಈ ದೇಪಿಯು ಹುಬ್ಬಳ್ಳಿಯ ಚಿತ್ರಮಂದಿರದ ಹೊರಭಾಗದಲ್ಲಿ ಅಲಂಕಾರ ಮಾಡಿ

---

೪೭. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೨೪೨ ಕನ್ನಡ ವಿಶ್ವವಿದ್ಯಾಲಯ ೨೦೦೦
೪೮. -ಅದೇ- ಪು. ೨೪೨

ಕೂಡಿಸಿದ್ದು ಇದಕ್ಕೆ ಕಾರಣ ಅಮ್ಮಾರು ದೇವಿಯ ಚಲನಚಿತ್ರಕ್ಕೆ ಅಮ್ಮಾರು ಮೂರ್ತಿಯನ್ನು ಮೊದಲು ಪೂಜಿಸಿ ಪ್ರಸಾದ ಕೊಟ್ಟು ಚಲನಚಿತ್ರ ಪ್ರಾರಂಭಮಾಡುತ್ತಿದ್ದರು. ಈ ಹಿನ್ನಲೆಯಲ್ಲಿ ಈ ಮೂರ್ತಿಯೂ ಮಣ್ಣು ಮಾಧ್ಯಮದಿಂದ ರೂಪಿತವಾಗಿದೆ. ಅಗಲವಾದ ಬಟ್ಟಲುಕಣ್ಣು, ಕಾಮನಬಿಲ್ಲಿನಾಕಾರ ಕಪ್ಪು ಮಿಶ್ರಿತ ಹಸಿರು ಬಣ್ಣದ ಹುಬ್ಬು ಕಣ್ಣು ಮತ್ತು ಹುಬ್ಬುಗಳ ಮಧ್ಯ ಉಬ್ಬು ತಗ್ಗುಗಳನ್ನು ಕೇಸರಿ ವರ್ಣದಿಂದ ರಚಿಸಲಾಗಿದೆ. ಹಣೆಯ ಬೊಟ್ಟನ್ನು ಬೃಹತ್ತಾಕಾರದ ಕೆಂಪು ವರ್ಣದಲ್ಲಿ ಬಿಡಿಸಿರುವುದು ಕಂಡುಬರುತ್ತದೆ. ಹುಬ್ಬುಗಳ ಮಧ್ಯ ಕೆಂಪು ವರ್ಣದಪಟ್ಟಿ ಕಪ್ಪು ವರ್ಣದಿಂದ ಪಕ್ಷಿಯಾಕಾರ ಮೂಡಿಬಂದಿದೆ. ಕಪ್ಪು ಬಣ್ಣದ ಉಬ್ಬಿದ ತುಟಿ, ಬಿಳಿಹಲ್ಲು, ಹೊರಚಾಚಿದ ಕೆಂಪು ನಾಲಿಗೆ ಬಿಳಿವರ್ಣದ ಮೂಗುತಿ, ದೇವಿಯು ರೌದ್ರಾವತಾರದಲ್ಲಿದ್ದಾಳೆ. ಹಳದಿ ಹಿನ್ನೆಲೆಯಲ್ಲಿ ರಚನೆಯಾಗಿದೆ. ದೇವಿಯ ತಲೆಭಾಗಕ್ಕೆ ಕೆಂಪುವರ್ಣದ ನೈಜವಾದ ಬಟ್ಟೆಯನ್ನು ಇಳಿಬಿಡಲಾಗಿದೆ. ಗಿಳಿಹಸಿರು ವರ್ಣದ ಹಲಗೆಯ ಮೇಲೆ ದೇವಿಯೂ ಮುಖ ಮಾತ್ರವಿರುವ ಶಿಲ್ಪವಾಗಿದೆ.

### ೧೬. ನಾರದ

ಒಬ್ಬ ಪುರಾಣ ಪ್ರಸಿದ್ಧ ಮುನಿ ನಾರದನು ಬ್ರಹ್ಮನ ತೊಡೆಯಿಂದ ಮಗನಾಗಿ ಹುಟ್ಟಿದನು. ಬ್ರಹ್ಮನು ಮಾನಸಿಕ ಶಕ್ತಿಯಿಂದ ಮರೀಚಿ, ಅಂಗೀರಸ, ಅತ್ರಿ, ಪೌಲಸ್ತ್ಯ, ವಸಿಷ್ಠ, ಪುಲಹ ಮತ್ತು ಕ್ರೆತು ಎಂಬ ಸಪ್ತರ್ಷಿಗಳನ್ನು ಸೃಷ್ಟಿಸಿದನ್ನು ಬ್ರಹ್ಮನ ಕೋಪದಿಂದ ರುದ್ರನು ಅವನ ತೊಡೆಯಿಂದ ನಾರದನು ನಾರದನಿಗೆ ಏಳಕ್ಕಿಂತ ಹೆಚ್ಚು ಜನ್ಮಗಳಿವೆಯಂದು ಪುರಾಣಗಳು ಹೇಳುತ್ತವೆ. ಪುರಾಣಗಳಲ್ಲಿ ನಾರದನ ಪಾತ್ರ ಒಂದಲ್ಲ ಒಂದು ರೀತಿಯಲ್ಲಿ ಇದ್ದೇ ಇರುತ್ತದೆ. ನಾರದನು ಬ್ರಹ್ಮಚಾರಿಯಾಗಿಯೇ ಉಳಿಯುವುದಕ್ಕೆ ಇಷ್ಟಪಟ್ಟನು. ಆದರೆ ಬ್ರಹ್ಮನು ತನ್ನ ಇತರೆ ಮಕ್ಕಾಳಾದ ಮರೀಚಿ ಮತ್ತು ಸನಕರು ಆಗಲೇ ಬ್ರಹ್ಮಚಾರಿಗಳಾಗಿದ್ದರಿಂದ ವಂಶೋದ್ಧಾರದ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕೆಂದು ತಿಳಿಸಿದನು ಬ್ರಹ್ಮನ ಬುದ್ಧಿವಾದಕ್ಕೆ ನಾರದನು ಒಪ್ಪದೇ ಇದ್ದುದರಿಂದ ಬ್ರಹ್ಮನು ನಾರದನನ್ನು ಕುರಿತು. "ನಿನ್ನಲ್ಲಿರುವ ಜ್ಞಾನವೆಲ್ಲ ಬತ್ತಿಹೋಗಿ, ಐವತ್ತುಮಂದಿ ಸುಂದರಿಯರನ್ನು ಮದುವೆಯಾಗು" ಎಂದು ಶಾಪವಿತ್ತನು ಮುಂದುವರೆದು " ನೀನು ಉಪಬ್ರಾಹ್ಮಣ ಎಂಬ ಗಂಧರ್ವನಾಗಿ ಹುಟ್ಟಿ ದೊಡ್ಡ ಸಂಗೀತಗಾರನಾಗು, ವೀಣೆಯನ್ನು ನುಡಿಸುವುದರಲ್ಲಿ ಅಪ್ರತಿಮನಾಗು, ನಿನ್ನ ಮರಣದ ನಂತರ ನೀನು ಒಬ್ಬ ದಾಸಿಯ ಮಗನಾಗಿ ಹುಟ್ಟು ಹೀಗೆ ಹುಟ್ಟಿದ ಮೇಲೆ ವಿಷ್ಣುವಿನ ಮಹಾಭಕ್ತನಾಗುತ್ತಿಯ ಅನಂತರ ನನ್ನ ಮಗನಾಗಿ ಹುಟ್ಟುವೆ" ಎಂದು ಹೇಳಿದನು.[೪೯] ಅಂತೆಯೆ ಇಲ್ಲಿ ರಚಿತವಾದ ನಾರದನು ಮೈಬಣ್ಣ ಗೋದಿಕೆಂಪು ಹೊಂದಿದ್ದು ತಂಬುರಿಯನ್ನು ನುಡಿಸುತ್ತಾ ದೇವಾನು ದೇವತೆಗಳನ್ನು ನೋಡುತ್ತಿರುವ ಹಾಗೆ ಮುಖವನ್ನು ಮೇಲಕ್ಕೆ ಮಾಡಲಾಗಿದ್ದು ಮುಖದಲ್ಲಿ ಭಾವನೆಯು ಇಷ್ಟಾರ್ತಗಳನ್ನು ಪಡೆದುಕೋಳ್ಳುವುದಕ್ಕಾಗಿಯೇ ನಿಂತಿರುವ ಹಾಗಿದೆ ಹಣೆಯ ನಾಮವಾಗಿ ಕೆಂಪು ಮತ್ತು ಹಸಿರು ತೇಳುವಾದ ಕಪ್ಪು ಬಣ್ಣದಿಂದ ರಚಿತವಾದ ಹುಬ್ಬು ಕಂದುಗೆಂಪು ವರ್ಣದಿಂದ ರಚಿತವಾದ ಕಣ್ಣುಗಳು ಕೆಂಪು ತುಟಿ, ತಲೆಜುಟ್ಟು, ಮೀಸೆ ದಾಡಿಯ ಬಣ್ಣವಾಗಿ ಬಿಳಿಮಿಶ್ರಿತ ಕೆಂಪನ್ನು ಲೇಪಿಸಲಾಗಿದೆ. ಕೊರಳಲ್ಲಿ ಕಪ್ಪು ಬಣ್ಣದ ರುದ್ರಾಕ್ಷಿ, ಬುಜಕೀರ್ತಿಯಿಂದ ಹಳದಿ ವರ್ಣದ ಶಾಲು ಮೊಳಕಾಲವರೆಗೆ ಇಳಿಬಿಡಲಾಗಿದೆ. ನೀಲಿ ಪಂಚೆತೊಟ್ಟು ನಾರದನು ಪಾದರಕ್ಷೆ ಹೊಂದಿದ್ದು ಕಂಡುಬರುತ್ತದೆ. ಇಲ್ಲಿ ತಂಬುರಿಗೆ ಕೆಂಪು, ಹಳದಿ, ಬಿಳಿ, ವರ್ಣಗಳಿಂದ ವಿನ್ಯಾಸಗಳು ನೈಜಾಕಾರದಲ್ಲಿ ಈ ನಾರದ ಶಿಲ್ಪದಲ್ಲಿ ಮೂಡಿಬಂದಿವೆ.

### ೧೭. ಅರ್ಜುನ

ಈತನು ಪಾಶುಪತಾಸ್ತ್ರವನ್ನು ಪಡೆಯಲೆಂದು ತಪಸ್ಸನ್ನು ಮಾಡುವಾಗ ಶಿವನು ಬಂದು ಯುದ್ಧಮಾಡಿ ಆತನನ್ನು ಕೊಲ್ಲದೆ ವಿನೋದವಾಡಿ ಪಾಶುಪತಾಸ್ತ್ರವನ್ನಿತ್ತನ್ನು ಯುದ್ಧದಲ್ಲಿ ಮಡಿದ ಭೀಷ್ಮರನ್ನು ಸ್ಮಶಾನವಲ್ಲದ ಸ್ಥಳದಲ್ಲಿ ಸುಡಬೇಕೆಂದಿರಲು ಅಂತಹ ಸ್ಥಳ ಯಾವುದು ಅರ್ಜುನನಿಗೆ ಗೋಚರಿಸಲಿಲ್ಲ ಇರುವ ಸ್ಥಳಕ್ಕೆ ಲಿಂಗ ಮುದ್ರೆ ಮಾಡಿದರೆ ಸ್ಥಳ ಶುದ್ಧಿಯಾಗುವುದೆಂದು ಅ ಶರೀರವಾಣಿ ನುಡಿಯಲು ಅರ್ಜುನನು ಹಾಗೆಯೇ ಮಾಡಿದನು.

---

೪೯. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು ೧೧೭೨ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಪಾಶುಪತಾಸ್ತ್ರವನ್ನು ಪಡೆದ ಈತನನ್ನು ದೇವೇಂದ್ರ ಸ್ವರ್ಗಕ್ಕೆ ಕರೆದೊಯ್ದು ಮನ್ನಿಸಲು ಆ ಕಾಲದಲ್ಲಿ ತನ್ನತ್ತ ನೋಡಿದ ಊರ್ವಸಿ ಮೋಹಿಸಿ ಕಾಮಕೇಳಿಗೆ ಕರೆದಳು ಅರ್ಜುನ ಒಪ್ಪದಿರಲು, ಅವನನ್ನು ಶಿಖಂಡಿಯಾಗೆಂದು ಶಪಿಸಿದಳು.[೫೦] ಇಲ್ಲಿ ಅರ್ಜುನನು ನೈಜವಾಗಿದ್ದು ಶಿವನು ಪ್ರತ್ಯಕ್ಷವಾದಂತೆ ಗಾಬರಿಯಿಂದ ನೋಡುತ್ತಿರುವುದು ಕಂಡುಬಂದು ಕಣ್ಣುಗಳು ಸೂಕ್ಷ್ಮವಾಗಿ ಮೂಡಿರುವುದಾಗಿದೆ. ಬಾಗಿದ ಹುಬ್ಬುಗಳು ಕಪ್ಪುಬಣ್ಣದಿಂದ ಕೂಡಿದ್ದು ಮೈಬಣ್ಣವಾಗಿ ಗೋದಿಗೆಂಪು ಲೇಪಿಸಲಾಗಿದೆ. ಕೆಂಪು ಹಣೆನಾಮ ಮಧ್ಯದಲ್ಲಿ ಕಪ್ಪುಚುಕ್ಕೆ ಬಿಳಿವರ್ಣದ ಹೊರರೇಖೆ ಎಳೆದಿರುವುದಾಗಿದೆ. ನೀಳಾದ ಮೂಗಿಗೆ ಕೆಳಭಾಗ ಮೀಸೆಯು ಮೂಡಿದ್ದು ಕೆಂಪು ತುಟಿಯನ್ನು ಚಿತ್ರಿಸಲಾಗಿದೆ. ಬಂಗಾರ ವರ್ಣದ ಕಿರೀಟಧಾರಿಯಾದ ಅರ್ಜುನನ ಕಿವಿಯೋಲೆ ಕೈಕಡಗ, ಮುಂಗೈ,ಆಭರಣಧಾರಿಯಾಗಿದ್ದಾನೆ. ಬಂಗಾರ ವರ್ಣದ ಎದೆಕವಚ ನೀಲಿಪಂಚೆ ಧರಿಸಿ ಶಿವನನ್ನು ಪ್ರಾರ್ಥಿಸುವ ಹಾಗೆ ಮೂಡಿಬಂದಿದೆ. ಮರದ ಹಲಗೆಯ ಮೇಲೆ ತೆಳು ನೀಲಿ ಬಣ್ಣ ಬಳಿದು ಅರ್ಜುನನ ಭುಜಕೀರ್ತಿಯ ಹಿಂಭಾಗದಿಂದ ನೀಲಿ ಬಟ್ಟೆಯು ಮರದ ಹಲಗೆಯ ಮೇಲೆ ಇಳಿಬಿದ್ದಿದೆ ಹಿನ್ನೆಲೆಯಾಗಿ ನೈಜವಾದ ನೀಲಿ ಬಟ್ಟೆಯನ್ನು ಇಳಿಬಿಡಲಾಗಿದೆ.

## ೧೮. ಬುದ್ಧ

ಬೌದ್ಧ ಧರ್ಮದ ಸ್ಥಾಪಕ ಬುದ್ಧ ಹಿಮಾಲಯದ ಬಳಿಇರುವ ಕಪಿಲ ವಸ್ತು ಎಂಬಲ್ಲಿ ಕ್ರಿ.ಪೂ. ೫೬೦ ರಲ್ಲಿ ಜನ್ಮತಾಳಿದನು. ಈತನ ತಂದೆ ಶಾಕ್ಯವಂಶದ ಶುದ್ಧೋಧನ ಸಿದ್ಧಾರ್ಥ ಎಂಬುದು ಬುದ್ಧನ ನಿಜವಾದ ಹೆಸರು. ಬುದ್ಧ ಎಂಬುದಕ್ಕೆ ಪದಶಃ ಅರ್ಥ–ಜ್ಞಾನಿ, ದೇವತ್ವ ಪಡೆದ ಧರ್ಮಗುರು ಎಂದು ವಿಶೇಷವಾಗಿ ಇದು ಗೌತಮ ಸಿದ್ಧಾರ್ಥ (ಕ್ರಿ.ಪೂ ೫೬೩? ೪೮೩ ?) ಬೌದ್ಧ ಮತದ ಸಂಸ್ಥಾಪಕನಿಗೆ ಅನ್ವಯಿಸುತ್ತದೆ. ಗೌತಮನು ಪುರಾತನ ನಗರವಾದ ಕಪಿಲವಸ್ತುವಿನ ಹತ್ತಿರದ ಲುಂಬಿನಿ ವನ (ನೇಪಾಳ) ದಲ್ಲಿ ಜನಿಸಿದನು. ಆತನ ತಂದೆಯು ಶಾಕ್ಯವಂಶದ ರಾಜನಾಗಿದ್ದು, ಈಗಿನ ನೇಪಾಳದ ದಕ್ಷಿಣಭಾಗ ಮತ್ತು ಒಕ್ಕೂಟ ಪ್ರಾಂತಗಳ ಈಶಾನ್ಯಗಳಲ್ಲಿರುವ ಚಿಕ್ಕ ರಾಜ್ಯವೊಂದನ್ನು ಆಳುತ್ತಿದ್ದನು. ಆತನ ತಾಯಿ ಮಾಯಾ, ಆತನು ಬಿಳಿ ಆನೆಯ ರೂಪದಲ್ಲಿ ಸ್ವರ್ಗದಿಂದ ಬಂದು ತನ್ನ ಗರ್ಭ ಪ್ರವೇಶ ಮಾಡಿದ ಕನಸನ್ನು ಕಂಡ ಬಳಿಕ ಬಸಿರಾದಳೆಂದು ಹೇಳಲಾಗಿದೆ.

ಬುದ್ದನು ಈ ಮುಂಚೆಯೇ ಅನೇಕ ಬಾರಿ ಜನ್ಮವೆತ್ತಿದನೆಂದು ಜಾತಕ ಕಥೆಗಳು ನಿರೂಪಿಸುತ್ತವೆ. ಆತನ ಕೊನೆಯ ಹುಟ್ಟಿನಗಳಿಗೆ ಬಂದಾಗ, ಭೂಕಂಪನಗಳು ಮತ್ತು ಅದ್ಭುತ ಘಟನೆಗಳು ಸಂಭವಿಸಿದವು ಹಾಗೂ ಸಮುದ್ರದ ನೀರು ಸಿಹಿಯಾಯಿತು. ಆತ ವಿಶ್ವದ ಚಕ್ರವರ್ತಿಯಾಗುತ್ತಾನೆ. ಅಥವಾ ಮನುಕುಲದ ಮುಕ್ತಿಗಾಗಿ ಬುದ್ಧನಾಗುತ್ತಾನೆ ಎಂದು ಭವಿಷ್ಯ ಹೇಳಲಾಗಿತ್ತು. ಕಾಲ ಬಂದಾಗ ತಾನಿನ್ನೂ ತುಷಿತ ಸ್ವರ್ಗದಲ್ಲಿದ್ದಾಗಲೇ ಬುದ್ಧನು ತಾನು ಹುಟ್ಟಲು ಸರಿಯಾದ ಕುಟುಂಬ, ಭೂಖಂಡ, ಜಿಲ್ಲೆ, ವೇಳೆ ಮತ್ತು ತಾಯಿ ಇವರನ್ನು ಆಯ್ದುಕೊಳ್ಳಲು ಐದು ಅವಲೋಕನಗಳನ್ನು ಮಾಡಿದನು. ಹುಟ್ಟಿನ ಸಮಯದಲ್ಲಿ ಅವನ ದೇಹದ ಮೇಲೆ ೩೨ ಮುಖ್ಯವಾದ ಮತ್ತು ೮೦ ಆನುಷಂಗಿಕವಾದ ಚಿನ್ಹೆಗಳಿದ್ದವು ಬ್ರಹ್ಮನ ಜಗತ್ತನ್ನು ತಿಳಿಯುವ, ಅವನ ಘನತೆಯನ್ನು ಸೂಚಿಸುವ ಅದ್ಭುತ ನಾಲಿಗೆ ಅವನಿಗಿತ್ತು.[೫೧]

ತನ್ನ ಮಗನು ಸಾಮ್ರಾಟನಾಗಲೆಂದು ಬಯಸಿ, ಅವನ ತಂದೆಯು ಹಣ್ಣುಮುದುಕ ರೋಗಿ, ಸತ್ತಶಿವ ಮತ್ತು ಸನ್ಯಾಸಿ ಇವರು ಗೌತಮನ ಕಣ್ಣಿಗೆ ಬೀಳದ ಹಾಗೆ ಭೋಗದಿಂದ ಬೆಳೆಸಿದನು. ತನ್ನ ತಂದೆಯ ರಕ್ಷಣೆಯಿದ್ದರೂ ಗೌತಮನು ಈ ನಾಲ್ಕು ದೃಶ್ಯಗಳನ್ನು ಕಂಡನು ಮತ್ತು ಲೌಕಿಕ ವಸ್ತುಗಳ ನಶ್ವರತೆಯನ್ನು ಅರಿತುಕೊಂಡು, ೨೯ನೆಯ ವಯಸ್ಸಿನಲ್ಲಿ ಮಹಾತ್ಯಾಗವನ್ನು ಮಾಡಿದನು.[೫೨] ಇಲ್ಲಿ ಕಂಡುಬರುವ ಬುದ್ಧನ ಶಿಲ್ಪವು ಎದೆಭಾಗದವರೆಗೆ

೫೦. ತ.ಸು.ಶಾಮರಾಯ: ಶಿವಶರಣ ಕಥಾರತ್ನಕೋಶ ಪು. ೨೨-೨೩ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೫೧. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು ೧೪೮೯ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೫೨. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು ೧೪೨೦ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫



೧೪. ಕೋಣ



೧೫. ಅಮ್ಮಾರು (ದೇವಿ)



೧೬. ನಾರದ



೧೭. ಅರ್ಜುನ



೧೮. ಬುದ್ಧ

ರಚನೆಯಾಗಿದ್ದು ಮೈಬಣ್ಣವಾಗಿ ಗೋದಿಗೆಂಪು ಬಳೆಯಲಾಗಿದೆ. ಕೇಶವನ್ನು ಕಪ್ಪು ಬಣ್ಣದಲ್ಲಿ ಚಿತ್ರಿಸಿದ್ದು ಗುಂಗುರು ಕಾಣುವಹಾಗೆ ಉಬ್ಬು ತಗ್ಗು ರಚಿಸಿ ಮೇಲ್ಭಾಗದಲ್ಲಿ ಜುಟ್ಟುಕಟ್ಟಿದ್ದು ಕಂಡುಬರುತ್ತದೆ. ಬಾಗಿದ ಕಪ್ಪು ಬಣ್ಣದ ಹುಬ್ಬು ಕೆಳಭಾಗದಲ್ಲಿ ಮೀನಿನ ಹಾಗೆ ಗೋಚರಿಸುವ ಕಣ್ಣು ಮೂಡಿಬಂದಿದೆ. ಕಪ್ಪು ಬಣ್ಣದ ಹೊರರೇಖೆ ಎಳೆದು ಮಧ್ಯದಲ್ಲಿ ಕಪ್ಪು, ಬಿಳಿ, ನೀಲಿ, ಕೆಂಪು, ಬಣ್ಣದಲ್ಲಿ ರಚಿತವಾಗಿದೆ. ಹಣೆಯ ಮಧ್ಯಭಾಗದಲ್ಲಿ ನಾಮ ಸಂಕೇತವಾಗಿ ಬಿಳಿವರ್ಣದ ವೃತ್ತಾಕಾರ ರಚಿಸಿ ಅದರ ಕೆಳಭಾಗ ಕಪ್ಪು ವರ್ಣದ ರೇಖೆಯನ್ನು ಬರೆಯಲಾಗಿದೆ. ಎದುರು ಮುಖದ ಈ ಬುದ್ಧನ ಶಿಲ್ಪವು ಸುಂದರವಾಗಿದೆ. ಉಬ್ಬಿದ್ದ ತುಟಿಗಳಿಗೆ ಕೆಂಪನ್ನು ಬಳಿದು ಹೊರರೇಖೆಯಾಗಿ ಕಪ್ಪು ವರ್ಣದ ರೇಖೆಯನ್ನು ಉಪಯೋಗಿಸಲಾಗಿದೆ. ಇಲ್ಲಿ ಬುದ್ಧನ ಕಿವಿಯು  ಕತ್ತಿನವರೆಗೆ ರಚಿಸಿದ್ದು ಒಳಭಾಗದಲ್ಲಿ ಸೂಕ್ಷ್ಮವಾದ ಕೆಂಪು ರೇಖೆಯನ್ನು ಎಳೆಯಲಾಗಿದೆ. ಈ ರೇಖೆಗಳು ನೋಡುವುದಕ್ಕೆ ಕಿವಿಯಲ್ಲಿಯ ಉಬ್ಬು ತಗ್ಗು ಗೋಚರಿಸುವ ಹಾಗೆ ಮೂಡಿಬಂದಿವೆ. ಬುದ್ಧನ ಎದೆಭಾಗಕ್ಕೆ ಹಳದಿ ವರ್ಣದ ಬಟ್ಟೆ ರಚಿಸಿದ್ದು ಇದು ಬಲ ಕಿವಿಯ ಕೆಳಭಾಗದಿಂದ ಎಡ ಬುಜದ ಕೆಳಭಾಗದವರೆಗೂ ಮೂಡಿಬಂದಿದೆ. ಈ ಶಿಲ್ಪ ನಗು ಮುಖದಲ್ಲಿದ್ದು  ಸುಂದರವಾದ ವರ್ಣವಿನ್ಯಾಸದಿಂದ ಕೂಡಿದೆ.

**ಮಣ್ಣಿನ ಮಾಧ್ಯಮದ ರಚನಾ ಹಂತದ ಶಿಲ್ಪಗಳು**

ಮಣ್ಣಿನ ಮಾಧ್ಯಮದ ಶಿಲ್ಪಗಳಲ್ಲಿ ರಚನಾ ಹಂತದ ಶಿಲ್ಪಗಳಿಗೆ ಪ್ರಮುಖಸ್ಥಾನವಿದೆ, ಕಾರಣ ಒಂದು ಕಲಾಕೃತಿ ಪೂರ್ಣಗೊಳ್ಳಬೇಕಾದರೆ ಅದು ಹಲವಾರು ಹಂತಗಳನ್ನು ದಾಟುತ್ತಾ ಬರುತ್ತದೆ. ಹಾಗೆ ಇಲ್ಲಿಯೂ ಹಲವಾರು  ವಸ್ತುವಿಷಯಗಳಿದ್ದು  ಒಂದೊಂದು ರಚನಾ ಹಂತದಲ್ಲೇ ಇವು ಮುಂದೆ ಹಲವಾರು ವರ್ಣಗಳಿಂದ ಮೈತುಂಬಿಕೊಂಡು ನಿಲ್ಲುವ ಶಿಲ್ಪಗಳಾಗಿವೆ. ಇಲ್ಲಿ ಕಾಣಬರುವ ಶಿಲ್ಪಗಳು ಮೊದಲನೆಯ ಹಂತ ಎಂದರೆ ತಪ್ಪಾಗಲಾರದು. ಹಾಗೆ ನೋಡಿದರೆ ಈ ಶಿಲ್ಪಗಳನ್ನು ಹಾಗೇ ಬಿಡುವುದು ಒಂದು ಮಾಧ್ಯಮವೆ ಸರೀ. ಹಲವಾರು ಕಲಾವಿದರು ರಚಿಸುವ 'ಟೆರಾಕೊಟ' ಶಿಲ್ಪಗಳು ಹಾಗೆ ಇರುವುದನ್ನು ಕಾಣಬಹುದು. ಅಂತೆಯೆ ಈ ಶಿಲ್ಪಗಳು  ರಚನೆಯಾಗಿವೆ.

ಈ  ರೀತಿಯಾಗಿ ಸ್ಥಳೀಯವಾಗಿ ದೊರಕುವ ಕೆರೆಮಣ್ಣು ಹೆಚ್ಚು ಜಿಗುಟಾಗಿರುವುದರಿಂದ ಕಲಘಟಗಿಯ ಕಲಾವಿದರಿಗೆ  ಮೂರ್ತಿಶಿಲ್ಪಗಳ ರಚನೆಗೆ ಹೆಚ್ಚು ಉಪಯುಕ್ತವಾಗಿದೆ. ಇಂತಹ ಕೆರೆಯ ಮಣ್ಣಿನಲ್ಲಿ ಹಲವಾರು ದೇವತಾ ಶಿಲ್ಪಗಳನ್ನು ಆಟಿಕೆ ಗೊಂಬೆಗಳು ಇತ್ಯಾದಿಗಳು ರಚನೆಗೊಳ್ಳುತ್ತವೆ. ನಂತರ ಇವರದೆ ಆದ ಕೆಲವು ಬಣ್ಣಗಳು ಮತ್ತು ಮಾರ್ಕೆಟ್‌ನಿಂದ ದೊರಕುವ ಕೆಲವು ಬಣ್ಣಗಳನ್ನು ಬಳಸಿ ಕಲಾಕೃತಿಗಳಿಗೆ ಉಪಯೋಗಿಸುತ್ತಾರೆ. ಈ ರೀತಿಯಾಗಿ ಕಲಘಟಗಿಯಲ್ಲಿ ಕಲಾಕೃತಿಗಳ ತಯಾರಿಕೆ ನಡೆಯುತ್ತಿದೆ.

*****









ಮಣ್ಣಿನ ಮಾಧ್ಯಮದ ಶಿಲ್ಪಗಳು : ವರ್ಣಲೇಪನದ ಪೂರ್ವದ ಹಂತ

ಅರಣ್ಯಗಳು ಮಾನವನಿಗೆ ಪ್ರಕೃತಿದತ್ತ ವರ. ಮಾನವನಿಗಿಂತ ಬಹು ಮೊದಲು ಪ್ರಕೃತಿಯಲ್ಲಿ ಮೂಡಿಬಂದ ವೃಕ್ಷಗಳು ತಲೆತಲಾಂತರದಿಂದ ಅವನ ಶ್ರೇಯಸ್ಸಿಗೆ ನೆರವಾಗಿವೆ. ಮೊದಲಿಗೆ ವೃಕ್ಷಗಳೇ ಮಾನವನಿಗೆ ಮನೆ, ಜೀಡು ದಿನನಿತ್ಯದ ಆಹಾರ ಬಹುತೇಕ ವೃಕ್ಷಗಳ ಹಣ್ಣು ಹಂಪಲ, ಗಿಡ ಗಂಟೆಗಳ ಗೆಡ್ಡೆಗೆಣಸು ಆದಿಮಾನವನ ತನ್ನ ಪರಿಸರದ ಸಸ್ಯರಾಶಿ ಹಾಗೂ ಪ್ರಾಣಿವರ್ಗದೊಂದಿಗೆ ಹಾಸು ಹೊಕ್ಕಾಗಿ ಬದುಕಿಬಂದ ಜೀವಿ.

ಜೀವರಾಶಿಯ ವಿಕಸನ ಸೃಷ್ಟಿಯ ಕೈಚಳಕ ಪ್ರಾಣಿಪ್ರಪಂಚದ ವೈವಿಧ್ಯತೆ ಅದ್ಭುತ. ಇದರಲ್ಲಿ ಮಾನವನದು ಅಗ್ರಸ್ಥಾನ ಬುದ್ಧಿಯಲ್ಲಿ ವಿವೇಚನೆಯಲ್ಲಿ ಅವನದು ಸೃಷ್ಟಿಯ ಪರಿಪೂರ್ಣತೆ ಕ್ರಮೇಣ ಮಾನವ ತನ್ನ ಬುದ್ಧಿ ಶಕ್ತಿ, ದೈರ್ಯ ಸಾಹಸಗಳಿಂದ ಬದುಕು ಸಾಗಿಸುತ್ತಾ ಬಂದ ಪ್ರಕೃತಿಯಲ್ಲಿ ಮಾನವ ಬಹು ಇಚೀನವ ಅದಾಗ್ಯೂ ಆದಿಮಾನವನ ಸ್ವರೂಪ ರೂಪಗೊಂಡೇ ೨೦ ಲಕ್ಷ ವರ್ಷಗಳಾಗಿ ನಾಗರಿಕತೆಯ ಮೊದಲ ಕುರುಹು ಸುಮಾರು ಹತ್ತು ಸಹಸ್ರ ವರ್ಷಗಳ ಹಿಂದೆ ಎಂದು ಅಂದಾಜು ಮಾಡಲಾಗಿದೆ. ಪ್ರಾಗೈತಿಹಾಸಿಕ ಮಾನವನು ಶಿಲಾಗುಹೆ ಅಥವಾ ಮರಗಳ ಬುಡದಲ್ಲಿ ವಾಸಮಾಡುತ್ತಾ ಬೇಟೆಗಾಗಿ ಕಲ್ಲು, ಮರದ ಚೂಪಾದ ತುಂಡುಗಳನ್ನು ಬಳಸತೊಡಗಿದನು, ಕಾಲಕ್ರಮೇಣ ಕಲ್ಮನೆಗಳು, ಹಾಗೆ ಮುಂದುವರಿದು ವೃತ್ತಾಕಾರದ ಗುಡಿಸಲುಗಳನ್ನು ಮರಗಳ, ಮತ್ತು ಬಳ್ಳಿಗಳ ಸಹಾಯದಿಂದ ನಿರ್ಮಿಸತೋಡಗಿದನು. ನಂತರ ಅದಕ್ಕೆ ಕಲಸು ಮಣ್ಣನ್ನು ಮೆತ್ತಲಾಗುತ್ತಿತ್ತು.[೧] ಇದು ಆದಿ ಸೂಕ್ಷ್ಮ ಶಿಲಾಯುಗದ ಉಪಹಂತದಲ್ಲಿ ಇದು ಪ್ರಾರಂಭವಾಯಿತು.

ಇಲ್ಲಿ ಒಂದು ಗಮನಾರ್ಹ ಸಂಗತಿಯೆಂದರೆ ಮಧ್ಯಕಾಲದ ಯುಗದಿಂದ ನಮ್ಮ ಗ್ರಾಮಗಳು ನದಿಗಳ ದಂಡೆಯಮೇಲಿದ್ದು ಪ್ರವಾಹಗಳಿಗೆ ತುತ್ತಾಗುವುದು ಸಾಮಾನ್ಯ. ಇನಾಮ್‌ಗಾಂವದಲ್ಲಿಯ ಶಿಲಾ ತಾಮ್ರಯುಗದ ಕಾಲದಲ್ಲಿ ಮನೆಯ ಹೊರ ಅಂತರದಲ್ಲಿ ಮರದ ಕಂಬಗಳಿದ್ದು ಅವುಗಳಿಗೆ ಬಿದಿರಿನ ಅಥವಾ ಬಳ್ಳಿಗಳಿಂದ ಹೆಣೆದ ಚಪ್ಪರ ಕಟ್ಟಲಾಗಿತ್ತು. ಗುಡಿಸಲು ಒಳಗೆ ಅಂದರೆ ಮಧ್ಯಭಾಗದಲ್ಲಿ ಬೃಹತ್ತಾದ ಕಟ್ಟಿಗೆಯ ಕಂಬ ವಿರುಬಹುದು. ಈ ಪ್ರಕಾರದ ಅವಶೇಷ ಸಂಗನಕಲ್ಲು, ತೆಕ್ಕಲಕೋಟೆ, ಹಳ್ಳೂರು, ಬನಹಳ್ಳಿ, ನೆಲೆಗಳಲ್ಲಿ ಕಾಣಬರುತ್ತವೆ.[೨] ಇಲ್ಲಿಯೂ ಸಹ ಮರದ ಬಳಕೆ ಪ್ರಮುಖವಾಗಿ ಕಂಡುಬರುತ್ತದೆ. ಅಂತಿಮ ಹಳೆ ಶಿಲಾಯುಗದ ಉಪಕರಣಗಳ ಕಾರ್ಯದ ನಿರ್ವಹಣೆಯಲ್ಲಿ ಕಟ್ಟಿಗೆಯನ್ನು ಬಳಸಿದ ಆಧಾರಗಳಿವೆ. ಸಮನಾಂತರದ ಅಲಗುಗಳ ಒಂದು ಅಂಚನ್ನು ಮೊಂಡಮಾಡಿ ಮರದ ತುಂಡಿಗೆ ಸರಿಯಾಗಿ ಕಟ್ಟಿ ಮೀನು ಗಾಳವನ್ನು ಮಾಡಲಾಗುತ್ತಿತ್ತೆಂದು ತರ್ಕಿಸಲಾಗಿದೆ.[೩]

---

೦೧. ಪ್ರೊ. ಬಿ. ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೧೩೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೦೨. -ಅದೇ- ಪು. ೧೫೪
೦೩. -ಅದೇ- ಪು. ೧೨೨

ಅಲ್ಲದೆ ವೃತ್ತಾಕಾರದ ಮನೆಗಳು ಸಾಲಾಗಿರುವುದು ಕಂಡುಬರುತ್ತದೆ. ತಮಿಳುನಾಡಿನ ಪಯ್ಯಂಪಲ್ಲಿಯಲ್ಲಿಯ ನೆಲೆಗಳಲ್ಲಿ ಮರದ ಕಟ್ಟಿಗೆಯನ್ನು ನೆಲದಲ್ಲಿ ನೆಟ್ಟು ಇಳಿಜಾರು ಮಾಡಿ ನಿರ್ಮಿಸಲಾಗಿದೆ. ಇಂಥಾಮನೆಗಳು ಪೆನ್ನಾರ ಮೇಲ್ದಂಡೆಯ ಬನಹಳ್ಳಿ (ಕೋಲಾರ ಜಿಲ್ಲೆ) ಧಾರವಾಡ ಜಿಲ್ಲೆಯ ಹಳ್ಳೂರುಗಳಲ್ಲಿ ಕಂಡುಬರುತ್ತವೆ.[೪] ಈ ರೀತಿಯ ಮನೆಯ ನಿರ್ಮಾನವನ್ನು ಇಂದು ಹಲವಾರು ಪ್ರದೇಶಗಳಲ್ಲಿ ಕಾಣಬರುತ್ತವೆ. ಈ ಆದಿ ಮತ್ತು ಹಳೆಶಿಲಾಯುಗದ ಜನರು ಬಾಣ, ಭಲ್ಲೆಗಳನ್ನು ಕಟ್ಟಿಗೆಯಲ್ಲಿ ನಿರ್ಮಿಸುತ್ತಿದ್ದರು. ಮರದ ಚೂಪಾದ ತುದಿಯಿಂದ ಅಥವಾ ಜಿಂಕೆಯ ಕೊಂಬುಗಳಿಂದ ಅಗಲವಾದ ಚಕ್ಕೆಗಳನ್ನು ಎಬ್ಬಿಸುತ್ತಿದ್ದರು.[೫] ಹೀಗೆ ಮರದ ತೊಗಟೆಯನ್ನು ಸುಲಿದು ಉಡುಪಾಗಿ ಧರಿಸಿರಬಹುದು. ಹಾಗೆ ಬಳ್ಳಿಯ ಮತ್ತು ತಪ್ಪಲು ಸಹಾಯ ಪಡೆದಿರಬೇಕು. ಪ್ರಾಣಿಗಳ ಚರ್ಮವು ಇವರಿಗೆ ಹೆಚ್ಚಾಗಿ ಸಿಗುವುದರಿಂದ ಮತ್ತು ಇದು ಮೃದುವಾಗಿರುವುದರಿಂದ ಇದರ ಬಳಕೆ ಹೆಚ್ಚಾಗಿರಬೇಕು ಗ್ರಹ ಉಪಯೋಗಕ್ಕಾಗಿ ಅನುಕೂಲವಾಗುವಂತಹ ಕೊಡಲಿ, ಬಾಚಿ, ಚಿಣಿ, ಉಳಿ, ಮೊದಲಾದವುಗಳನ್ನು ಸಣ್ಣ ಸಣ್ಣ ಗಿಡ ಮರಗಳನ್ನು ಕತ್ತರಿಸಿ ತಯಾರಿಸುತ್ತಿದ್ದರು. ಈ ವಸ್ತುಗಳು ಕೃಷಿ ಕೆಲಸಗಳಿಗೂ ಅನುಕೂಲವಾಗತೊಡಗಿದವು.[೬] ಇಂದು ನಾವು ಬಳಸುವ ವಸ್ತುಗಳು ಹಿಂದಿನ ಮಾದರಿಯಲ್ಲಿಯೇ ನಿರ್ಮಾಣಗೊಂಡಿವೇ. ಇಂತಹ ಉಪಕರಣಗಳನ್ನು ಸರಿಯಾಗಿ ಬಳಸಿಕೊಂಡು ಗಳಗಳಿಂದ ಸಿಳಿದ ತಳ್ಳನೆ ದಬ್ಬೆಗಳನ್ನು ಇಚಲ ಪೊರಕೆಯಿಂದ ಹೆಣೆದು ಚಾಪೆಗಳನ್ನು –ಮಾಡುವುದು ಕೈಕಸುಬಾಗಿತ್ತು. ಈ ಪದ್ಧತಿಯು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. ನಮ್ಮ ಪ್ರಾಚೀನ ನಾಗರಿಕತೆಯಲ್ಲಿ ಕೃಷಿ ಪದ್ಧತಿಯು ಅಂದರೆ ಕೈಮಗ್ಗ, ನೀರೆತ್ತುವ ಚಕ್ರ ನೇಗಿಲು, ದಾರತಗೆಯುವ ಚರಕ ಇತ್ಯಾದಿಗಳು ಕೈಯಿಂದ ಅಥವಾ ಪ್ರಾಣಿಶಕ್ತಿಯಿಂದ ಇದ್ದು ಪ್ರಾರಂಭಿಕ ಜೀವನ ಕ್ರಮ ಎಂದು ಗುರುತಿಸಲ್ಪಡುತ್ತದೆ.[೭] ಈ ಕೃಷಿ ಮತ್ತು ಕೈಗಾರಿಕೆಯ ಪ್ರಗತಿಯಿಂದ ದೇಶಿಯ ಹಾಗೂ ವಿದೇಶಿಯ ವ್ಯಾಪಾರ ಬಂದರುಗಳ ಮೂಲಕ ನೆಡೆಯತೊಡಗಿತ್ತು. ಇಲ್ಲಿ ಮುಖ್ಯವಾಗಿ ಗಂಧದ ಮರ, ಗಿಡಮೂಲಿಕೆ, ಮಸಾಲೆ, ಮೆಣಸು, ಇನ್ನೂ ಇತ್ಯಾದಿ ವಸ್ತುಗಳನ್ನು ಕ್ರಿ.ಶ.೬ ನೆಯ ಶತಮಾನದಲ್ಲಿ ಸಾಗಿಸುತ್ತಿದ್ದರು. ಎಂದು 'ಕೋಸ್‌ಮಾಸ್ ಇಡಿಕೋಪ್ಲೊಸ್ಟಸ್' ಅಭಿಪ್ರಾಯ ಪಟ್ಟಿದ್ದಾನೆ.[೮] ಇಲ್ಲಿಯೂ ಸಹ ಮುಖ್ಯವಾಗಿ ಗಮನಿಸುವಂತಹ ವಿಷಯ ಅಡಗಿರುತ್ತದೆ. ಅದೇ ಹಡಗುಗಳಿಗೂ ಮರದ ಕಟ್ಟಿಗೆಯನ್ನು ಬಳಸಿರಬಹುದು ಹಾಗೇ ಭೂ ಸಾರಿಗೆಗೆ ಎತ್ತಿನ ಬಂಡಿ ಮರದಿಂದ ನಿರ್ಮಾಣವಾದ ಅಥವಾ ಚಕ್ಕಡಿಯನ್ನು ಬಳಸಿಕೊಳ್ಳುತ್ತಿದ್ದರು.[೯] ಇಂದಿಗೂ ಸಹ ನಮ್ಮ ಕೃಷಿ ಕೆಲಸಗಳಿಗೆ ಇದೇ ಮಾದರಿಯ ಚಕ್ಕಡಿಯನ್ನೇ ಬಳಸುತ್ತವೆ.

ಪ್ರಾಚೀನ ನಾಗರಿಕತೆಗಳಲ್ಲಿ ಬರಹದ ಮೂಲಕ ಮಾನವರನ್ನು ನಾಗರಿಕನಾಗಿ ಮಾಡಿತು. ಇದು ಮೆಸೋಪೋಟಮಿಯಾದಲ್ಲಿ (ಕಿ.ಪೂ. ೩೫೦೦) ನಂತರ ಈಜಿಪ್ತಿನ ಪಾಪಿರಸ್ ಮರದ ಜೊಂಡಿನಲ್ಲಿ ಬರಹ ಹೆಚ್ಚು ಪ್ರಗತಿ ಹೊಂದಿತು.[೧೦] ಈ ಪ್ರಕಾರದ ಬರವಣಿಗೆಯನ್ನು ಇಂದು ಹಲವಾರು ವಸ್ತು ಸಂಗ್ರಹಾಲಯಗಳಲ್ಲಿ ಹಸ್ತಪ್ರತಿಗಳಲ್ಲಿ ನೋಡಬಹುದಾಗಿದೆ.

ನಾಗರಿಕತೆಯು ಬೆಳೆದಂತೆ ಮಾನವನ ವಿಚಾರಗಳು ಬೆಳೆಯತೊಡಗಿದವು. ಹಾಗೇ ಮನೆಯ ಮೇಲ್ ಅಂತಸ್ತಿಗೆ ಹೋಗಲು ಮರದ ಕಟ್ಟಿಗೆಯನ್ನು ಮೆಟ್ಟಿಲುಗಳನ್ನು ಬಾಗಿಲು, ಅಳವಡಿಸಿರಬಹುದು. ಎಂದು ಊಹಿಸಲಾಗಿದೆ. ಮನೆಯ ಭಾವಣಿಗೆ ಮರದ ಪಟ್ಟಿಕೆಯನ್ನು ಬಳಸಿರುವುದು ತಿಳಿದು ಬರುತ್ತದೆ. ಒಂದೇ ಕೊಠಡಿಯೊಳಗೊಂಡ ವಾಸದಮನೆ ಮೆಹೆಂಜೋದಾರೋ ನಗರದಲ್ಲಿ ಕಾಣಬಹುದು. ಈ ತರಹದ ವಾಸದ ಮನೆಗಳು ಹರಪ್ಪಾ ಉಗ್ರಾಣದ ಪಕ್ಕದಲ್ಲೂ ಕಾಣಬಹುದು. ಮೆಹೆಂಜೋದಾರೋದ ಸಾರ್ವಜನಿಕ ಸ್ನಾನದ

೦೪. ಪ್ರೋ. ಬಿ. ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೧ ಪು. ೧೫೫ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೦೫. -ಅದೇ- ಪು. ೧೧೯
೦೬. -ಅದೇ- ಪು. ೧೫೫
೦೭. ಪ್ರೊ. ಜಿ. ಸುಬ್ರಮಣ್ಯ : ಕೈಗಾರಿಕಾ ಸಮಾಜಶಾಸ್ತ್ರ ಪು. ೮೭ ಸ್ವಪ್ನಾ ಬುಕ್ ಹೌಸ್ ಬೆಂಗಳೂರು ೨೦೦೩
೦೮ ಟಿ.ಜಿ ಚಂದ್ರಶೇಕರಪ್ಪ : ಪ್ರಾಚೀನ ಭಾರತದ ಇತಿಹಾಸ ಪು. ೧೭೨ ಪೂರ್ಣ ಪ್ರಕಾಶನ್ ಶಿವಮೊಗ್ಗ ೨೦೦೧
೦೯. -ಅದೇ- ಪು. ೩೪
೧೦. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಯಂತ್ರ ಜಗತ್ತು ಸಂ.೦೪ ಪು. ೨ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೨

ಕೊಳದ ಮೆಟ್ಟಿಲುಗಳನ್ನು ಮರದಿಂದ ಅಳವಡಿಸಲಾಗಿದೆ.[೧೧] ಈ ರೀತಿಯ ಬಳಕೆಯನ್ನು ಇಂದು ಕರ್ನಾಟಕದ ಹಲವಾರು ಪ್ರದೇಶಗಳ ಮನೆಯಲ್ಲಿ ಕಂಡುಬರುತ್ತದೆ. ಮೆಹೆಂಜೋದಾರೋದಲ್ಲಿ ಚೌಕಾಕಾರದ ಸಭಾ ಕೊಠಡಿಯನ್ನು ನಿರ್ಮಿಸಲಾಗಿದ್ದು ಇಲ್ಲಿ ಪೀಠದ ಮೇಲೆ ಮರದ ಕಂಬಗಳನ್ನು ಬಳಸಲಾಗಿದೆ.[೧೨] ಇದು ಮುಂದುವರೆದ ಭಾಗವಾಗಿ ಇಂದಿಗೂ ಸಹ ನಮ್ಮೊಡನೆ ಇದೆ. ಹಂಪೆಯ ರಾಜನ ಸಭಾಭವನವೆನ್ನಲಾದ ಚೌಕಾಕಾರದ ದೊಡ್ಡ ಕುಳಿಯೊಳಗೆ ಮರದ ಕಂಬಗಳನ್ನು ಅದರೊಳಗೆ ಜೋಡಿಸಲು ತಕ್ಕುದಾಗಿದೆ.[೧೩] 'ಅಸ್ಸೀರಿಯದ' ಸೇನೆಗಳು ಕ್ರಿ.ಪೂ. ೭ನೆಯ ಶತಮಾನದಲ್ಲಿ ಪ್ರಾಚೀನ ಗ್ರೀಕ್‌ನಲ್ಲಿ ಬಾಣಹಾರಿಸುವ ಯಂತ್ರಗಳನ್ನು ಮರದಿಂದ ತಯಾರಿಸಿ ವೈರಿಗಳ ಮೇಲೆ ದಾಳಿಮಾಡುತ್ತಿದ್ದರು.[೧೪] ಹಾಗೂ ನದಿಗಳನ್ನು ದಾಟಲು ತಾಳೆ, ತೆಂಗು, ಅಡಿಕೆ ಮರಗಳಂತಹ ಉದ್ದವಾದ ಮರಗಳನ್ನು ದಡದಿಂದ ದಡಕ್ಕೆ ಹಾಕುವುದು ಮರದ ಕೊಂಬೆಗಳನ್ನು ಸಾಲಾಗಿ ಕಟ್ಟಿ ಅದರ ಮೇಲೆ ಸಾಗುವುದು ಕಂಡುಬರುತ್ತದೆ. ಚೀನದ ಟೀಂಟ್ಸನ್ ನಿಂದ ಹಾಂಗಾಚೌ ತನಕ ೧೪೪೦ ಕಿ.ಮೀ. ಉದ್ದದ ಕಾಲುವೆಗೆ ಮರ ಬಳಸಿರುವುದು ಕಂಡುಬರುತ್ತದೆ.[೧೫] ಜರ್ಮನಿಯಲ್ಲಿ ಕಲ್ಲಿದ್ದಲ್ಲು ಅದಿರುಗಳನ್ನು ಸಾಗಿಸುವುದಕ್ಕಾಗಿ ಮರದ ಹಳಿಗಳ ಮೇಲೆ ಮರದ ಚಕ್ರಗಳುಳ್ಳ ಬಂಡಿಯನ್ನು ಬಳಸಿದ್ದು[೧೬] ಇದೇ ಮುಂದೆ ಕಬ್ಬಿಣ ಚಕ್ರಗಳಾಗಿ ರಚಿಸಲ್ಪಟ್ಟವು. ನಂತರ ದಿನಗಳಲ್ಲಿ ಕಾಲಕ್ಕೆ ಅನುಗುಣವಾಗಿ ಬೆಳೆದ ಮಾನವ ೧೮೬೦ ರ ವೇಳೆಗೆ ಪ್ರಾನ್ಸಿನ ಕ್ರಾಂತಿಕಾರಿ ಯುವಕ 'ಕ್ಲಾಡ್‌ಷಾಪ್' ಅವರು ಮೊಟ್ಟಮೊದಲು ಮರದಿಂದ ಚೌಕಟ್ಟನ್ನು ನಿರ್ಮಿಸಿ ಟೆಲಿಪೋನ್ ಕಂಡುಹಿಡಿದ[೧೭]

ಹಿಂದಿನ ಕಾಲದಲ್ಲಿ ಸಮಯವನ್ನು ತಿಳಿದುಕೊಳ್ಳಲು ಪ್ರಯೋಗಿಸಿದ ವಸ್ತು ಬಿಸಿಲಿನಲ್ಲಿರುವ ಮರ ಅಥವಾ ಕಂಬದ ನೆರಳನ್ನು ನೋಡಿ ಸಮಯವನ್ನು ತಿಳಿಯುತ್ತಿದ್ದರು.[೧೮] ಇಂದು ಕೂಡಾ ನಮ್ಮ ಗ್ರಾಮೀಣರು ಹಾಗೂ ಪೂರ್ವಜರು ನೆರಳಿನ ಮೂಲಕ ಸಮಯವನ್ನು ತಿಳಿಯುತ್ತಾರೆ. ಯೂರೋಪಿನ ಫಿನೀಷಿಯನ್ನರೂ ಸ್ವಾಭಾವಿಕ ಹಲ್ಲುಗಳು ನಿರ್ಬಲಗೊಂಡರೆ ಅವುಗಳನ್ನು ಕಿತ್ತೂ, ಮರಗಳಿಂದ ಕೊರೆದು ಮಾಡಿದ ಹಲ್ಲುಗಳನ್ನು ಜೋಡಿಸುತ್ತಿದ್ದರು. ಇದು ಕ್ರಿ.ಪೂ. ೮ ನೆಯ ಶತಮಾನದಲ್ಲಿ ಬಳಕೆಯಲ್ಲಿತ್ತು.[೧೯] ಗ್ರೀಕೊ-ರೋಮನ್ ರಿನೈಸಾನ್ಸ ಶೈಲಿಯಲ್ಲಿ "ಸೆಂಟ್ ಪ್ಯಾಟ್ರಿಕ್ ಚರ್ಚು" ಬಾಗಿಲು ಮೇಲೆ ರೋಸ್ ಮರದ ಕಿಟಕಿಯಿದ್ದು ಅದಕ್ಕೆ ಬಣ್ಣದ ಗಾಜುಗಳನ್ನು ಅಳವಡಿಸಿದೆ. ಇವರದೆಯಾದ ಇನ್ನೊಂದು "ಹೋಲಿಟ್ರಿನಿಟಿ ಚರ್ಚು" ೧೪೫೧ ರಲ್ಲಿ ನಿರ್ಮಿಸಿದ್ದು ಹಿಂದಿನ ಗೋಡೆಗೆ ಸುಂದರವಾದ ಮರದ ಕೆತ್ತನೆಗಳಿವೆ.[೨೦] ಇಂಥಹ ಸುಂದರ ವಿನ್ಯಾಸಗಳು ಇಂದು ಕರ್ನಾಟಕದ ಅನೇಕ ಮನೆ ಬಾಗಿಲುಗಳಲ್ಲಿ ಕಂಡುಬರುತ್ತವೆ. ಈ ವಿನ್ಯಾಸಗಳು ಸಹ ಹಿಂದಿನ ಪದ್ಧತಿಯನ್ನೆ ಅನುಸರಿಸಿವೆ. ನಮ್ಮ ಉತ್ತರ ಕರ್ನಾಟಕದ ಧಾರವಾಡದ "ಆಲ್ ಸೇಂಟ್ಸ ಚರ್ಚ"ನಲ್ಲಿ ಛಾವಣಿಯಲ್ಲಿಯೂ ಮರದ ಬಳಕೆಯನ್ನು ಕಾಣಬಹುದು.[೨೧] ಹಾಗೇ ಮೈಸೂರು ಅರಮನೆಯ ಛಾವಣಿಗೆ ತೆಗೆದ ಮರದ ಮೇಲೆ ಕೆತ್ತನೆಗಳಿವೆ. ಅರಮನೆಯ ಹತ್ತಿರದಲ್ಲಿ ಇರುವ ತ್ರಿಕೂಟ ದೇವಾಲಯದ ಎರಡು ಕಿಟಕಿಗಳು ಸುಂದರ ಕೆತ್ತನೆಯಿಂದ ಕೂಡಿವೆ.[೨೨] ೧೯ ನೆಯ ಶತಮಾನದಲ್ಲಿ ಚನ್ನಪಟ್ಟಣದ ತಿಮ್ಮಪ್ಪರಾಜನು ಕಟ್ಟಿಸಿದ ಅರಸ್ ಬಂಗಲೆಯ ಕಂಬಗಳು, ತೊಲೆಗಳು ಕಂಡುಬರುತ್ತವೆ.[೨೩]

---

೧೧. ಟಿ.ಜಿ ಚಂದ್ರಶೇಕರಪ್ಪ : ಪ್ರಾಚೀನ ಭಾರತದ ಇತಿಹಾಸ ಪು. ೨೬ ಪೂರ್ಣ ಪ್ರಕಾಶನ್ ಶಿವಮೊಗ್ಗ ೨೦೦೧
೧೨. ಟಿ.ಜಿ ಚಂದ್ರಶೇಕರಪ್ಪ : ಪ್ರಾಚೀನ ಭಾರತದ ಇತಿಹಾಸ ಪು. ೨೭ ಪೂರ್ಣ ಪ್ರಕಾಶನ್ ಶಿವಮೊಗ್ಗ ೨೦೦೧
೧೩. ಪ್ರೋ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೩ ಪು. ೩೬೭ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೧೪. ನಿರಂಜನ : ಜ್ಞಾನ ಗಂಗೋತ್ರಿ ಕಿರಿಯರ ವಿಶ್ವಕೋಶ ಯಂತ್ರ ಜಗತ್ತು ಸಂ.೦೪ ಪು. ೪ ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೨
೧೫. -ಅದೇ- ಪು. ೩೧
೧೬. -ಅದೇ- ಪು. ೩೨
೧೭. -ಅದೇ- ಪು. ೪೨
೧೮. -ಅದೇ- ಪು.೨೦೮
೧೯. -ಅದೇ- ಪು ೧೪೭
೨೦. ಪ್ರೋ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೬ ಪು. ೨೬೩ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೨೧. -ಅದೇ- ಪು. ೨೬೪
೨೨. -ಅದೇ- ಪು. ೨೬೧
೨೩. -ಅದೇ- ಪು. ೨೬೬

ಶಿವಮೊಗ್ಗ ಶಿವಪ್ಪನಾಯಕನ ಅರಮನೆ ಒಂದು ದೊಡ್ಡ ಕಟ್ಟಡ ಅದಕ್ಕೆ ಕಂಬಗಳಿರುವ ಮುಂಭಾಗವಿದೆ. ಕಟ್ಟಡದ ಮುಂದಿನ ಭಾಗದಲ್ಲಿ ವಿಶಾಲವಾದ ಹಜಾರವಿದೆ ಎತ್ತರವಾದ ಮರದ ಕಂಬಗಳಿವೆ. ಹಿಂಬಾಗದಲ್ಲಿ ಎರಡು ಅಂತಸ್ತುಗಳಿವೆ. ಬೋದಿಗೆಗಳು ಹೂವಿನಂತಿವೆ. ಮರದ ಮೆಟ್ಟಿಲು, ಕಿಟಕಿಗಳು ಇವೆ.೨೪ ಈ ಅರಮನೆ ನಿರ್ಮಾಣದಲ್ಲಿ ಹೆಚ್ಚಾಗಿ ಮರವನ್ನೇ ಬಳಸಿದ್ದಾರೆ.

ಬಳ್ಳಾರಿ ಜಿಲ್ಲೆಯ ಹಂಪಿಯ ವೀರೂಪಾಕ್ಷ ದೇವಾಲಯದಲ್ಲಿ ಕಂಡುಬರುವ ವೈಷ್ಣವ ಶಿಲ್ಪಗಳಲ್ಲಿ ಮರದ ಬಳಕೆಯನ್ನು ಇಂದಿಗೂ ಸಹ ಕಾಣಬಹುದು.೨೫ ಇಂದು ಈ ಪದ್ಧತಿಯು ಸಂಕೀರ್ಣ ಮಾಧ್ಯಮದ ಕಲಾಕೃತಿಗಳಲ್ಲಿ ಕಾಣುತ್ತೇವೆ. ಹಾಗೆ ಸಿಮೆಂಟ ಮಾಧ್ಯಮದಲ್ಲಿ ತಯಾರಾಗುವ ಕಲಾಕೃತಿಗಳಲ್ಲಿ ಕಟ್ಟಿಗೆಯ ಬದಲು ಕಬ್ಬಿಣ ಬಳಸುವುದು, ಕಂಡುಬರುತ್ತದೆ. ಕಟ್ಟಿಗೆಯ ಬಳಕೆಯಿಂದ ಕಲಾಕೃತಿಯು ಬಹಳ ಕಾಲದವರೆಗೆ ಬಾಳುವ ಕಲ್ಪನೆ ಇರುವುದರಿಂದ ವಿಜಯನಗರದ ಕೊನೆಗಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳಲ್ಲಿ ಗರ್ಭಗೃಹಗಳ ಛಾವಣಿ ನಿರ್ಮಾಣದಲ್ಲಿ ಮರದ ತೊಲೆಗಳನ್ನು ಬಳಸಿರುವುದು ದೇವಾಲಯದ ರಚನೆಯಲ್ಲಾದ ಬದಲಾವಣೆಗಳನ್ನು ಸೂಚಿಸುತ್ತದೆ.೨೬ ಹೀಗೆ ನಮ್ಮ ನವಶಿಲಾಯುಗದ ಕಾಲದಿಂದ ಅಂದರೆ ಸುಮಾರು ೩೦೦೦ ವರ್ಷಗಳ ಹಿಂದೆ ಪ್ರಪಂಚದ ಅನೇಕ ಕಡೇ ವಸತಿ ನಿರ್ಮಾಣ ಕಾರ್ಯ ಆರಂಭವಾಗಿತ್ತು. ಸಂಶೋಧನೆಯಿಂದ 'ಅಸ್ಸಿರಿಯದ ಎಬೈರಸ್' ಎಂಬಲ್ಲಿ ಮರದ ಜೊಡಿನ ಗುಡಿಸಲೊಂದು ದೊರೆತಿದೆ. ಇದು ಜಗತ್ತಿನಲ್ಲಿಯೇ (ಕ್ರಿ.ಪೂ.೩೦೦೦) ಅತ್ಯಂತ ಪ್ರಾಚೀನವಾದ ಮಾನವ ನಿರ್ಮಿತ ವಸತಿ ನಿವೇಶನ ಎಂದು ಹೇಳಲಾಗಿದೆ. ನವಶಿಲಾಯುಗಕ್ಕೆ ಸಂಬಂಧಿಸಿದಂತೆ ಟೈಗ್ರಸ್ ನದಿಯ ಪಶ್ಚಿಮಕ್ಕೆ 'ಹಸ್ಸುನ' ಎಂಬ ಸ್ಥಳದಲ್ಲಿ ಮನೆಯ ಅವಶೇಷಗಳು ದೊರೆತ್ತಿದ್ದು, ತಿರುಗುವ ಗೂಟಗಳುಳ್ಳ ಮರದ ಬಾಗಿಲುಗಳನ್ನು ಬಳಸಲಾಗಿದೆ. ಕರ್ನಾಟಕದ ಹಲವಾರು ಗ್ರಾಮೀಣ ಪ್ರದೇಶಗಳಲ್ಲಿ ತಿರುಗುವ ಬಾಗಿಲು ಬಳಕೆ ಮುಂದುವರೆದಿದೆ.

ಪ್ರಾಚೀನ ಸಾಹಿತ್ಯ ಗ್ರಂಥಗಳಾದ ವೇದ, ಪುರಾಣ, ರಾಮಾಯಣ, ಮಹಾಭಾರತ, ಐತಿಹಾಸಿಕ ಕಾದಂಬರಿ, ವಾಸ್ತು ಶಿಲ್ಪಗಳ, ಗ್ರಂಥಗಳಾದ ಮಾನಸಾರ, ಮಯಮತ್ ಭಾರತಕ್ಕೆ ಭೇಟಿನೀಡಿದ ವಿದೇಶಿ ಬರಹಗಾರರ ಉಲ್ಲೇಖಗಳಿಂದ ಮರದ ಬಳಕೆಯು ತಿಳಿದು ಬರುತ್ತದೆ. ಮೌರ್ಯ ಸಾಮ್ರಾಜ್ಯಕ್ಕೆ ಭೇಟಿ ನೀಡಿದ "ಮೆಗಾಸ್ತಾನೀಸನು" ತನ್ನ 'ಇಂಡಿಕ' ದಲ್ಲಿ ಮರದಿಂದ ನಿರ್ಮಿತವಾದ ಕಟ್ಟಡಗಳ ಕುರಿತು ವಿವರಣೇ ನೀಡಿರುವನು. ಅಲ್ಲದೆ ಬೌದ್ಧ ಧರ್ಮದ ಅನೇಕ ಚೈತ್ಯ ವಿಹಾರಗಳಲ್ಲಿ ಮರದ ಬಳಕೆ ಕಂಡುಬರುತ್ತದೆ. ವಿಜಯನಗರದ ದೇವಾಲಯದ ಗರ್ಭಗೃಹಗಳಿಗೆ ಮರದ ಹಲಗೆಗಳೇ ಆಧಾರವಾಗಿವೆ.೨೭ ಋಗ್ವೇದದಲ್ಲಿ ಮರಗೆಲಸಗಾರನ ಉಲ್ಲೇಖ ಬರುತ್ತದೆ. "ತಕ್ಷಣಿ ವರ್ಧಕಿ" ಎನ್ನುವ ಪದಪ್ರಯೋಗಗಳು ಇಲ್ಲವೆ ಅಥವರ್ಣ ವೇದದಲ್ಲಿ ರಥ, ಪಲ್ಲಕ್ಕಿ ಹಡಗು ನಿರ್ಮಾಣ ಕುರಿತು, ಮತ್ಸ ಪುರಾಣದಲ್ಲಿ ಆದಿಮಾನವ ಮರದಿಂದ ಮನೆ ಕಟ್ಟುತ್ತಿದ್ದನೆಂಬ ಉಲ್ಲೇಖಗಳು ಸಿಗುತ್ತವೆ. ಇಂತಹ ಹಿನ್ನೆಲೆಯಿಂದಲೇ ಇಂದು ಹಲವಾರು ಕಟ್ಟಡಗಳು ತಲೆಯತ್ತಿನಿಂತಿವೆ. ಮುಂದೆ ಮೈಸೂರು ಅರಸರ ಕಾಲದಲ್ಲಿ ಮತ್ತೆ ಈ ಮರಗೆಲಸಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಬೆಂಗಳೂರಿನ ಟಿಪ್ಪುವಿನ ಅರಮನೆ ಮರದ ಉತ್ತಮ ಕೆತ್ತನೆಗಳಾಗಿವೆ.೨೮

ಭಾರತೀಯ ಕರಕುಶಲ ಕಲೆ ಬಹು ಪುರಾತನವಾದದ್ದು ಅದರ ಪರಂಪರೆ ಬಹು ಉಜ್ವಲ, ಅದು ನಮ್ಮ ಸಂಸ್ಕೃತಿಯ ಮೂರ್ತಸ್ವರೂಪವಾಗಿರುವಂತೆಯೇ, ನಮ್ಮ ಕಲಾಪರಂಪರೆಯ ಅವಿಭಾಜ್ಯ ಅಂಗವೂ ಆಗಿದೆ. ಕಲಾತ್ಮಕ ಕೈಚಳಕ, ಹೊಸತನ ಜೀವಕಳೆ. ಮತ್ತು ರಮಣೀಯತೆಗಳಿಂದ ಕೂಡಿದ ಭಾರತೀಯ ಕರಕುಶಲ ವಸ್ತುಗಳು ಅಮೂಲ್ಯ ವಸ್ತುಗಳೆಂದು ಪರಿಗಣಿತವಾಗಿವೆ.

ಒಂದು ಕಾಲಕ್ಕೆ ಭಾರತದ ವಿದೇಶಿ ವ್ಯಾಪಾರದಲ್ಲಿ ಕರಕುಶಲ ವಸ್ತುಗಳು ಪ್ರಮಾಣವೇ ಅಧಿಕವಾಗಿರುತ್ತಿತ್ತು. ತುಂಬಾ ನವಿರಾದ ಢಾಕಾ ಮಸ್ಲಿನ್, ಮನಮೋಹಕ ಕಾಶ್ಮೀರಿಶಾಲು, ಅಂದಚಂದದ ರಾಜಸ್ಥಾನದ ಗೊಂಬೆಗಳು,

---

೨೪. ಪ್ರೊ. ಬಿ, ಷೇಕ್ ಅಲಿ : ಕರ್ನಾಟಕ ಚರಿತ್ರೆ ಸಂಪುಟ ೦೩ ಪು. ೩೭೩ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭
೨೫. ಡಾ. ಸಿ ಮಹದೇವ : ವಿಜಯನಗರದ ಗಾರೆಶಿಲ್ಪ ಪು. ೧೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦
೨೬. -ಅದೇ- ಪು. ೨೧
೨೭. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೧೬೬ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦
೨೮. -ಅದೇ- ಪು. ೨೪೭

ಚಿತ್ರವಿಚಿತ್ರ ಲೋಹ ವಸ್ತುಗಳು ಹಾಗೂ ಪಾತ್ರೆ ಪರಡಿಗಳು, ಕರ್ನಾಟಕದ ಸುಂದರ ದಂತ ಮತ್ತು ಗಂಧದ ಕೆತ್ತನೆ ಮೊದಲಾದವು ಶ್ರೇಷ್ಠ ಗುಣಮಟ್ಟದ ಹಾಗೂ ಕಲಾವಿನ್ಯಾಸಗಳಿಗೆ ಸುಪ್ರಸಿದ್ಧ.

ಭಾರತದ ಇತರ ಪ್ರದೇಶಗಳಂತೆ ಕರ್ನಾಟಕಕ್ಕೂ ಭವ್ಯ ಪ್ರಾಚೀನತೆ ಇದೆ. ಹಾಗೆಯೇ ಪಾರಂಪರಿಕ ಕರಕುಶಲ ಕಲೆಗಳಗೂ ಅದು ಅಷ್ಟೇಪ್ರಸಿದ್ದವಾಗಿದೆ. ಕರಕುಶಲಕಾರರ ಗ್ರಾಮೀಣ ಸಮುದಾಯಗಳೇ ಪಾರಂಪರಿಕವಾಗಿ ಈ ಕಲೆಗಳ ಕೇಂದ್ರ ಸ್ಥಾನಗಳಾಗಿವೆ. ಕರಕುಶಲ ಕಲೆಗಳು, ಜನ ಸಮೂಹದ ಸಹಜವಾದ ಕಲಾತ್ಮಕ ಅರಿವಿಗೆ ಮತ್ತು ಉಪಯುಕ್ತತೆಯನ್ನು ಸೌಂದರ್ಯದೊಡನೆ ಮಿಳಿತಗೊಳಿಸುವ ಅದರ ಸದಭಿರುಚಿಗೆ ಕನ್ನಡಿ ಹಿಡಿದಂತಿವೆ. ಅವುಗಳ ಮನಸ್ಸು, ಹೃದಯಗಳಿಲ್ಲದ ಯಂತ್ರಗಳ ತಯಾರಿಕೆಯಲ್ಲಿ ಪ್ರತಿಯೊಬ್ಬ ಕುಶಲಕರ್ಮಿಯು ತನ್ನ ಅದ್ಭುತವಾದ ಕೈ ಚಳಕವನ್ನು ವರ್ಣ ಮತ್ತು ವಿನ್ಯಾಸಗಳೊಡನೆ ಮೇಳವಿಸಿ ಕಡೆದ, ಅವನ ಮನಃ ಪಟಲದ ಕಲ್ಪನೆಯ ಸುಂದರ ಪ್ರತೀಕಗಳು ಜನರ ಸೌಂದರ್ಯಾಭಿಜ್ಞತೆಯನ್ನು ಕುಶಲಕರ್ಮಿಯು ಸಾಮಾನ್ಯವಾಗಿ ಕರಕುಶಲ ವಸ್ತುಗಳ ತಯಾರಿಕೆಗೆ ತನ್ನ ಕೈಚಳಕದೊಡನೆ ಪಾರಂಪರಿಕ ತಂತ್ರಜ್ಞಾನವನ್ನು ಬಳಸಿಕೊಳ್ಳುತ್ತಾನೆ. ಅವನು ತನ್ನದೇ ಆದ ಉಪಕರಣಗಳು ಸಾಮಗ್ರಿಗಳು ಮತ್ತು ವಿನ್ಯಾಸಗಳೊಡನೆ ಕೆಲವೋಮ್ಮೆ ತನ್ನ ಕುಟುಂಬದ ಸದಸ್ಯರಿಂದ ದೊರೆಯಬಹುದಾದ ನೆರವನ್ನು ಬಿಟ್ಟರೆ, ಕೇವಲ ತನ್ನ ದೈಹಿಕ ಶ್ರಮವನ್ನವಲಂಬಿಸಿ, ರಸಿಕರ ಮನರಂಜಿಸುವ ಸುಂದರ ಕರಕುಶಲ ವಸ್ತುಗಳನ್ನು ತಯಾರಿಸುತ್ತಾನೆ. ಅವನು ತಯಾರಿಸುವ ವಸ್ತುಗಳಲ್ಲಿ ಅವನ ಸ್ವತಂತ್ರ ಪ್ರವೃತ್ತಿ ಮತ್ತು ವ್ಯಕ್ತಿ ವೈಶಿಷ್ಟ್ಯಗಳು ಸಹಜವಾಗಿಯೆ ಅಭಿವ್ಯಕ್ತಿಗೊಂಡಿರುತ್ತವೆ.[೨೯]

ಭಾರತದಲ್ಲಿ ಮರ ಕೆತ್ತನೆ ಒಂದು ಅದ್ಬುತ ಸಂಪ್ರದಾಯ ಮರದಲ್ಲಿ ಕೈಗೊಳ್ಳಲಾಗುವ ಸೂಕ್ಷ್ಮ ಕೆತ್ತನೆಗಳು ದೇವಾಲಯಗಳಲ್ಲಿ ಮತ್ತು ಮಠಗಳಲ್ಲಿ ಮತ್ತು ಮಂಟಪಗಳಾಗಿ, ರಥಗಳಾಗಿ, ಕಾಷ್ಠ ಶಿಲ್ಪಗಳಾಗಿ, ಸಾಕಾರಗೊಂಡಿವೆ. ಅರಮನೆಗಳಲ್ಲಿ ಅತ್ಯಾಕರ್ಷಕ ದ್ವಾರಗಳಾಗಿ ಮನೆಗಳಲ್ಲಿ ಸುಂದರ ವಿನ್ಯಾಸದ ಕಂಬಗಳಾಗಿವೆ. ಹಿಮಾಚಲ ಪ್ರದೇಶದಲ್ಲಿನ ಸುಮಾರು ೧೦೦೦ ವರ್ಷಗಳಷ್ಟು ಪುರಾತನವಾದ ಹಿಂಡಿಂಬೆ ದೇವಾಲಯವು ಚಳಿ, ಗಾಳಿ, ಹಿಮಕ್ಕೆ ಮೈಒಡ್ಡಿದರೂ ಸ್ವಲ್ಪವೂ ಹಾನಿಯಾಗದಂತೆ ಉಳಿದಿರುವುದು ಮರದ ಸಂರಕ್ಷಣೆಗೆ ಮಾರ್ಗದರ್ಶನ ಹಾಕಿಕೊಟ್ಟಿವೆ.[೩೦]

ಮರದಲ್ಲಿ ಪೀಠೋಪಕರಣಗಳನ್ನು ತಯಾರಿಸುವಲ್ಲಿ ಪ್ರಪ್ರಥಮ ಸಂಸ್ಕೃತಿಯಂದರೆ ಈಜಿಪ್ಟ್, ಸುಮಾರು ಕ್ರಿ.ಪೂ.೩೪೦೦ ರಲ್ಲಿ ಮಾಡಲಾದ ಮರದ ಮಂಚ ಸುಪ್ಪತ್ತಿಗೆ ಮುಂತಾದವುಗಳಿಗಾಗಿ ಹಂಬಲಿಸುತ್ತದೆ. ಎಂದು ನಂಬುತ್ತಿದ್ದರಿಂದ ಗೋರಿಗಳೊಳಗೆ ಆಸನಗಳು, ಮೇಜುಗಳು, ಮಂಚಗಳು ಇತ್ಯಾದಿಗಳನ್ನು ಜೋಡಿಸಿ ಇಡುತ್ತಿದ್ದರು, ಮೃತಪಟ್ಟ ವ್ಯಕ್ತಿಯ ಸ್ಥಾನಮಾನಕ್ಕೆ ಅನುಗುಣವಾಗಿ ಈ ಮರದ ವಸ್ತುಗಳಲ್ಲಿ ದಂತ ಅಥವಾ ಪ್ರಶಸ್ತಿ ಹರಳುಗಳು ಅಥವಾ ಚಿನ್ನ ಹುದುಗಿಸಿ ಅಲಂಕೃತಗೊಳಿಸಲಾಗುತ್ತಿತ್ತು. ಎತ್ತರದ ಹಿಂಬದಿಯುಳ್ಳ ಆಸನಗಳು ಸ್ಫಿಂಕ್ಸ್ ಅಥವಾ ಪ್ರಾಣಿ ಸ್ವರೂಪದ ದೇವತೆಯ ಆಕಾರದಲ್ಲಿದ್ದು ಅವುಗಳ ಕಾಲು ಸಿಂಹದ ಪಂಜಗಳಾಗಿದ್ದವು.[೩೧]

ಮನುಷ್ಯ ತನ್ನ ಬದುಕನ್ನು ಸುಂದರವಾಗಿಸಿಕೊಳ್ಳಲು ಅನೇಕ ಬಗೆಯ ಕಲೆಗಳನ್ನು ಸೃಷ್ಟಿಸಿಕೊಂಡು ಬಂದಿದ್ದಾನೆ. ತಾನು ದಿನನಿತ್ಯ ಉಪಯೋಗಿಸುವ ಅನೇಕ ಬಗೆಯ ವಸ್ತುಗಳಲ್ಲಿ ಕಲೆಯನ್ನು ತುಂಬಿ ಸುಂದರಗೊಳಿಸಿದ್ದಾನೆ. ಕೆಲವು ವಸ್ತುಗಳನ್ನು ಚಿತ್ರಗಳಿಂದ ಅಲಂಕರಿಸಿದ್ದರೆ, ಇನ್ನೂ ಕೆಲವು ವಸ್ತುಗಳನ್ನು ಶಿಲ್ಪಗಳ ಕೆತ್ತನೆಯಿಂದ ಸಾಲಂಕೃತಗೊಳಿಸಿದ್ದಾನೆ. ಸೌಂದರ್ಯಪ್ರಜ್ಞೆಯನ್ನು ಮೆರೆದಿದ್ದಾನೆ.[೩೨] ನಮ್ಮ ಬಯಲು ಸೀಮೆಯ ಜನರಿಗೆ ಹೆಚ್ಚಾಗಿ ದೊರಕುವ ಮರವಾಗಿ ಮಾಧ್ಯಮವಾಗಿ ಬೇವಿನಿಂದ ಹಲಗೆ, ಕಂಬ, ಬಾಗಿಲು ದ್ವಾರ, ತೊಲೆ, ಜಂತಿಗಳನ್ನು, ಆಟಿಕೆ ಸಾಮಾನು ಮಾಡಲಾಗುತ್ತದೆ.

೨೯. ಜಿ.ಎಂ ಚಂದ್ರಶೇಖರಯ್ಯ : ಕರ್ನಾಟಕದ ಕರಕುಶಲ ಕಲೆಗಳು ಪು ೦೩ ಐ.ಬಿ ಹೆಚ್ ಪ್ರಕಾಶನ್ ಬೆಂಗಳೂರು ೧೯೮೩

೩೦. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೩೫ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೩೧. ಡಾ. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ ೨ ಪು. ೧೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೩೨. ರಪಿ ನಾಯಕ : ಕಿನ್ನಾಳ ಕಲೆ ಪು. ೩೪ ಎಂ.ಫಿಲ್ ಅಪ್ರಕಟಿತ ಮಹಾಪ್ರಬಂಧ ಕನ್ನಡ ವಿಶ್ವ ವಿದ್ಯಾಲಯ ೨೦೦೬

ಮರ ಇಲ್ಲವೆ ಕಟ್ಟಿಗೆಯನ್ನು ದಿಮ್ಮೆ, ದಾರು ಎಂದು ಕರೆಯುತ್ತಾರೆ. ಕಟ್ಟಿಗೆ ಅಥವಾ ಮರ ಮಾನವನ ಬದುಕಿನ ಒಂದು ಭಾಗವೆ ಆಗಿದೆ. ಅದು ಹಲವು ವಿಧಗಳಲ್ಲಿ ಹಲವು ಉದ್ದೇಶಗಳಿಗಾಗಿ ಸಾವಿರಾರು ವರ್ಷಗಳಿಂದ ಬಳಸಲ್ಪಡುತ್ತದೆ. ಇದು ಜನನದಿಂದ ಮೊದಲ್ಗೊಂಡು ಮರಣದವರೆಗೂ ಅದು ಮನುಷ್ಯನಿಗೆ ಪ್ರಯೋಜನಕಾರಿಯಾಗಿದೆ. ಭಾರತದಲ್ಲಿ ಕಟ್ಟಿಗೆಯ ಕಲಾತ್ಮಕ ಬಳಕೆಯು ಸಿಂದೂ ಸಂಸ್ಕೃತಿಯಷ್ಟು ಪ್ರಾಚೀನ ಆಗ ಮರದಕಂಬ ತೊಲೆಗಳಿಂದ ಕಟ್ಟಡ ರಚನೆಯಾಗುತ್ತಿತ್ತು. ಋಗ್ವೇದ, ಬೃಹತ್ ಸಂಹಿತಿ ವಿಷ್ಣುಧರ್ಮೋತ್ತರಗಳಲ್ಲಿ ಬಡಗಿಯ ಕಲೆಯ ಪ್ರಸ್ತಾಪವಿದೆ. ಮೌರ್ಯರ ಅರಮನೆಗಳು ಮರದಿಂದಲೇ ನಿರ್ಮಿತವಾದವುಗಳಾಗಿವೆ.[33] ಎಂದು ಹೇಳುತ್ತಾರೆ.

ಮರದ ಬಳಕೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಕುರುಹು ಬಳ್ಳಾರಿ ಜಿಲ್ಲೆಯಲ್ಲಿ ಲಭ್ಯವಿದೆ. ಜಿಲ್ಲೆಯ ತೆಕ್ಕಲುಕೋಟೆ ಮತ್ತು ಸಂಗನಕಲ್ಲುಗಳಲ್ಲಿ ನಡೆದ ಉತ್ಖನನದಿಂದ ದೊರೆತ್ತಿವೆ. ಮೆಗಾಸ್ತನೀಸ್ ತನ್ನ ಬರಹದಲ್ಲಿ ರಾಜಧಾನಿ ಪಾಲಿಭೋಥ್ರದ (ಪಾಟಲೀಪುತ್ರ) ಗೋಡೆಗಳನ್ನು ಮರದಿಂದ ನಿರ್ಮಿಸಲಾಗಿತ್ತೆಂದು ತಿಳಿಸುತ್ತಾನೆ. ಪಾಟಲೀಪುತ್ರ ಇಂದಿನ ಬಿಹಾರದ ರಾಜಧಾನಿ ಪಾಟ್ನಾ ಆಗಿದ್ದು. ಇಲ್ಲಿ ನಡೆದ ಉತ್ಖನನಗಳು ಮೆಗಾಸ್ತನೀಸನ ಹೇಳಿಕೆಯನ್ನು ಸಮರ್ಥಿಸಿವೆ. ಉತ್ಖನನದ ಸಂದರ್ಭದಲ್ಲಿ ಅರಮನೆಗೆ ಸಂಬಂಧಿಸಿದ ಮರದ ಅವಶೇಷಗಳು ದೊರೆತಿವೆ. ಒಟ್ಟಾರೆ ಭಾರತದಲ್ಲಿ ಕ್ರಿ.ಪೂ. ೪೦೦ ರಲ್ಲಿ [34] ಮರದ ಬಳಕೆಯನ್ನು ಕಟ್ಟಡಗಳಿಗೆ ಉಪಯೋಗಿಸುತ್ತಿದ್ದರು. ಎಂದು ತಿಳಿದು ಬರುತ್ತದೆ.

ಭಾರತೀಯ ಕಲಾರಂಗದ ವಿಶಿಷ್ಟ ಸಂದರ್ಭವೊಂದರಲ್ಲಿ 'ಜಾಮಿನಿರಾಯ್' ರವರು ೧೯೫೨ ರಲ್ಲಿ ಜೇಡಿಮಣ್ಣಿನ ಶಿಲ್ಪಗಳ ಸೃಷ್ಟಿಗೆ ತೊಡಗಿದ. ತಮ್ಮ ಬಾಳಿನ ಅಂತ್ಯದವರೆಗೂ ಚಿತ್ರಿಸುತ್ತಿದ್ದ ಕಲಾವಿದ ಜಾಮಿನಿರಾಯ್ ಬಿಡುವಿನ ವೇಳೆ ಈ ಮಾಧ್ಯಮದಿಂದ ಉಪಯೋಗ ಪಡೆಯತೊಡಗಿದರು. ಅಲ್ಲದೆ ಇವರು ಮಣ್ಣಿನ ಬಣ್ಣ ಮತ್ತು ಜೇಡಿಮಣ್ಣು ಅಥವಾ ಸುಣ್ಣ ಸವರಿದ ಹತ್ತಿಯ ಬಟ್ಟೆ ಅಥವಾ ಕಾಗದ ಮತ್ತು ಮರದ ಹಲಗೆಗಳನ್ನು[35] ಬಳಸುತ್ತಿದ್ದರು ಇಲ್ಲಿ ಮಣ್ಣು ಮತ್ತು ಮರದ ಬಳಕೆಯು ಇದೆ.

ಮಣ್ಣು ಮೇಣದಂತಹ ಪದಾರ್ಥಗಳನ್ನು ಉಪಯೋಗಿಸಿ, ಮೆತ್ತುತ್ತಾ ಆಕಾರ ಗಾತ್ರವನ್ನು ನೀಡುವ ಬಗೆಯನ್ನು ರೂಪಣಿ ಅಥವಾ 'ಅಡಿಷನ್ ಮೆಥೆಡ್' ಎನ್ನುವರು.[36] ಈ ಪದ್ದತಿಯು ಇಂದು ಕುಶಲ ಕಲೆಯಲ್ಲಿಯೂ ಕಾಣಬಹುದಾಗಿದೆ.

ಹೀಗೆ ಅತ್ಯಂತ ಮಹತ್ವ ಪಡೆದ ಮರ ಮಾಧ್ಯಮದಲ್ಲಿ ನಮ್ಮ ಜನಪದರು ರಚಿಸುವ ನೂರಾರು ಶಿಲ್ಪಗಳು ಮುಖ್ಯವಾಗಿ ಸೌಂದರ್ಯ, ಧರ್ಮ, ವೃತ್ತಿಯಮೂಲವಾಗಿ ಬೆಳೆದು ಬಂದಿವೆ. ಅಲ್ಲದೇ ಕಲಘಟಗಿಯು ಅರಣ್ಯ ಪ್ರದೇಶವಾದುದರಿಂದ ಇಲ್ಲಿ ಸಾಮಾನ್ಯವಾಗಿ ಬೆಳೆಯುವ ಮರಗಳು ಹೊನ್ನೆ, ಸಾಗುವಾನಿ, ಬೀಟೆ, ನಂದಿ, ಮುಂತಾದವುಗಳಾಗಿವೆ. ಇಂತಹ ಯೋಗ್ಯವಾದ ಮರಗಳು ಬೆಳೆಯುವುದರಿಂದ ಇಲ್ಲಿಯ ಕಲಾವಿದರು ಹಚ್ಚಾಗಿ ಸಾಗುವಾನಿ ಮರವನ್ನೇ ಪೀಠೋಪಕರಣಗಳಿಗೆ ಬಳಸುವುದಕ್ಕೆ ಕಾರಣವಾಗಿದೆ.

**ವಿವಿಧ ಬಗೆಯ ತೊಟ್ಟಿಲುಗಳ ಹಿನ್ನೆಲೆ**

ದೇವಾಲಯಗಳಲ್ಲಿ ತೆಂಗಿನಕಾಯಿಯನ್ನು ಒಡೆದಾಗ, ಅದು ಅಡ್ಡವಾಗಿ ಒಡೆಯದೆ ತುದಿಯಿಂದ ಜುಟ್ಟಿನವರೆಗೆ ನೇರವಾಗಿ ತೊಟ್ಟಿಲಾಕಾರದಲ್ಲಿ ಒಡೆದರೆ ಯಾರು ತೊಟ್ಟಿಲು ಗಾಯಿ ಒಡೆದರೋ ಅವರಿಗೆ ಹೆಣ್ಣು ಮಗುವೇ ಆಗುತ್ತದೆಂದು ನಂಬಿಕೆ. ಯಾರ ಮನೆಯಲ್ಲಿ ತೊಟ್ಟಿಲುಗಾಯಿ ಬೀಳುತ್ತದೆಯೋ ಅವರ ಮನೆಯಲ್ಲಿ ತೊಟ್ಟಿಲು ಕಟ್ಟುತ್ತಾರೆಂದೂ ನಂಬಿಕೆಗಳಿವೆ. ಕರ್ನಾಟಕದಲ್ಲಿಯೂ ಇಂತಹ ತೊಟ್ಟಿಲುಗಾಯಿ

---

೩೩. ಡಾ. ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೯೧ ಅಪ್ರಕಟಿತ ಪಿಹಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೩೪. ಡಾ. ಸಿ ಮಹದೇವ : ಬಳ್ಳಾರಿ ಜಿಲ್ಲೆಯ ಮರದ ವಾಸ್ತು ಪು. ೦೫ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೩೫. ಕೆ.ವಿ.ಸುಬ್ರಹ್ಮಣ್ಯಂ : ಕಲಾಸಂವೇದನೆಯ ಒಳನೋಟಗಳು ಪು. ೭೭ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೭

೩೬. ವಿಜಯಾರಾವ್ : ಶಿಲ್ಪಕಲೆ ಪುಟ. ೯ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೫

ಒಡೆಯುವುದು ಶುಭ ಸೂಚಕವಾಗಿದೆ.[೩೭] ಹಸಲರ ಜನಾಂಗದಲ್ಲಿ ಎರಡು ರೀತಿಯ ತೊಟ್ಟಿಲುಗಳನ್ನು ಬಳಸುವ ಪದ್ಧತಿ ಇದೆ. ಮೊದಲನೆಯದಾಗಿ 'ಹೂವಿನ ತೊಟ್ಟಿಲು' ಹಾಗೂ 'ಮಂಕಟ ತೊಟ್ಟಿಲು' ನಾಮಕರಣ ಸಂದರ್ಭದಲ್ಲಿ ಸೂಲಗಿತ್ತಿಯನ್ನು ಕರೆಯಿಸಿ ತೊಟ್ಟಿಲು ಪೂಜೆಮಾಡಿ ತೆಂಗಿನ ಕಾಯಿ ಒಡೆದು ಮಗುವನ್ನು ತೊಟ್ಟಿಲಿಗೆ ಹಾಕುತ್ತಾರೆ. ಮತ್ತೆ ಇವರಲ್ಲಿ ಅಡಿಕೆ ಹಾಳೆಗಳನ್ನು ಸೇರಿಸಿ ತೊಟ್ಟಿಲು ತಯಾರಿಸುತ್ತಾರೆ. ಗೌಳಿಗರ ಜನಾಂಗದಲ್ಲಿ ನಾಮಕರಣಕ್ಕೆ ಹೊಸ ತೊಟ್ಟಿಲೇ ಬೇಕೆಂಬ ನಿಯಮವಿಲ್ಲ[೩೮] ಹಾಗೂ ಬೇರೆಯವರ ತೊಟ್ಟಿಲನ್ನು ಇವರು ಬಳಸುವದಿಲ್ಲ.

ಮಕ್ಕಳನ್ನು ಮಲಗಿಸಲು ಬಳಸುವ ಒಂದು ಸಾಧನ ಶ್ರೀ ಕೃಷ್ಣ ಜನ್ಮಾಷ್ಟಮಿಯಂದು ಕೃಷ್ಣನ ಮೂರ್ತಿಯನ್ನು ಪುಟ್ಟ ತೊಟ್ಟಿಲಲ್ಲಿ ಹಾಕಿ ತೂಗುವ ಸಂಪ್ರದಾಯವಿದೆ. ಮಕ್ಕಳಿಲ್ಲದವರು ತಮಗೆ ಮಕ್ಕಳಾದರೆ ದೇವರಿಗೆ ತೊಟ್ಟಿಲನ್ನು ಅರ್ಪಿಸುವ ಹರಕೆ ಹೊರುತ್ತಾರೆ. ಬೇಡಿಕೆ ಈಡೇರಿದಾಗ ತಮ್ಮ ದೇವರಿಗೆ ಬಂಗಾರದ ಅಥವಾ ಬೆಳ್ಳಿಯ ತೊಟ್ಟಿಲನ್ನು ಮಾಡಿಸುವದುಂಟು. ದಕ್ಷಿಣ ಕನ್ನಡ ಜಿಲ್ಲೆಯ ಹಿಂದೂಳಿದ ಜನಾಂಗದವರಲ್ಲಿ ತೊಟ್ಟಿಲಿಗೆ ಚೆನ್ನಾಯಿರ (ಒಂದು ಬಗೆಯ ಗಿಡ) ಬಳ್ಳಿಯನ್ನು ಕಟ್ಟುತ್ತಾರೆ. ಇದರಿಂದ ದುಷ್ಟ ಶಕ್ತಿಗಳು ಮಗುವಿಗೆ ಬೀಳಬಾರದೆಂದು ನಂಬಿಕೆ. ಕೊಳ್ಳೇಗಾಲಕ್ಕೆ ಸಮೀಪ ವಿರುವ ತಾಳೆಮಲೆಯಲ್ಲಿ ಮಕ್ಕಳ ಫಲಕ್ಕಾಗಿ ಹರಕೆ ಹೊತ್ತುಕೊಂಡವರು ಚಿನ್ನ ಬೆಳ್ಳಿಯ ತೊಟ್ಟಿಲು ಶಿಶುವನ್ನು ಮಾಡಿಸಿ ಇಲ್ಲಿರುವ ಮರಗಳಿಗೆ ತೂಗುಬೀಡುವ ಪದ್ಧತಿಯೂ ಇದೆ. ಜನಪದ ಕಥೆಗಳಲ್ಲಿ ಕೊತರೆ ಬೇಕಾದಲ್ಲಿ ಕೊಂಡ್ಯೊಯುವ ತೊಟ್ಟಿಲು ಪ್ರೇರೆಣೆಯಿದೆ. ಬರೀ ತೊಟ್ಟಿಲನ್ನು ತೂಗಬಾರದು ತೂಗಿದರೆ ಮಗುವಿಗೆ ಹೊಟ್ಟೆನೋವು ಬರುತ್ತದೆ ಎಂಬ ನಂಬಿಕೆ ಇದೆ. ತವರಿನಲ್ಲಿ ಬಾಣಂತನ ಮುಗಿಸಿ ಹೊರಡುವ ಹೆಣ್ಣು ಮಕ್ಕಳಿಗೆ ತವರಿನವರೇ ತೊಟ್ಟಿಲನ್ನು ಕೊಡುತ್ತಾರೆ. ಈ ಬಗೆಗೊಂದು ಹಾಡು ಇದೆ.

**ತೊಟ್ಟಿಲು ಹೊತ್ಕೊಂಡು ತೌರಬಣ್ಣ ಉಟ್ಕೊಂಡು**
**ಅಪ್ಪ ಕೊಟ್ಟೆಮ್ಮೆ ಹೊಡ್ಕೊಂಡು ತಂಗ್ಯೆವ್ವ**
**ತಿಟ್ಹತ್ತಿ ತಿರುಗಿ ನೋಡ್ಯಾಳ**

ಜೋಗುಳದಿಂದ ತೊಟ್ಲು ಆಡುವುದೇ? ತೊಟ್ಟಿಲೊಳಗಣ ಕೂಸಾದರೂ ಅತ್ತ ಹೊರತು ಹಾಲು ಕೊಡರು ತೊಟ್ಟಿಲು ತೂಗುವ ಕೈ ದೇಶವನ್ನು ಆಳಬಲ್ಲದು.[೩೯] ಎಂಬ ಗಾದೇ ಮಾತುಗಳು ನಮ್ಮ ಹಿರಿಯರಲ್ಲಿ ಇಂದಿಗೂ ಕೇಳಬಹುದು.

ಮಕ್ಕಳ ಫಲಕ್ಕಾಗಿ ಮಾಡುವ ಶಾಸ್ತ್ರವು ಇದೆ. ಅದೇ "ತೊಟ್ಟಿಲು ಕಟ್ಟುವ ಶಾಸ್ತ್ರ" ಪದ್ಧತಿಯು ರೋಣ ತಾಲೂಕಿನ ಶ್ರೀ ಕ್ಷೇತ್ರ ಸ್ಥಳವಾದ ಇಟಗಿಯ ಶ್ರೀ ಭೀಮಾಂಬಿಕಾ ದೇವಸ್ಥಾನದಲ್ಲಿ ತೊಟ್ಟಿಲು ತೂಗುವುದು. ಈ ತೊಟ್ಟಿಲಿಗೆ ಹರಕೆಯ ಕಾಯಿಯನ್ನು ಮಕ್ಕಳ ಫಲಕ್ಕಾಗಿ ಕಟ್ಟಿರುವುದು ಇಂದಿಗೂ ಸಹ ನೋಡಬಹುದಾಗಿದೆ. ಬೇಡಿಕೆ ಈಡೇರಿದಾಗ ಇಲ್ಲಿಯೂ ಸಹ ಕಾಯಿಯನ್ನು ಬಿಚ್ಚಿ ಒಡೆಸುತ್ತಾರೆ. ಹಂಪೆಯ ವಿಜಯ ವಿಠ್ಠಲ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಬೃಹತ್ತಾದ ಮರಕ್ಕೆ ಕಟ್ಟಿರುವ ಹರಕೆಯನ್ನು ನೆನೆಪಿಸುತ್ತವೆ. ಹಾಗೇ ಕಲ್ಲುಗಳ ಮೇಲೆ ಕಲ್ಲುಗಳನ್ನು ಇಟ್ಟಿರುವುದನ್ನು ಕಾಣುತ್ತೇವೆ. ಶ್ರೀ ಕ್ಷೇತ್ರವಾದ ಸೌದತ್ತಿಯ ಯಲ್ಲಮ್ಮನ ಗುಡ್ಡದಲ್ಲಿಯೂ ಕಲ್ಲುಗಳ ಮೇಲೆ ಕಲ್ಲುಗಳನ್ನು ಇಟ್ಟಿರುವುದು ಇದೇ ಸಂಕೇತವಾಗಿರಬಹುದು ಇನ್ನೂ ಕೆಲವು ಗ್ರಾಮಗಳಲ್ಲಿ ದೇವಾಸ್ಥಾನದ ಮುಂದೆ ಇರುವ ಮರಗಳಿಗೆ ಬಟ್ಟೆಯಲ್ಲಿ ಕಲ್ಲುಗಳನ್ನು ಇಟ್ಟು ಕಟ್ಟಿರುತ್ತಾರೆ.

ಗೊಂಡರು ಎಂಬ ಜನಾಂಗದವರು ನಾಮಕರಣ ಸಂದರ್ಭದಲ್ಲಿ ತೊಟ್ಟಿಲಿಗೆ ತಂದೆಯ ಕೈ ಮುಟ್ಟಿಸಬೇಕು ಎಂಬ ನಿಯಮವಿದೆ. ತೊಟ್ಟಿಲಿಗೆ ಮಗುವನ್ನು ಹಾಕುವಾಗ ಮಗುವಿಗೆ ಎಣ್ಣೆಹಚ್ಚಿ ಅಣ್ಣತುಪ್ಪ ಕಲಿಸಿ ಮಗುವಿನ

---

೩೭ ಡಾ. ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೯೬೬ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೩೮. ಗಂಗಾಧರ ದೈವಜ್ಞ : ಬುಡಕಟ್ಟು ಸಮಾಜ – ಹುಟ್ಟು ಸಾವಿನ ನಡುವೆ ಅಧ್ಯಯನಮಾಲೆ-೨ ಪು. ೨೯-೩೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೩೯. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೯೬೫-೯೬೬ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಬಾಯಿಗೆ ತಾಗಿಸುತ್ತಾರೆ. ಮಗುವಿಗೆ ಯಾವ ಹೆಸರನ್ನು ಇಡಬೇಕೆಂದು ಅಲ್ಲಿಯ ಹೆಂಗಸರು ತಂದೆಯನ್ನು ಕೇಳುತ್ತಾರೆ ಅವನು ಹಿರಿಯರ ಹೆಸರನ್ನು ಸೂಚಿಸುತ್ತಾನೆ. ಮೊದಲು ಗಿರಸೆ ಧ್ಯಾನದೊಂದಿಗೆ ಸಣ್ಣ ಕಲ್ಲಿಗೆ ಬಟ್ಟೆಸುತ್ತಿ ಮಗುವಿನ ರೂಪಮಾಡಿ ತೊಟ್ಟಿಲಿಗೆ ಹಾಕಿ ಹೆಸರು ಸೂಚಿಸುತ್ತಾ ತೊಟ್ಟಿಲು ತೂಗುತ್ತಾ ಹಾಡು ಹೇಳುತ್ತಾರೆ. ಮಗುವಿನ ರೂಪದ ಕಲ್ಲನ್ನು ತೊಟ್ಟಿಲಿಗೆ ಹಾಕಿ ನಿವಾಳಿಸುವುದರಿಂದ ಯಾವ ದೃಷ್ಟಿ ದೋಷಗಳು ತಗಲುವುದಿಲ್ಲ ಎಂಬ ಕಲ್ಪನೆ ಇವರದು.[೪೦] ನಮ್ಮಲ್ಲಿ ಮಗುವಿಗೆ ಕಪ್ಪು ಕಾಡಿಗೆ ಹಚ್ಚುವುದು ಇದೇ ಕಾರಣದಿಂದ ಹಾಗೂ ಮಗು ಬಹಳ ಅಳತೊಡಗಿದರೆ ದೃಷ್ಟಿಯಾಗಿದೆ ಎಂದು ಮೆನಸಿನಕಾಯಿ, ಉಪ್ಪು, ಪರಕೆಯ ಕಡ್ಡಿಯನ್ನು ಮಗುವಿನ ಮುಖದಿಂದ ಕಾಲುತುದಿಯವರೆಗೂ ಮೂರುಬಾರಿ ಮೆಲಕ್ಕೆ ಕೆಳಕ್ಕೆ ಒಯ್ಯುದು ಒಲೆಯಲ್ಲಿ ಹಾಕುವುದು ಇಂದಿಗೂ ನೋಡಬಹುದು.

ಈ ನಾಮಕರಣ ಸಂಪ್ರದಾಯವು ಹಲವಾರು ಜನಾಂಗಗಳಲ್ಲಿ ಹಲವಾರು ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಇದಕ್ಕೆ "ತೊಟ್ಟಿಲು ಶಾಸ್ತ್ರ"ಎಂದು ಕರೆಯುತ್ತಾರೆ. ಇದು ಸಾಮಾನ್ಯವಾಗಿ ರಾತ್ರಿ ವೇಳೆ ನೆಡೆಯುತ್ತದೆ. ಅಂದು ಮನೆಯನ್ನು ಅಲಂಕರಿಸಿ ತೊಟ್ಟಿಲನ್ನು ಹೂಗಳಿಂದ ಅಲಂಕರಿಸಿ ತುಳಸೆಯ ಪೂಜೆಯಮಾಡಿ ಮರದಲ್ಲಿ ಮಲಗಿದ ಮಗುವನ್ನು ಹೊಸ ತೊಟ್ಟಿಲಿಗೆ ಹಾಕಿ ಮುತ್ತೈದಿಯರು ಮುದ್ದಾಡಿ ಜೋಗುಳ ಹಾಡು ಹಾಡುತ್ತಾರೆ.

ಮಕ್ಕಳಿಗೋಸ್ಕರ ತೊಟ್ಟಿಲು ಕೊಂಡಿಗಳನ್ನು ಮನೆಯ ಪೂರ್ವ, ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಹಾಕುವುದು ಅತ್ಯಂತ ಶ್ರೇಷ್ಠವು ಎಂದು ಶ್ರೀಮತಿ ವಿಶಾಲಕ್ಷಾಂಬಾಯಿತಾಯಿಯವರು ತಮ್ಮ ನೂತನ ಗ್ರಹವಾಸ್ತು ದರ್ಪಣ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.[೪೧]

ಕರ್ನಾಟದಕದಲ್ಲಿಯೂ ಇದ್ದಂತೆ ಮಹಾರಾಷ್ಟ್ರದಲ್ಲಿ ಮಗುವಿನ ನಾಮಕರಣದಂದು ವಿಶೇಷವಾಗಿ ಆಚರಣೆಯಿದೆ, ಜನನವಾದೊಡನೆ, ಸಂತಸದ ಪ್ರತೀಕವಾಗಿ ಸನಾದಿ ಊದುವುದು, ನಗಾರಿ, ನೌಬತ್ತು ಮತ್ತು ಇನ್ನೆರಡು ವಾದ್ಯಕೂಡಿ ಬಾರಿಸುವ ರೂಢಿ ಇದೆ. ಇಲ್ಲಿ ನಾಮಕರಣಕ್ಕಿಂತ ಮೊದಲೆ ಅಂದರೆ ಜನನವಾದ ದಿನವೇ ಸಕ್ಕರೆ, ಪೇಡೆ, ಬರ್ಫಿ, ಹಂಚುವುದಕ್ಕಾಗಿ ಒಬ್ಬ ಆಳನ್ನು ಅಟ್ಟುವ ಪದ್ಧತಿ ಇದೆ. ಮಗುವನ್ನು ತೊಟ್ಟಿಲಿಗೆ ಹಾಕುವದಿವಸ ಮುತ್ತೈದೆಯರನ್ನು ಕರೆದು ಬಾಣಂತಿ ಮತ್ತು ಕೊನೆಗೆ ಆರತಿ, ಪಂಚಾರತಿ ಬೆಳಗಿ, ಖಣ-ತೆಂಗಿನ ಕಾಯಿಯಿಂದ ಉಡಿ ತುಂಬಿ, ಕೂಸಿನ ಮೈಮೇಲೆ ಬಾಲ-ಉಡುಗೆ ಇಟ್ಟು ದೇವಾದಿ ದೇವತೆಗಳನ್ನು ಕುರಿತು ಹಾಡು ಹೇಳಿ ಎಲ್ಲರಿಗೂ ಗುಗ್ಗರಿ, ಪೇಡೆ, ಬರ್ಫಿ, ಹಂಚಿ , ಕೂಸಿಗೆ ಹೆಸರಿಡುವ ಸಮಾರಂಭವು ಇಲ್ಲಿ ಅತ್ಯಾನಂದದಿಂದ ಆಚರಿಸಲಾಗುತ್ತದೆ.[೪೨] ಇಂಥ ಸಂಪ್ರದಾಯವು ಕರ್ನಾಟಕದಲ್ಲಿ ಸ್ವಲ್ಪ ಭಿನ್ನವಾಗಿ ಕಂಡುಬರುತ್ತದೆ.

ಇವರಲ್ಲಿ ಪುತ್ರ ಪ್ರಾಪ್ತಿಗಾಗಿ ಸ್ತ್ರೀಯರು ಹರಕೆ ಕಟ್ಟುವಾಗ- ಕುಲಾಚಾರದಂತೆ ಸೂರ್ಯನಿಗೆ ತೊಟ್ಟಿಲನ್ನು ಅರ್ಪಿಸುತ್ತಾರೆ. ಎಂಬ ಉಲ್ಲೇಖವು ಶ್ರಾವಣದಲ್ಲಿ ಹೇಳಲಾಗುವ ಆದಿತ್ಯವಾರದ ಆದಿತ್ಯ ರಾಣುಭಾಯಿ ಕೆಥೆಯಲ್ಲಿ ಬರುತ್ತದೆ.[೪೩] ಎಂದು ಸರೋಜಿನಿ ಬಾಬರ್ ಅವರು 'ಮಹಾರಾಷ್ಟ್ರದ ಜನಪದ ಸಾಹಿತ್ಯ' ಎಂಬ ಪುಸ್ತಕದಿಂದ ತಿಳಿದುಕೊಳ್ಳಲಾಯಿತು. ಕರ್ನಾಟಕದಲ್ಲಿ ಈ ಸಂಪ್ರದಾಯವು ಇದ್ದು ಬೇರೆ ರೀತಿಯ ಆಗಿದೆ. ಇಲ್ಲಿ ಸ್ಥಳೀಯ ದೇವತೆಗಳಾದ ದ್ಯಾಮವ್ವ, ದುರ್ಗಮ್ಮಾ, ಹೀಗೆ ಮುಂತಾದ ದೇವತೆಗಳಿಗೆ ಹರಕೆ ಸಂಪ್ರದಾಯವು ಹಲವಾರು ಜನಾಂಗ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ಇದಕ್ಕೆ 'ತೊಟ್ಟಿಲು

---

೪೦. ಗಂಗಾಧರ ದೈವಜ್ಞ : ಬುಡಕಟ್ಟು ಸಮಾಜ - ಹುಟ್ಟು ಸಾವಿನ ನಡುವೆ ಅಧ್ಯಯನಮಾಲೆ-೨ ಪು. ೩೪ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೪೧. ಶ್ರೀಮತಿ ವಿಶಾಲಾಕ್ಷಾಂಬಾತಾಯಿ : ನೂತನ ಗ್ರಹವಸ್ತು ದರ್ಪಣ ಪು. ೩೫ ಪ್ರಕಾಶಕರು ಮತ್ತು ಗ್ರಂಥಕರ್ತರು, ಶ್ರೀಮತಿ, ವಿಶಾಲಾಕ್ಷಾಂಬಾತಾಯಿ ಪಂಡಿತ ತೋಟಪ್ಪಯ್ಯ ಶಾಸ್ತ್ರಿಗಳು ಹಿರೇಮಠ ಅಸಲೀ (ನಿಜ) ಬಸವೇಶ್ವರ ಪಂಚಾಂಗ ಕರ್ತರು, ಗದಗ

೪೨. ಸರೋಜಿನಿ ಬಾಬರ್ : ಮಹಾರಾಷ್ಟ್ರದ ಜನಪದ ಸಾಹಿತ್ಯ ಪು. ೨೬ ನ್ಯಾಷನಲ್ ಬುಕ್ ಟ್ರಸ್ಟಾಫ್ ಇಂಡಿಯಾ ದೆಹಲಿ ೧೯೭೨

೪೩. -ಅದೇ- ಪು. ೧೭

ಶಾಸ್ತ್ರ' ಎಂದು ಕರೆಯುತ್ತೇವೆ. ಮಹಾರಾಷ್ಟ್ರದ ಸಂಪ್ರದಾಯದಲ್ಲಿ ನಾಮಕರಣದಂದು ಜನಪದ ಹಾಡು ಹೀಗಿದೆ. ಇದು ಮರಾಠಿ ಭಾಷೆಯಾಗಿದೆ.

*ಮೊದಲನೆಯ ದಿವಸ– ಮುತ್ತು ಹವಳದ ದಾನಾ*
*ಆನೆಯ ಮೇಲೆ ಅಂಬಾರಿ ಸವಾರಿ – ಜೂಜೂರೇ, ಜೂ*
*ಎರಡನೆಯ ದಿವಸ – ಬಚ್ಚಲು ಮನೆಯಲ್ಲಿ*
*ಹನ್ನೆರಡು ಜನ ನೀರು ತುಂಬಿ, ಮಗರಾಜನ ಸ್ನಾನದ ಸಿದ್ಧತೆ ಮಾಡಿದರು – ಜೂಜೂರೇ, ಜೂ*
*ಮೂರನೆಯ ದಿವಸ – ಬಂಗಾರದ*
*ತಟ್ಟೆಯ ಆರತಿ ಬೆಳಗಿದರು _ ಜೂಜೂರೇ, ಜೂ*
*ನಾಲ್ಕನೆಯ ದಿವಸ – ಅಕ್ಕಸಾಲಿಗಾ ಎಂದು*
*ಕೈಕಾಲು ಕೊರಳು ಆಭರಣ ಮಾಡಿಕೊಟ್ಟಾ _ ಜೂಜೂರೇ, ಜೂ,*
*ಐದನೆಯ ದಿವಸ _ ಬಿಳಿರಾಯ ಬಂದಾ*
*ಘಂಟೆಯ ನಾದಾ, ಪಂಚಾಂಗ ಹಂಚಿದರು _ ಜೂಜೂರೇ, ಜೂ*
*ಆರನೆಯ ದಿವಸ – ಬರುಹೋಗುವವರಿಗೆ ಮಾನಾ*
*ತಂದೆ ತಾಯಿಯ ಗೌರವಾ – ಜೂಜೂರೇ, ಜೂ*
*ಏಳನೆಯ ದಿವಸ – ಷಟೆಗೆವ್ವ ಬಂದಳು ಬರೆದಳು ಹಣೆ ತುಂಬಾ*
*ಮುವತ್ತು ಮೂರು ಕೋಟಿ ದೇವರ ಮುಂದಾ – ಜೂಜೂ ರೇ, ಜೂ*
*ಎಂಟನೆಯ ದಿವಸ – ಕೂಸಿಗೆ ಸ್ನಾನಾ*
*ಹೊಸ ಹೊಸ ತನಾ, ದಿನಾ ದಿನಾ ನೋಡು _ ಜೂಜೂರೇ, ಜೂ*
*ಒಂಭತ್ತನೆಯ ದಿವಸ – ಉತ್ತಮ ಹೆಸರು*
*ವಂಶಕ್ಕೆ ಕೀರ್ತಿ ತರುವ ಹೆಸರು ಹುಡುಕಿದರು _ ಜೂಜೂರೇ, ಜೂ*
*ಹತ್ತನೆಯ ಮತ್ತು ಹನ್ನೊಂದನೆಯ  ದಿವಸ*
*ಮುನ್ನೂರು ಅರವತ್ತು ಊದಿನ ಕಡ್ಡಿ ಹಚ್ಚಿದ್ದರೂ – ಜೂಜೂರೇ, ಜೂ* [೪೪]
*ಹನ್ನೆರಡನೆಯ ದಿವಸ _ ಬಡಬಗ್ಗರಿಗೆ*
*ಆಮಂತ್ರಣ ಕೂಸಿನ ಹೆಸರು ಕೃಷ್ಣಾ _ ಜೂಜೂರೇ, ಜೂ*
*ಹದಿಮೂರನೆಯ ದಿವಸ _ ತೊಟ್ಟಿಲು ತೂಗಿದರು.*
*ಮುತ್ತು ರತ್ನದ ಮಾಲೀ ಕಟ್ಟಿದರು ತಂದಿ ತಾಯಿ*
*ಕೂಡಿ ತೊಟ್ಟಿಲು ತೂಗಿದರೂ _ ಜೂಜೂರೇ, ಜೂ* [೪೫]

ಇಂತಹ ಅನೇಕ ರೀತಿಯ ಜಾನಪದ ಹಾಡುಗಳು ಮರಾಠಾ ಜನಾಂಗದಲ್ಲಿ ನಾಮಕರಣ ಸಂದರ್ಭದಲ್ಲಿ ಕೇಳಿಬರುತ್ತವೆ.

### ೧. ತೂಗು ತೊಟ್ಟಿಲು

ತೊಟ್ಟಿಲುಗಳಲ್ಲಿ ಇಂದು ಹಲವಾರು ಪ್ರಕಾರಗಳನ್ನು ನಾವು ಕಾಣುತ್ತೇವೆ. ಪ್ರಪ್ರಥಮವಾಗಿ ಜೋಳಗಿ ತೊಟ್ಟಿಲು, ತೂಗು ತೊಟ್ಟಿಲು, ಸ್ಟ್ಯಾಂಡಿಂಗ್ ತೊಟ್ಟಿಲು, ಹೂವಿನ ತೊಟ್ಟಿಲು ಅಡಕೆಹಾಳೇ ತೊಟ್ಟಿಲು, ಶೋಕೇಸನಲ್ಲಿ ಇಡುವ ತೊಟ್ಟಿಲು ಮಂಕಟ ತೊಟ್ಟಿಲು ಮುಂತಾದವುಗಳಾಗಿವೆ, ಈ ತೊಟ್ಟಿಲು ತೂಗು ತೊಟ್ಟಿಲುವಾಗಿದೆ. ಇಲ್ಲಿ ಪ್ರಮುಖವಾಗಿ ಎರಡು ಭಾಗಗಳನ್ನು ಮಾಡಿಕೊಂಡು ಚಿತ್ರ ರಚಿಸಲಾಗಿದೆ. ಅಖಂಡವಾದ ಪಟ್ಟಕೆಯಲ್ಲಿ ಶಿವನ ಸಭೆಯ ಚಿತ್ರಗಳು ಮೂಡಿಬಂದಿವೆ. ಇಲ್ಲಿ ಮಧ್ಯದಲ್ಲಿ ಶಿವನು ನೀಲಿ ಮೈಬಣ್ಣವಾಗಿ ಅಲಂಕೃತವಾಗಿದ್ದಾನೆ.

---

೪೪. ಸರೋಜಿನಿ ಬಾಬರ್ : ಮಹಾರಾಷ್ಟ್ರದ ಜನಪದ ಸಾಹಿತ್ಯ ಪು. ೫೮ ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ದೆಹಲಿ ೧೯೭೨

೪೫ -ಅದೇ- ಪು. ೫೯

ಹುಲಿ ಚರ್ಮದೊಂದಿಗೆ ಆಭರಣಗಳನ್ನು ಧರಿಸಿದ್ದು ಕಂಡುಬರುತ್ತದೆ. ಬಲಭಾಗದಲ್ಲಿ ಪಾರ್ವತಿಯು ಹಸಿರು ವರ್ಣದ ಸೀರೆವುಟ್ಟು ಕಾಲನ್ನು ಕೆಳಗೆ ಬಿಟ್ಟಿದ್ದಾಳೆ. ಸುಂದರವಾದ ಕಿರೀಟ, ತೆಳು ನೀಲಿಬಣ್ಣದ ಕುಪ್ಪಸ ತೊಟ್ಟಿದ್ದು ಕಾಣಿಸುತ್ತದೆ. ಗಣಪತಿಯೂ ಕಿರೀಟದಾರಿಯಾಗಿ-ಗುಲಾಬಿ ಪಂಚೆಯೊಂದಿಗೆ ಶಿವನ ಎಡಗಡೆಗೆ ಕುಳಿತ್ತಿದ್ದಾನೆ. ಮೂವರು ಸುಂದರವಾಗಿ ಅಲಂಕೃತವಾದ ಪೀಠದ ಮೇಲೆ ಕುಳಿತಿದ್ದು ಹಿನ್ನೆಲೆ ಹಾವಿನ ಹಾಗೆ ಗೋಚರಿಸುವ ಹಾಗಿದೆ. ಇಲ್ಲಿ ಶಿವಗಣಗಳು ಮೂಡಿವೆ. ಆದಿತ್ಯರು, ವಸ್ತುಗಳು, ದೇವರು, ಅನಿಲರು, ತುಷಿತರು, ಅಭಾಸ್ವರರು, ರುದ್ರರು, ಸಾದ್ಯರು, ಹಾಗೂ ಮಹಾರಾಜಕರು ಅಲ್ಲದೇ ಶಿವಭಕ್ತ, ತುಂಬುರ, ಬಸವ, ಮುಕ್ಕಾಲು ಬೃಂಗಿ ಚಿತ್ರಗಳು ಮೂಡಿವೆ. ಕೆಳಭಾಗದಲ್ಲಿ ಸರಪಳಿಯಾಕಾರದ ರೇಖೆಗಳು ಗುಲಾಬಿ, ಬಿಳಿ ವರ್ಣದ ಹೂಗಳು ರಚನೆಯಾಗಿವೆ. ಚಿಕ್ಕ ಮರ ದಟ್ಟಹಸಿರು, ಮತ್ತು ಕಪ್ಪು ವರ್ಣದಲ್ಲಿ ಚಿತ್ರಿಸಿದ್ದಾರೆ. ಹಿನ್ನೆಲೆಯಾಗಿ ನೀಲಿ ಆಕಾಶದೊಂದಿಗೆ ಬಿಳಿವರ್ಣವನ್ನು ಮಿಶ್ರಣ ಮಾಡಿದ್ದಾರೆ. ಮೇಲ್ಬಾಗದಲ್ಲಿ ಹಳದಿ ವರ್ಣದಿಂದ ಬಟ್ಟೆಯನ್ನು ಹೂಮಾಲೆ ಆಕಾರದಲ್ಲಿ ಬಿಡಲಾಗಿದೆ.

ಮೊದಲನೆಯ ಪಟ್ಟಿಕೆಯಲ್ಲಿ ಆರು ಕಮಾನುಗಳನ್ನು ವಿಂಗಡಿಸಿ ಮಧ್ಯದಲ್ಲಿ ಬಣ್ಣ ಬಣ್ಣದ ಬುಗುರೆಯನ್ನು ಇಳಿಬಿಡಲಾಗಿದೆ. ಕಮಾನುಗಳ ಮಧ್ಯದ ಅಂತರದಲ್ಲಿ ಹಳದಿ ವರ್ಣದ ಎಲೆ ಹೂಗಳು ಕಾಣುತ್ತವೆ. ಮೇಲ್ಬಾಗದಲ್ಲಿ ಸರಪಳಿಯಾಕಾರದ, ಸಣ್ಣ ಸಣ್ಣ ಹೂಗಳು, ಚುಕ್ಕೆಗಳು ಮೂಡಿವೆ. ಎರಡು ಕಂಬಗಳಿಗೆ ಅಡ್ಡವಾಗಿ ಬಂದ ಕಂಬವು ನೋಡುಗರನ್ನು ದಿಗ್ಭ್ರಮೆ ಮೂಡಿಸುತ್ತದೆ. ನೋಡಲಿಕ್ಕೆ ಕಂಬವು ಚಕ್ರದ ಹಾಗೆ ತಿರುಗುತ್ತಿರುವ ಕಲ್ಪನೆ ಕಲಾವಿದ ಇಲ್ಲಿ ಮೂಡಿಸಿದ್ದಾನೆ. ವರ್ಣಗಳ ಮಿಶ್ರಣವೇ ಇದಕ್ಕೆ ಕಾರಣ ನಾಲ್ಕು ಕಂಬಗಳಲ್ಲಿ ಈ ಕಲ್ಪನೆ ಸಹಜವಾಗಿ ಮೂಡುತ್ತದೆ. ಈ ಕಲಾಕೃತಿಯಲ್ಲಿ ಹಳದಿವರ್ಣವು ಪ್ರಮುಖವಾಗಿ ಅಲ್ಲಲ್ಲಿ ಗುಲಾಬಿ, ಕಪ್ಪು, ನೀಲಿ, ಹಸಿರು, ಬಿಳಿ, ಕೆಂಪು, ವರ್ಣಗಳನ್ನು ಬಳಸಲಾಗಿದೆ.

**೨. ತೂಗು ತೊಟ್ಟಿಲು**

ಈ ಕಲಾಕೃತಿಯಲ್ಲಿ ಅಖಂಡವಾದ ಪಟ್ಟಿಕೆಯಲ್ಲಿ ಚಿತ್ರ ಮೂಡಿರುವುದು ಕಂಡುಬರುತ್ತದೆ. ಇಲ್ಲಿ ಪ್ರಮುಖವಾಗಿ ಗೋಪಾಲಕೃಷ್ಣನ ಚಿತ್ರವಿದೆ. ಕೃಷ್ಣನು ಕಿರೀಟಧಾರಿಯಾಗಿ ಕೊಳಲನ್ನು ಊದುತ್ತಾ ಗೋವುಗಳ ಕಡೆಗೆ ಕೊಳಲಿನ ಮುಖ ಮಾಡಿದ್ದಾನೆ. ಗೋವುಗಳು ನಾದದ ಸಂಗೀತವನ್ನು ಆಲಿಸುತ್ತಾಯಿವೆ. ಸುಂದರವಾದ ನಿಸರ್ಗದೊಂದಿಗೆ ಮೂಡಿದೆ. ನೀಲಿ ಆಕಾಶ ಗಿಡಮರಗಳು ಹಸಿರು ವರ್ಣದವುಗಳಾಗಿವೆ. ಕೃಷ್ಣನ ಪಂಚೆಯ ಬಣ್ಣ ಹಳದಿವರ್ಣದಲ್ಲಿ ರಚಿತವಾಗಿವೆ. ಬೃಹತ್ತಾದ ಕೆಂಪು ಮಿಶ್ರಿತ ಕಪ್ಪು ಬಂಡೆಯ ಮೇಲೆ ಕುಳಿತ್ತಿದ್ದಾನೆ. ಗೋವುಗಳು ಹಳದಿವರ್ಣದಲ್ಲಿ ರಚಿತವಾಗಿವೆ. ಈ ಪಟ್ಟಿಕೆಯ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಬಿಳಿ ವರ್ಣದ ಅತಿಸೂಕ್ಷ್ಮ ರೇಖೆಗಳನ್ನು ವೃತ್ತಾಕಾರವಾಗಿ ರಚಿಸಲಾಗಿವೆ. ಕೆಳಭಾಗದಲ್ಲಿ ಗುಲಾಬಿ, ಬಿಳಿ, ಬಣ್ಣದ ಸಣ್ಣ ಸಣ್ಣ ಹೂಗಳು ಮೂಡಿವೆ. ಮೇಲ್ಬಾಗದ ಪಟ್ಟಿಕೆಯಲ್ಲಿ ಕಮಾನು ರಚಿಸಿ ಹೂಬಳ್ಳಿಯ ನಕ್ಷಾವಿನ್ಯಾಸ ರೂಪಿಸಲಾಗಿದೆ. ಕಂಬಗಳಿಗೆ ಬಣ್ಣದ ಲೇಪನ ಅದ್ಭುತವಾಗಿದೆ. ಇಲ್ಲಿ ನೀಲಿ ವರ್ಣವನ್ನು ಅಲ್ಲಲ್ಲಿ ಬಳಸಲಾಗಿದೆ. ಅತಿ ಸೂಕ್ಷ್ಮವಾಗಿ ರಚನೆಯಾದ ರೇಖೆಗಳು ಚಿತ್ರಕ್ಕೆ ಮೆರಗು ತಂದಿವೆ.

**೩. ತೂಗು ತೊಟ್ಟಿಲು**

ಈ ತೊಟ್ಟಿಲು ತೂಗು ತೊಟ್ಟಿಲಾಗಿದೆ. ಇಲ್ಲಿ ಹೆಚ್ಚಾಗಿ ಕೆಂಪು ಮತ್ತು ಹಳದಿ ವರ್ಣಬಳಕೆಯಾಗಿದ್ದು ಕಂಡುಬರುತ್ತದೆ. ಮಧ್ಯದಲ್ಲಿ ವಿಶಾಲವಾದ, ಸ್ಥಳವಿದ್ದು ಕಲಾವಿದರೆ ಕರೆಯುವ ಹಾಗೆ ಗೊಂಬಿಎಳಗಿ ಪಟ್ಟಿಕೆಯಲ್ಲಿ ಮಧ್ಯದಲ್ಲಿ ಲಿಂಗುವಿದ್ದು ಅಕ್ಕ ಪಕ್ಕದಲ್ಲಿ ನಂದಿ ಚಿತ್ರಗಳು ಮೂಡಿವೆ. ಇಲ್ಲಿ ನಂದಿ ಬಿಳಿವರ್ಣದಲ್ಲಿ ರಚನೆಯಾಗಿದ್ದು ಕೊರಳಾಭರಣ ಬೆನ್ನ ಮೇಲೆ ಕೆಂಪು ಬಟ್ಟೆ ಇಳಿಬಿಡಲಾಗಿದೆ. ಎರಡು ನಂದಿಗಳು ಒಂದು ಬಲಗಾಲು ಮತ್ತೊಂದು ಎಡಗಾಲು ಮೇಲಕ್ಕೆ ಎತ್ತಿ ಡೊಂಕಿಸಿ ಕೆಳಗೆ ಇಳಿಬಿಡಲಾಗಿದೆ. ಮಧ್ಯದಲ್ಲಿ ಈಶ್ವರ ಲಿಂಗೂ ಇದ್ದು ಕಪ್ಪು ಬಣ್ಣದಲ್ಲಿ ರಚಿತವಾಗಿದೆ. ನಕ್ಷಾ ವಿನ್ಯಾಸಗಳು, ಸರಪಳಿಯಾಕಾರ, ಚುಕ್ಕೆಗಳು, ರೇಖೆಗಳು ಹಲವಾರು ಬಣ್ಣಗಳಲ್ಲಿ ಮೂಡಿವೆ.

**೪. ತೂಗು ತೊಟ್ಟಿಲು**

ತೊಟ್ಟಿಲುಗಳಲ್ಲಿ ವಿವಿಧ ತೊಟ್ಟಿಲುಗಳಿದ್ದು ಇಲ್ಲಿ ಕಾಣಬರುವ ತೊಟ್ಟಿಲು ತೂಗು ತೊಟ್ಟಿಲುವಾಗಿದೆ. ಈ ತೊಟ್ಟಿಲಿನಲ್ಲಿ ಹೆಚ್ಚಾಗಿ ಕೆಂಪು, ಹಳದಿ, ನೀಲಿ, ಬಳಸಿರುವುದು ಕಂಡುಬರುತ್ತದೆ. ಇಲ್ಲಿ ಹಲವಾರು ಪಟ್ಟಿಕೆಯು ಇದ್ದು ಅದರಲ್ಲಿ ಮುಖ್ಯವಾಗಿ ಗೊಂಬಿಎಳಗಿ ಎನ್ನುವ ಪಟ್ಟಿಕೆಯಲ್ಲಿ ಶಿವ, ಪಾರ್ವತಿ, ಗಣೇಶ, ಮತ್ತು ನಂದಿ ಚಿತ್ರಗಳು ಅಸ್ಪಷ್ಟವಾಗಿ ಕಂಡುಬರುತ್ತವೆ. ಇಲ್ಲಿ ಕಮಾನು ರಚಿಸಿ ನಕ್ಷಾವಿನ್ಯಾಸ ಹೂಗಳು, ಬಣ್ಣ ಬಣ್ಣದ ರೇಖೆಗಳು ಸರಪಳಿಯಾಕಾರ, ಚುಕ್ಕೆಗಳು, ಗುಂಡುಗಳು ಇನ್ನೂ ಮುಂತಾದವುಗಳು ಕಂಡುಬರುತ್ತದೆ.

**೫. ತೂಗು ತೊಟ್ಟಿಲು**

ಮೇಲಿನ ತೊಟ್ಟಿಲು ಹಾಗೆ ಕಂಡುಬರುವ ತೊಟ್ಟಿಲು ಇದಾಗಿದೆ. ಈ ತೊಟ್ಟಿಲಿನಲ್ಲಿ ಹೆಚ್ಚಾಗಿ ಒರಟು ಒರಟಾದ ರೇಖೆಗಳು ಕಂಡುಬರುತ್ತದೆ. ಈ ಕಲಾಕೃತಿಯಲ್ಲಿ ಚಿತ್ರಗಳು ಅಸ್ಪಷ್ಟವಾಗಿರುವುದರಿಂದ ಅದರ ಆಳಕ್ಕೆ ಇಳಿಯುವುದು ಕಷ್ಟ ಸಾಧ್ಯವಾಗಿದೆ. ಇಲ್ಲಿ ಮುಖ್ಯವಾಗಿ ಕೆಂಪು, ನೀಲಿ, ಹಳದಿ, ಬಳಸಿದ್ದು ನೋಡಿದರೆ ಇದು ಕಲಿಕೆಯ ಪ್ರಾರಂಭದ ಕಲ್ಪನೆ ತೋರಿಸುತ್ತದೆ. ಪ್ರತಿಯೊಂದು ರೇಖೆಯು ಸರಳವಾಗಿ ಚಲಿಸದೆ ಅಂಕು ಡೊಂಕಾಗಿ ಚಲಿಸಿರುವುದೆ ಕಂಡುಬರುತ್ತದೆ. ಇದರ ಆಧಾರದಿಂದ ಇದು ಕಲಿಕೆಯ ಪ್ರಾರಂಭಿಕವಾಗಿದೆ ಎನ್ನಬಹುದು.

**೬. ತೂಗು ತೊಟ್ಟಿಲು**

ಮಕ್ಕಳಿಗೆ ನಿದ್ದೆ ಬರಿಸುವ ಸಾಧನವಾಗಿ ಈ ತೊಟ್ಟಿಲು ಬಳಕೆಯಾಗಿದೆ. ಇಲ್ಲಿ ಕಾಣಬರುವ ತೊಟ್ಟಿಲು ಸುಂದರವಾಗಿದ್ದು ಇದು ಹಿಂದೆ ಹೇಳಿರುವ ತೊಟ್ಟಿಲಿನ ಎರಡನೆಯ ಹಂತ ಎಂದು ಹೇಳಬಹುದು. ಇಲ್ಲಿಯೂ ಸಹ ರೇಖೆಗಳಲ್ಲಿ ಸ್ವಲ್ಪ ವಕ್ರರೇಖೆಗಳು ಕಂಡುಬರುತ್ತವೆ. ಇಲ್ಲಿ ಗೊಂಬೆಎಳಗಿ ಪಟ್ಟಿಕೆಯಲ್ಲಿ ಶಿವ ಪಂಚಾಯತ ಚಿತ್ರಗಳು ರಚನೆಯಾಗಿದ್ದು ವಿಶೇಷವಾಗಿ ನಂದಿಯ ಚಿತ್ರವು ಮೂಡಿಬಂದಿರುವುದು ಕಂಡುಬರುತ್ತದೆ. ಇಲ್ಲಿ ಹಿನ್ನೆಲೆಯಾಗಿ ನೀಲಿ ಬಳಿದು ಶಿವ, ಪಾರ್ವತಿ, ಗಣೇಶ, ನಂದಿ, ಮುಂತಾದವುಗಳು ಕಂಡುಬರುತ್ತವೆ. ಪಕ್ಕದ ಪಟ್ಟಿಕೆಯಲ್ಲಿ ಚಿತ್ರವು ಅಸ್ಪಷ್ಟವಾಗಿದ್ದು ಬಾಲಕನಂತೆ ಮತ್ತು ಸಿಂಹದ ರೂಪ ಗೋಚರಿಸುತ್ತದೆ. ಇಲ್ಲಿಯೂ ವಿವಿಧ ನಕ್ಷಾ ವಿನ್ಯಾಸ ವಿವಿಧ ಹೂಬಳ್ಳಿಯ ಅಲಂಕಾರ ಕಂಡುಬರುತ್ತದೆ.

**೭. ತೂಗು ತೊಟ್ಟಿಲು**

ತೊಟ್ಟಿಲುಗಳಲ್ಲಿ, ತೂಗು ತೊಟ್ಟಿಲು, ಜೋಳಿಗೆ ತೊಟ್ಟಿಲು ಅಡಕೆ ಹಾಳೇ ತೊಟ್ಟಿಲು, ಹೂವಿನ ತೊಟ್ಟಿಲು, ಸ್ಟ್ಯಾಂಡಿಂಗ್ ತೊಟ್ಟಿಲು, ಮುಂತಾದವುಗಳಾಗಿವೆ. ಅಲ್ಲದೆ ಈ ತೊಟ್ಟಿಲು ತೂಗು ತೊಟ್ಟಿಲಾಗಿದೆ. ಹಲವಾರು ಬಣ್ಣಗಳಿಂದ ಅಲಂಕೃತವಾಗಿದೆ. ವಸ್ತು ವಿಷಯವಾಗಿ ಶಿವ ಪಂಚಾಯತ್ ಮತ್ತು ಚಿಗರೆಯ ಚಿತ್ರಗಳು ಮೂಡಿವೆ. ಇಲ್ಲಿ ಹೆಚ್ಚಾಗಿ ಕೆಂಪು, ಹಳದಿ, ಬಳಸಿದ್ದು ಕಂಡುಬರುತ್ತದೆ. ಅಲ್ಲಲ್ಲಿ ಹೂಬಳ್ಳಿಯ ನಕ್ಷಾವಿನ್ಯಾಸಗಳು ಸುಳುವುಗಳು ರಚಿತವಾಗಿವೆ. ನೀಲಿ ಬಣ್ಣದ ಪಟ್ಟಿಕೆ ಮುಂತಾದ ವರ್ಣರೇಖೆಗಳು ಪ್ರಮುಖವಾಗಿವೆ.

**೮. ತೂಗು ತೊಟ್ಟಿಲು**

ಸಾಮಾನ್ಯವಾಗಿ ಕಂಡುಬರುವ ತೊಟ್ಟಿಲುಗಳಲ್ಲಿ ಒಂದಾದ ಈ ತೊಟ್ಟಿಲು ರಚನೆಯಾಗಿದ್ದು ಇದರಲ್ಲಿ ಮುಖ್ಯವಾಗಿ ಗೊಂಬೆಎಳಗಿ ಪಟ್ಟಿಕೆಯಲ್ಲಿ ಶ್ರೀರಾಮನ ಪಟ್ಟಾಭಿಷೇಕ ಚಿತ್ರರಚನೆಯಾಗಿದ್ದು ಕಂಡುಬರುತ್ತದೆ. ಇಲ್ಲಿ ಕೆಂಪು ವರ್ಣದ ಹಿನ್ನೆಲೆಯಲ್ಲಿ ಈ ಚಿತ್ರ ಮೂಡಿಬಂದಿದ್ದು ಇಲ್ಲಿ ಶ್ರೀರಾಮನನ್ನು ತಿಳುವರ್ಣದಲ್ಲಿ ರಚನೆಯಾಗಿದ್ದು ಅಲ್ಲದೇ ಸೀತೆ, ಹನುಮಂತ, ಎಲ್ಲರೂ ಕೂಡಾ ತಿಳಿನೀಲಿ ವರ್ಣದಲ್ಲಿಯೇ ರಚನೆಯಾಗಿದ್ದಾರೆ. ಪಕ್ಕದ ಗೊಂಬಿಎಳಗೆ ಪಟ್ಟಿಕೆಯಲ್ಲಿಯೂ ಸಹ ಕೆಂಪು ಹಿನ್ನೆಲೆಯಲ್ಲಿ ಬಿಳಿವರ್ಣದ ಜಿಂಕೆಗಳು ಕಪ್ಪು ವರ್ಣದ ಗಿಡಗಳು ಹಾಗೂ ಚಿಕ್ಕ ಚಿಕ್ಕ ಎಲೆಗಳನ್ನು ರಚಿಸಲಾಗಿದೆ. ಕಮಾನು ಭಾಗದಲ್ಲಿ ಐದು ಕೆಂಪು ಗುಂಡುಗಳನ್ನು ರಚಿಸಿ ಹೊರರೇಖೆಯಾಗಿ ಹೂ ಬಳ್ಳಿಯ ನಕ್ಷಾವಿನ್ಯಾಸ ರಚಿಸಲಾಗಿದೆ ಹಾಗೇ ರೇಜೆಭಾಗದಲ್ಲಿ ರೇಖೆಗಳು



೫. ತೂಗು ತೊಟ್ಟಿಲು



೬. ತೂಗು ತೊಟ್ಟಿಲು

ಮೂಡಿಬಂದಿವೆ ಈ ಕಲಾಕೃತಿಯಲ್ಲಿ ಹೆಚ್ಚಾಗಿ ಕೆಂಪುವರ್ಣ ಬಳಕೆಯಾಗಿದ್ದು ಕಂಡುಬರುತ್ತದೆ. ನೀಲಿ, ಹಳದಿ, ಕೆಂಪು, ಮುಂತಾದ ವರ್ಣಗಳ ಬಳಕೆಯೂ ಸಹ ಕಂಡುಬರುತ್ತದೆ.

### ೯. ಗೊಂಬೆಏಳಗಿ ಪಟ್ಟಿಕೆಗಳು

ಮಗುವಿಗೆ ನಿದ್ರೆ ಬರಿಸುವ ಸಾಧನವಾಗಿ ತೊಟ್ಟಿಲು ರೂಪಗೊಂಡಿದೆ. ತೊಟ್ಟಿಲುಗಳ ವಿನ್ಯಾಸ ಕಾಲಕಾಲಕ್ಕೆ ಬದಲಾವಣೆ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ. ತೊಟ್ಟಿಲು ತಯಾರಿಕೆಯ ಈ ಗೊಂಬಿಏಳಗಿ ಪಟ್ಟಿಕೆಯಲ್ಲಿ ವರ್ಣಗಳಿಂದ ರಚಿತವಾದ ಸುಂದರವಾದ ಚಿತ್ರಗಳನ್ನು ಕಾಣಬಹುದು. ಮೊದಲನೆಯ ಪಟ್ಟಿಕೆಯಲ್ಲಿ ಕೃಷ್ಣ ಮತ್ತು ಗೋವುಗಳು ಎರಡನೆಯ ಪಟ್ಟಿಕೆಯಲ್ಲಿ ಸರಸ್ವತಿಯು ಮೂರು ಮತ್ತು ನಾಲ್ಕನೆಯ ಪಟ್ಟಿಕೆಯಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳು ಮೂಡಿಬಂದಿದೆ.

ಮೊದಲನೆಯದಾಗಿ ಕೃಷ್ಣನ ಒಂದು ಕಥೆಯು ನೆನೆಪಿಸುವ ಹಾಗೇ ಕಂಸನ ಮೊರೆಯನ್ನು ಕೇಳಿದ ಇಂದ್ರನು ಗೋಕುಲದ ಮೇಲೆ ಕೆಂಡದಮಳೆ ಸುರಿಸಲು ಕೃಷ್ಣನು ಕೊಳಲೂದಿ ಗೋವುಗಳನ್ನೆಲ್ಲ ಗುಂಪು ಸೇರಿಸಿ, ಅವುಗಳ ಮೇಲೆ ಬೆಟ್ಟವನ್ನು ಹಿಡಿದಿರುವ[೪೬] ಚಿತ್ರವು ನೆನಪಿಗೆ ಬರುತ್ತದೆ. ಇಲ್ಲಿ ಕೃಷ್ಣನು ಬಂಡೆಯ ಮೇಲೆ ಕುಳಿತು ಕೊಳಲನ್ನು ಊದುತ್ತಾ ಗೋವುಗಳ ಕಡೆಗೆ ದೃಷ್ಟಿಹಾಯಿಸಿದ್ದಾನೆ. ನೀಲಿ ಮೈಬಣ್ಣ ಹೊಂದಿ ಹಳದಿ ಪಂಚೆಯ ಮೇಲೆ ಕೆಂಪು ಬಣ್ಣದ ವಸ್ತ್ರವನ್ನು, ಕಿರೀಟಧಾರಿಯಾಗಿದ್ದಾನೆ. ಗೋವುಗಳು ಸಂಗೀತವನ್ನು ಆಲಿಸುತ್ತಿವೆ. ನೀಲಿ ಆಕಾಶ, ಗಿಡಮರ, ಈ ಪಟ್ಟಿಕೆಯಲ್ಲಿ ರಚನೆಯಾಗಿವೆ.

ಎರಡನೆಯ ಪಟ್ಟಿಕೆಯಲ್ಲಿ ಲಕ್ಷ್ಮೀಯ ಚಿತ್ರವಿದ್ದು ಮೂಲತಃ ಲಕ್ಷ್ಮೀಯು ವಿಷ್ಣುವಿನ ಹೆಂಡತಿ, ಶಿಷ್ಟರ ದೇವತೆ ಆದರೆ ಜನಪದ ಲಕ್ಷ್ಮೀ ಬೇರೆ ಆಕೆ ವಿಷ್ಣುವಿನ ಹೆಂಡತಿ ಅಲ್ಲ, ಸಂಪತ್ತಿನ ದೇವತೆ ಅದಕ್ಕಾಗಿ ಆಕೆಯನ್ನು ಅವರು ಲಕ್ಕವ್ವ, ಲಕ್ಕಮ್ಮಾ, ಭಾಗಮ್ಮ ಲಗಸಿಮೆ, ಎಂದು ಕರೆಯುವರು. ದವಸಧಾನ್ಯ ಸಂಪತ್ತಿನ ದೇವತೆಯಾದ ಲಗಸಿಮಿಯನ್ನು ಜನಪದರು ಪೂಜಿಸುವರು.[೪೭] ನಮ್ಮ ಹಳ್ಳಿಗಳಲ್ಲಿ ಸ್ತ್ರೀಯರಿಗೆ ಪುರುಷರಿಗೆ ಲಕ್ಷ್ಮೀಯ ಹೆಸರುಗಳನ್ನು ನಾಮಕರಣ ಮಾಡಿರುವುದನ್ನು ನಾವು ಕಾಣುತ್ತೇವೆ. ಪುರುಷರಿಗೆ ಪ್ರತಿರೂಪವಾಗಿ ಲಕ್ಷ್ಮಣ, ಲಕ್ಷ್ಮೀಕಾಂತ, ಸ್ತ್ರೀಯರಿಗೆ ಸಾಮಾನ್ಯವಾಗಿ ಲಕ್ಷ್ಮೀ ಮುಂತಾದ ಹೆಸರುಗಳನ್ನು ಬಳಕೆಯಲ್ಲಿ ಕಾಣುತ್ತವೆ. ಅದಕ್ಕಾಗಿ ಆಕೆ ಖಂಡಿತ ಜನಪದರ ದೈವವಾಗಿ ಪೂಜೆಗೊಳ್ಳುತ್ತಿದ್ದಾಳೆ. ಈಕೆಯ ಹಲವಾರು ಕಥೆಗಳು ನಮ್ಮ ಹಳ್ಳಿಗಳಲ್ಲಿ ದೊರೆಯುತ್ತವೆ. ಈ ದೇವಿಯು ಕಮಲದ ಮೇಲೆ ಕುಳಿತಿದ್ದು ಕಿರೀಟ, ಆಭರಣ ಧರಿಸಿ ಎರಡು ಕೈಯಲ್ಲಿ ಪುಷ್ಪ ಕೆಳಗಿನ ಕೈ ಅಸ್ಪಷ್ಟವಾಗಿ ಮೂಡಿಬಂದಿದೆ. ಹಸಿರು ಸೀರೆ ಅಕ್ಕ ಪಕ್ಕದಲ್ಲಿಯ ಬೂದುವರ್ಣದ ಆನೆಗಳು ಚಾಮರ ಬೀಸುತ್ತಿವೆ. ಹಿಂಭಾಗದಲ್ಲಿ ನೀಲಿ ಆಕಾಶ ಮರಗಳು ಆನೆಯ ಮೇಲೆ ಕೆಂಪು ಹೊದಿಕೆಯನ್ನು ಕೊರಳಲ್ಲಿ ಸರಪಳಿ ಹಳದಿ ವರ್ಣದಿಂದ ರಚಿಸಲಾಗಿದೆ.

ಮೂರು ಮತ್ತು ನಾಲ್ಕನೆಯ ಪಟ್ಟಿಕೆಯಲ್ಲಿ ವಿಷ್ಣುವಿನ ದಶಾವತಾರಗಳು ಕಂಡುಬಂದಿವೆ. ಇಲ್ಲಿ ಭಾಗಗಳನ್ನು ವಿಂಗಡಿಸಿಕೊಂಡು ಚಿತ್ರಬರೆಯಲಾಗಿದೆ. ಮೊದಲನೆದು ಚಿತ್ರ ಅಪೂರ್ಣವಾಗಿ ಮೂಡಿದ್ದು ಆದರು ಇದು ಮತ್ಸ್ಯ (ಮೀನು) ಅವತಾರ ನಂತರ ಕೂರ್ಮ( ಆಮೆ) ವರಾಹ, (ಹಂದಿ) ನರಸಿಂಹ, ವಾಮನ, ಪರುಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ (ಕಲಿಯುಗ) ಯಾಗಿವೆ.

ದುಷ್ಟಶಕ್ತಿಯೊಂದು ಪೌರಾಣಿಕ ಗ್ರಂಥಗಳಾದ ವೇದ, ಉಪನಿಷತ್ತುಗಳನ್ನು ಸಮುದ್ರ ಆಳಕ್ಕೆ ಹೊತ್ತುಕೊಂಡು ಹೋದಾಗ ವಿಷ್ಣು ಮತ್ಸ್ಯ ಅವತಾರವನ್ನು ತಾಳಿ ದುಷ್ಟಶಕ್ತಿಯೊಂದಿಗೆ ಹೊರಾಡಿ ವೇದ ಉಪನಿಷತ್ತುಗಳನ್ನು ರಕ್ಷಿಸಲು ವಿಷ್ಣು ಈ ಅವತಾರವನ್ನು ತಾಳಿದ ಎಂದರೆ ಇದಕ್ಕೆ ಇನ್ನೊಂದು ಕಥೆ ಉಪರವಸು ಎಂಬ ರಾಜನು ತನ್ನ ವೀರ್ಯವನ್ನು ಹೆಂಡತಿಯ ಬಳಿಗೆ ಕಳುಸುತ್ತಿರುವಾಗ ಅದು ಗಂಗೆಯಲ್ಲಿ ಜಾರಿ ಬಿದ್ದು ಮೀನಿನ

೪೬. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೧೨೬ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೪೭. ಡಾ.ಕಲೀಗೌಡ ಜೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೦೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಗರ್ಭವನ್ನು ಸೇರಿತು ಅದರ ಗರ್ಭದಿಂದ ಬಂದವನು ಮತ್ಸ್ಯರಾಜ ಅವನ ಸಾಕುಮಗಳು ಮತ್ಸ್ಯಗಂಧಿ. ಈಕೆ ಪರಶುರನನ್ನು ಕೂಡಲು ವ್ಯಾಸ ಹುಟ್ಟಿದ ಹಾಗೇ ವೇದಗಳನ್ನು ಕದ್ದ ಸೋಮಕನನ್ನು ಶಿವಾಜ್ಞೆಯಂತೆ ವಿಷ್ಣುವು ಮತ್ಸ್ಯರೂಪದಿಂದ ಸಂಹರಿಸಿದ ಮೇಲೆ, ಹೊರಳಾಡಿ ಸಮುದ್ರಗಳನ್ನೆಲ್ಲ ಒಂದುಮಾಡುತ್ತಿರಲು ಶಿವನು ಬಕ ರೂಪವನ್ನು ತಾಳಿ ಅದನ್ನು ಕೊಂದು ಅದರ ಚರ್ಮವನ್ನು ತಲೆಗೆ ಸುತ್ತಿದನು.[೪೮] ಎಂದು ಶಿವಶರಣ ಕಥಾರತ್ನಕೋಶದಲ್ಲಿ ತ.ಸು.ಶಾಮರಾಯ ಉಲ್ಲೇಖಿಸಿದ್ದಾರೆ.

ಎರಡನೆಯ ಅವತಾರದಲ್ಲಿ ಸಮುದ್ರ ಮಂಥನದಲ್ಲಿ ಜಗತ್ತನ್ನು ಕಾಪಾಡಲು ಕೂರ್ಮ ಅವತಾರವನ್ನು ತಾಳುತ್ತಾನೆ. ಈ ಚಿತ್ರದಲ್ಲಿ ಮೇಲಿನ ಕೈಗಳಲ್ಲಿ ಚಕ್ರ, ಗಧೆ, ಕೆಳಗಿನ ಕೈಗಳಲ್ಲಿ ಖಡ್ಗ ಗುರಾಣಿಯಿದೆ. ಆಮೇಯ ದೇಹ ಹೊಂದಿದ್ದು ಹಸಿರು ವರ್ಣ ಬಳಸಲಾಗಿದೆ. ಕಿರೀಟ ಧರಿಸಿದ್ದು ಮೈಬಣ್ಣ ಕೆಂಪಾಗಿದೆ. ರಾಕ್ಷಸನು ನೆಲಕ್ಕೆ ಉರುಳಿದ್ದು, ಕೈಯಲ್ಲಿ ಗುರಾಣಿ ಖಡ್ಗ ಚಿತ್ರಿಸಲಾಗಿದೆ. ನೀಲಿ ಆಕಾಶ ಬೆಟ್ಟ ಸಮುದ್ರವನ್ನು ಕಾಣಬಹುದು.

ಮೂರನೆಯ ಅವತಾರದಲ್ಲಿ ವಿಷ್ಣು ವರಾಹ ಮುಖವನ್ನು ಹೊಂದಿದ್ದು ಇಲ್ಲಿ ಇವನು ಗರ್ಭಿಣಿಯಾದ ತನ್ನ ಹೆಂಡತಿಗೆ ಹುತ್ತದ ಮಣ್ಣನ್ನು ಬಯಸುವ ಭೂಮೀಯನ್ನೆ ಹೊತ್ತುಕೊಂಡು ಹೋದ ಹಿರಣಾಕ್ಷನನ್ನು ಕೊಲ್ಲಲು ವರಾಹ ರೂಪವನ್ನು ತಾಳಿದನು. ಅದರ ಕೋರೆದಾಡಿಯನ್ನು ಕಿತ್ತು ಶಿವನಿಗೆ ಧರಿಸಲು ಕೊಟ್ಟನು.[೪೯] ಈ ಚಿತ್ರದಲ್ಲಿ ವರಾಹ ಮುಖ ಹೊಂದಿ ಕೈಯಲ್ಲಿ ಗಧೆ, ಖಡ್ಗ, ಗುರಾಣಿ, ಕತ್ತಿ, ಮೈಬಣ್ಣ, ನೀಲಿಯಾಗಿದ್ದು ಹಳದಿ ಪಂಚೆ ಧರಿಸಿದ್ದು ಮೇಲುಪದರಾಗಿ ಕೆಂಪು ಬಟ್ಟೆಯನ್ನು ಇಳಿಬಿಡಲಾಗಿದೆ. ಕಿರೀಟ ಧರಿಸಿದ್ದು ಇಲ್ಲಿ ಹಿರಣ್ಯಾಕ್ಷನು ಕೈ ಮೇಲೆತ್ತಿ ಖಡ್ಗ ಹಿಡಿದು ಇನ್ನೊಂದು ಕೈಯಲ್ಲಿ ಗುರಾಣಿ ಇದೆ. ಹಳದಿ ಪಂಚೆ ಹಸಿರು ವರ್ಣದ ಬಟ್ಟೆಯನ್ನು ಅದರ ಮೇಲೆ ಬಳಸಲಾಗಿದೆ. ಇಬ್ಬರೂ ಆಭರಣಗಳನ್ನು ಹೊಂದಿದ್ದಾರೆ. ಹಿನ್ನಲೆಯಾಗಿ ನೀಲಿ, ಬಿಳಿ, ತಿಳಿಗುಲಾಬಿ ಮಿಶ್ರಿತವಾಗಿದೆ. ಸಣ್ಣದಾಗಿ ಕಾಣುವ ಬೆಟ್ಟಗಳು ಹಾಗೂ ಒಂದು ಮರವನ್ನು ಚಿತ್ರಿಸಲಾಗಿದೆ.

ನಾಲ್ಕನೆಯ ಅವತಾರದಲ್ಲಿ ವಿಷ್ಣುವು ನರಸಿಂಹ ಅವತಾರ ತಾಳೀ ಹಿರಣ್ಯಕಶಿಪುನನ್ನು ಕೊಂದಮೇಲೆ ,ಲೋಕಕಂಟಕನಾಗಿರಲು, ಶಿವನು ಶಿರಭಾವತಾರವನ್ನು ಮಾಡಿ ಅವನನ್ನು ಕೊಂದನು ಅವನ ಚರ್ಮವನ್ನು ಹೊದ್ದು ಶಿರವನ್ನು ಕೀರ್ತಿಮುಖವಾಗಿ ಧರಿಸಿದನು ಉಗ್ರರೂಪ ತಾಳಿದ ವಿಷ್ಣುವಿನ ಕೈಗಳಲ್ಲಿ ಚಕ್ರಗಳು, ಕೆಳಗಿನ ಕೈಗಳಿಂದ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿದ, ಇಲ್ಲಿ ಹಿರಣ್ಯಕಶಿಪು ಸಾವಿಲ್ಲದ ವರ ಪಡೆದವನಾಗಿದ್ದರಿಂದ ವಿಷ್ಣು ಅವನನ್ನು ಹೊಸ್ತಿಲ ಮೇಲೆ ಸಂಹಾರ ಮಾಡುತ್ತಾನೆ ಕೆಂಪು ಮೈಬಣ್ಣ ಹೊಂದಿದ ವಿಷ್ಣು ಹಳದಿ ಪಂಚೆಯನ್ನು ಧರಿಸಿದ್ದಾನೆ. ಮುಖವು ಸಿಂಹ ಗರ್ಜನೆಯಿಂದ ಕೂಡಿದೆ. ನಾಲ್ಕು ಕೈಗಳಲ್ಲಿ ಕಡಗಗಳು ಹಿರಣ್ಯಕಶಿಪು ನರಸಿಂಹನ ತೊಡೆಯ ಮೇಲೆ ಅಡ್ಡವಾಗಿದ್ದು ಕೆಂಪು ಪಂಚೆಯನ್ನು ಧರಿಸಿದ್ದಾನೆ. ನರಸಿಂಹನು ಕಂಬವನ್ನು ಸೀಳಿಬಂದಿರುವ ಹಾಗೇ ಮೂಡಿಬಂದಿದೆ. ಕಂಬವು ನೀಲಿ, ವರ್ಣ ಸುಳುವುಗಳಿಂದ ಕೂಡಿದೆ ಹಿನ್ನಲೆಯಲ್ಲಿ ನೀಲಿ, ಬಿಳಿ ಗುಲಾಬಿ ವರ್ಣ ಪಕ್ಕದಲ್ಲಿ ನಕ್ಷಾ ವಿನ್ಯಾಸ ಕಂಡುಬರುತ್ತದೆ.

ಐದನೆಯ ಅವತಾರದಲ್ಲಿ ವಿಷ್ಣು ವಾಮನ ಅವತಾರವನ್ನು ತಾಳಿ ಆಮೇಲೆ ತ್ರಿವಿಕ್ರಮನಾದಾಗ ಆತನು ಆಕಾಶಕ್ಕೆ ಎತ್ತಿದ ಕಾಲನ್ನು ಬ್ರಹ್ಮನು ಕತ್ತರಿಸಿ ಹಾಕಿದನು, ಹರನು ಕಾಲ ಬೈರವನ ರೂಪವನ್ನು ತಾಳೀ ತ್ರಿವಿಕ್ರಮನನ್ನು ಕೊಂದು ಬೆನ್ನೆಲುಬನ್ನು ಕಂಕಾಳ ದಂಡವಾಗಿ ಧರಿಸಿದನು.[೫೦] ಇಲ್ಲಿ ವಿಷ್ಣುವಿನ ಮುಖವು ಮುಗ್ಧ ಬಾಲಕನಂತೆ ಮೂಡಿಬಂದಿದ್ದು ಕೈಯಲ್ಲಿ ಛತ್ರಿ ಹಿಡಿದು ಒಂದು ಕಾಲು ಮೇಲಕ್ಕೆ ಎತ್ತಿ ಬ್ರಾಹ್ಮಣನ ತಲೆಯ ಮೇಲೆ ಇಟ್ಟಿರುವುದು ಕಂಡುಬರುತ್ತದೆ. ಮೈಬಣ್ಣ ಕೆಂಪಾಗಿದ್ದು ಹಳದಿ, ಹಸಿರು ಪಂಚೆಯನ್ನು ಧರಿಸಿದ್ದಾನೆ. ಹಿನ್ನೆಲೆಯಲ್ಲಿ ಬೃಹದ್ದಾಕಾರದ ಕಂಬವು ರಚನೆಯಾಗಿದೆ.

---

೪೮. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ–೨ ಪು. ೩೧೩ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೪೯. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೫೨೬ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೫೦. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೪೧೧ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ಆರನೆಯ ಅವತಾರದಲ್ಲಿ ವಿಷ್ಣು ಪರುಶುರಾಮನಾಗಿ ತಂದೆಯಾದ ಜಮದಗ್ನಿಯ ಹೆಂಡತಿ ರೇಣುಕೆಯು ಜಾರೆಯಾಗಿರಲು, ಅವಳನ್ನು ಸರಿ ಮಾಡಲಾರದೇ ಆ ಋಷಿ ಕೊಪಗೊಂಡು ತನ್ನ ಕೋಪವನ್ನು ಸಮುದ್ರಕ್ಕೆ ಎಸೆಯಲು ಅದು ಬಡಬಾಗ್ನಿಯಾಯಿತು ಹೀಗೆ ಸಾದು ಆದ ಆ ಋಷಿಯನ್ನು ಕಾರ್ತವೀರ್ಯಾರ್ಜುನನ್ನು ಕಾಮಧೇನುವಿನ ಆಶೆಯಿಂದ ಕೊಂದುಹಾಕಿದನು ಆಗ ವಿಷ್ಣು ಪರುಶುರಾಮನ ಅವತಾರ ತಾಳಿ ಕಾರ್ಥವೀರ್ಯಾರ್ಜುನನ್ನು ಕೊಂದು. ಇಪ್ಪತ್ತೊಂದು ಸಲ ಕ್ಷೇತ್ರಿಯರನ್ನು ಸಂಹರಿಸಿ, ಶ್ರೀರಾಮನಿಂದ ಸೋತು ಪಾಪ ಪರಿಹಾರ್ಥವಾಗಿ ಜಗತ್ತನೆಲ್ಲ ಬ್ರಾಹ್ಮಣರಿಗೆ ದಾನ ಮಾಡಿ, ಸಮುದ್ರ ಮಧ್ಯದಲ್ಲಿ ನೆಲಿಸಿದನು.[೫೧] ಇಲ್ಲಿಯ ಚಿತ್ರ ಅಪೂರ್ಣವಾಗಿ ಕಂಡುಬಂದಿದ್ದಾಗಿದೆ ಇಲ್ಲಿಯೂ ಸಹ ಹಳದಿ ಪಂಚೆ, ಕೆಂಪು ಬಟ್ಟೆಯನ್ನು ಮೇಲೆ ಬಳಸಲಾಗಿದೆ. ಅಲ್ಲದೇ ಕಿರೀಟಧಾರಿಯಾಗಿದ್ದಾನೆ. ಹಾಗೇ ನೀಲಿ ಆಕಾಶ ಗಿಡ ಬೆಟ್ಟಗಳು ಕಂಡು ಬಂದಿವೆ.

ಏಳನೆಯ ಅವತಾರವಾಗಿ ವಿಷ್ಣು ಶ್ರೀರಾಮನಾಗಿ ರಾವಣನನ್ನು ಸಂಹರಿಸಲು ಶ್ರೀರಾಮನು ಬಾಣ ಬಿಡುತ್ತಿದ್ದು ನೀಲಿ ಮೈಬಣ್ಣ ಹೊಂದಿದ್ದಾನೆ. ಹಳದಿ. ಕೆಂಪು ಪಂಚೆಯನ್ನು ಧರಿಸಿದ್ದಾನೆ. ರಾವಣ ಗಧೆಯಿಂದ ಶ್ರೀ ರಾಮನಿಗೆ ಹೊಡೆಯಲು ಕೈ ಮೇಲಕ್ಕೆ ಎತ್ತಿದ್ದಾನೆ. ಇಬ್ಬರೂ ಆಭರಣ ಧರಿಸಿದ್ದು ಹಳದಿ ಪಂಚೆಯನ್ನು, ನೀಲಿ, ಆಕಾಶ, ಗಿಡಮರಗಳು, ಬೆಟ್ಟಗಳು, ರಚನೆಗೊಂಡಿವೆ.

ಎಂಟನೆಯ ಅವತಾರದಲ್ಲಿ ವಿಷ್ಣುವು ಕೃಷ್ಣಾವತಾರ ಮಾಡಿದಾಗ ಒಮ್ಮೆ ದುರ್ವಾಸನು ಕೋಪಗೊಳ್ಳಲು ಮಡದಿಯಾದ ರುಕ್ಮಿಣಿಯೊಡನೆ ಆ ಋಷಿಯನ್ನು ರಥದಲ್ಲಿ ಕುಳ್ಳಿರಿಸಿ ಬೆತ್ತಲೆಯಾಗಿ ರಥವೆಳೆದ ಆತನು ಗೋಲ್ಲರಲ್ಲಿ ಹುಟ್ಟಿ, ಹಾದರ ಮಾಡಿ ಪಾಂಡವರ ಆಳಾಗಿದ್ದು, ಭೀಷ್ಮನಿಂದ ತರಿಸಿಕೊಂಡು ತನ್ನ ಬಂಧುಗಳನ್ನೆಲ್ಲಾ ತಮ್ಮ ತಮ್ಮಲೇ ಹೊಡೆದಾಡಿ ಸತ್ತಮೇಲೆ ರಜಕನೆಂಬ ಬೇಡನ ಬಾಣದಿಂದ ಸತ್ತ, ಇಲ್ಲಿ ಕೃಷ್ಣನು ಮೈಬಣ್ಣ ನೀಲಿಯಾಗಿದ್ದು ಆಭರಣ ಧರಿಸಿದ್ದಾನೆ. ಕಂಸನು ಕೆಳಗೆ ಚಿತ್ರಸಿದ್ದು ಅವನ ಮೇಲೆ ಕೃಷ್ಣ ಕಾಲು ಇಟ್ಟಿದ್ದಾನೆ. ಕಂಸನು ಹಳದಿ ಬಣ್ಣದ ಬಟ್ಟೆಯನ್ನು ಧರಿಸಿದ್ದಾನೆ. ಬೃಹತ್ತಾದ ಎರಡು ಕಂಬಗಳ ನಡುವೆ ಈ ದೃಶ್ಯ ಕಂಡುಬರುತ್ತದೆ. ಹಿನ್ನೆಲೆಯಾಗಿ ನೀಲಿ, ಕಂಬಗಳ ಮೇಲೆ ನಕ್ಷಾ ವಿನ್ಯಾಸಗಳು ಕಂಡುಬಂದಿವೆ. ಕಂಬಗಳು ಜಾಂಬಳಿ ವರ್ಣದಲ್ಲಿ ಅಲಂಕಾರವಾಗಿವೆ.

ಒಂಭತ್ತನೆಯ ಅವತಾರವಾಗಿ ವಿಷ್ಣುವು ತ್ರಿಪುರಕ್ಕೆ ಕಳುಹಿಸಲು ಆತನು ಬುದ್ಧನಾಗಿ ಹೋಗಿ ಋಷಿಗಳಿಗೆಲ್ಲಾ ಧರ್ಮ ಭೋಧನೆ ಮಾಡಿ, ಬೌದ್ಧ ಮತವನ್ನು ಹರಡಿದನು. ಈ ಚಿತ್ರದಲ್ಲಿ ಬುದ್ಧನು ನಗ್ನವಾಗಿದ್ದು ಧ್ಯಾನದಲ್ಲಿದ್ದಾನೆ. ಕೆಂಪು ಮೈಬಣ್ಣ ಹೊಂದಿದ್ದು ದೊಡ್ಡದಾದ ಗಿಡದ ಕೆಳಗೆ ಆಸೀನನಾಗಿದ್ದಾನೆ. ನೀಲಿ ಮತ್ತು ಜಾಂಬಳಿ ವರ್ಣ ಬಳಕೆ ಕಂಡುಬಂದಿದೆ.

ಹತ್ತನೆಯದಾಗಿ ವಿಷ್ಣು ಕಲ್ಕೀ ಅವತಾರವನ್ನು ಮಾಡಿ ಜಗತ್ತಿನಲ್ಲೆಲ್ಲಾ ಅನಾಚಾರವನ್ನು ಹರಡಿ ಎಲ್ಲರಿಗೂ ನರಕವನ್ನು ತಂದುಕೊಟ್ಟು ತಾನೂ ನಾಶವಾದನು.[೫೨] ಈ ಚಿತ್ರದಲ್ಲಿ ಬಿಳಿ ಕುದುರಿಯೇರಿ ಕಿರೀಟಧಾರಿಯಾಗಿ ಬರುತ್ತಿದ್ದಾನೆ. ಹಿನ್ನೆಲೆಯಾಗಿ ನೀಲಿ, ಬಿಳಿ, ಗುಲಾಬಿ, ವರ್ಣಗಳಲ್ಲಿ ಗಿಡ, ಬೆಟ್ಟಗಳು, ರಚನೆಯಾಗಿವೆ. ಇಲ್ಲಿ ಮತ್ಸ್ಯ ಮತ್ತು ಕೂರ್ಮಾವತಾರದಲ್ಲಿ ವಿಷ್ಣುವಿನ ರೂಪವು ಸೊಂಟದ ಕೆಳಗಿನ ಭಾಗ ಮತ್ಸ್ಯ ಮತ್ತು ಕೂರ್ಮಾ ಅವತಾರದಲ್ಲಿ ಸೊಂಟದ ಮೇಲ್ಭಾಗ ಮಾನವ ರೂಪದಲ್ಲಿದೆ. ಹಾಗೇ ವರಾಹ ಮತ್ತು ನರಸಿಂಹ ಅವತಾರದಲ್ಲಿ ವಿಷ್ಣುವಿನ ಸೊಂಟದ ಮೇಲ್ಭಾಗ ವರಾಹ ಮತ್ತು ಸಿಂಹ ರೂಪದಲ್ಲಿದ್ದರೆ ಸೊಂಟದ ಕೆಳಭಾಗ ಮನುಷ್ಯನ ರೂಪದಲ್ಲಿದೆ. ನರಸಿಂಹ ಅವತಾರದಲ್ಲಿ ಕಂಬ ಸೀಳಿದ್ದು ವಾಮನ ಮತ್ತು ಕೃಷ್ಣನ ಅವತಾರದಲ್ಲಿ ಕಂಬಗಳ ರಚನೆಯಾಗಿವೆ. ಈ ಆಕೃತಿಗಳಲ್ಲಿ ನಾಲ್ಕು ಅವತಾರಗಳು ನಾಲ್ಕು ಕೈಗಳನ್ನು ಹೊಂದಿವೆ. ಈ ಎಲ್ಲಾ ನಿಯಮಗಳನ್ನು ಪಾಲಿಸಿರಬಹುದಾದ ಕಲಾವಿದ ತನ್ನ ಕಲೆಯಲ್ಲಿ ತಾಂತ್ರಿಕ ಕೌಶಲ್ಯವನ್ನು ಮೆರೆದಿದ್ದಾನೆ. ಧಾರ್ಮಿಕ ಹಿನ್ನೆಲೆಯಲ್ಲಿ ರಚಿತವಾದ ಈ ಕಲಾಕೃತಿಯಲ್ಲಿ ನೈಜತೆಗೆ ಹೆಚ್ಚಿನ ಮಹತ್ವ ಕೊಡಲಾಗಿದೆ. ನೀಳವಾದ ರೇಖೆಗಳು ಬಣ್ಣಗಳ ಮಿಶ್ರಣ ತುಂಬಾ ಕುತುಹಲಕಾರಿಯಾಗಿ ಮೂಡಿಬಂದಿವೆ.

---

೫೧. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೪೧೨ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೫೨. -ಅದೇ- ಪು. ೪೧೨



೯. ಗೊಂಬಿ ಎಳಗಿ ಪಟ್ಟಿಕೆಗಳು



೧೦. ತೊಟ್ಟಿಲು ರೇಜೆ ಬಿಡಿಭಾಗಗಳು



೧೧. ಬಣ್ಣದ ಬುಗುರಿ



೧೨. ಹಣ್ಣು ಹಂಪಲಗಳು

### ೧೦. ತೊಟ್ಟಿಲುಗಳ ರೇಜೆ ಭಾಗಗಳು

ಈ ತೊಟ್ಟಿಲುಗಳ ಹಲವಾರು ಭಾಗಗಳಲ್ಲಿ ಬಳಸಲ್ಪಡುವ ಪಟ್ಟಿಕೆಯಾಗಿ ಇದಕ್ಕೆ ರೇಜೆ ಎಂದು ಕರೆಯುತ್ತಾರೆ. ಇವು ಸಾಗುವಾನಿ ಕಟ್ಟಿಗೆಯಿಂದ ನಿರ್ಮಾಣವಾಗಿ ನಂತರ ಹುಣಸೆ ಸೆರಿ ಲೇಪನದ ಮೇಲೆ ವಿವಿಧ ವರ್ಣಗಳಿಂದ ರೇಖೆಗಳು, ಸಣ್ಣ ಸಣ್ಣ ಹೂಗಳು, ಸರಪಳಿಯಾಕಾರ, ಎಲೆಯಾಕಾರ, ಈ ಪಟ್ಟಿಕೆಯ ಮೇಲೆ ಚಿತ್ರಿಸುತ್ತಾರೆ. ಇಲ್ಲಿ ಹಿನ್ನೆಲೆ ಲೇಪನ ಹಳದಿ ವರ್ಣವಾಗಿದೆ. ಕೆಂಪು, ಹಳದಿ, ಹಸಿರು, ವರ್ಣಗಳಿಂದ ಸೂಕ್ಷ್ಮರೇಖೆಯನ್ನು ಎಳೆಯಲಾಗಿದೆ.

### ೧೧. ಬುಗುರೆ

ಇದು ಚಿಕ್ಕ ಮಕ್ಕಳ ಆಟಿಕೆಯ ವಸ್ತುವಾಗಿ ಹೆಚ್ಚಾಗಿ ಬಳಸಲ್ಪಡುವುದಾಗಿದೆ. ಇದು ಸಹ ಸಾಗುವಾನಿ ಮರದಿಂದಲೇ ನಿರ್ಮಿಸಲಾಗಿದೆ. ಇಲ್ಲಿ ಮಕ್ಕಳು ದಾರ ಸುತ್ತುವ ಜಾಗವನ್ನು ಕಲಾವಿದ ಈ ಕೃತಿಯಲ್ಲಿ ಹಲವಾರು ಉಬ್ಬು ತಗ್ಗುಗಳನ್ನು ರಚಿಸಿದ್ದಾರೆ. ಮಧ್ಯದಲ್ಲಿ ಮೊಳೆ ಹೊಡೆದು ತಯಾರಿಸುತ್ತಾರೆ. ಇದಕ್ಕೆ ಹೆಚ್ಚಾಗಿ ಎರಡು ಮೂರು ವರ್ಣಗಳನ್ನು ಮಾತ್ರ ಬಳಸುತ್ತಾರೆ. ಇಲ್ಲಿ ಮುಖ್ಯವಾಗಿ ಕೆಂಪು, ಗುಲಾಬಿ, ಕಪ್ಪು, ವರ್ಣಗಳನ್ನು ಬಳಸಿದ್ದಾರೆ.

### ೧೨. ಹಣ್ಣು ಹಂಪಲಗಳು

ಈ ಹಣ್ಣು ಹಂಪಲಗಳು ಮಾವಿನ ಮರದಿಂದ ರಚಿತವಾಗಿದ್ದು ಇದರಲ್ಲಿ ಬಾಳೇಹಣ್ಣು, ಸೀತಾಫಲ, ಸೇಬು, ದಾಳಿಂಬೆ, ಮೊಸಂಬಿ, ಕೊಬ್ಬರಿ ಬಟ್ಟಲು, ನೇರಳೆ ಹಣ್ಣು, ಇತ್ಯಾದಿಗಳನ್ನು ನಿರ್ಮಿಸುತ್ತಾರೆ. ನೈಜವಾಗಿ ಕಾಣುವಂತೆ ಈ ಹಣ್ಣುಗಳಿಗೆ ಬಣ್ಣಗಳಿಂದ ನೆರಳು ಬೆಳಕು ಬರುವ ಹಾಗೆ ವರ್ಣಗಳ ಮಿಶ್ರಣ ಅದರಲ್ಲಿ ಕೆಲವು ಕಾಯಿಯ ಹಾಗೇ ಗೋಚರಿಸುವ ಹಣ್ಣುಗಳು ಕಂಡುಬರುತ್ತವೆ. ಇದಕ್ಕೆಲ್ಲ ಬಣ್ಣಗಳ ಮಿಶ್ರಣವೆ, ಕುತೂಹಲಕಾರಿಯಾಗಿದೆ. ನೋಡಿದ ತಕ್ಷಣವೇ ಬಾಯಿಯಲ್ಲಿ ನೀರೂರಿಸುವ ಹಣ್ಣುಗಳಾಗಿವೆ.

### ೧೩. ಕಾಮರತಿ ಶಿಲ್ಪ

ಭಾರತದಲ್ಲಿ ಆಚರಿಸುವ ಪುರುಷ ಪ್ರಧಾನ ಹಬ್ಬಗಳಲ್ಲಿ ಇದು ಒಂದೇ ಹಬ್ಬವೆಂದು ಹೇಳಲಾಗುತ್ತದೆ. ದೇವತೆಗಳು ತಾರಕನ ಭಯಕ್ಕೆ ಅಂಜಿ ತಪಸ್ಸು ಮಾಡುತ್ತಿರುವ ಶಿವನು ಪಾರ್ವತಿಯೊಡನೆ ಕೂಡುವಂತೆ ಮಾಡಲು ಕಾಮನಿಗೆ ಅಜ್ಞಾಪಿಸಿದರು ಆತನು ಹಾಗೆ ಮಾಡಲು ಯತ್ನಿಸಿ ಶಿವನ ಉರಿಗಣ್ಣಿಗೆ ತುತ್ತಾದನು ನಂತರ ಶಿವನ ರತಿಯ ಪ್ರಾರ್ಥನೆಯಂತೆ ಕಾಮನಿಗೆ ಜೀವದಾನ ಮಾಡಿದ್ದು ಇದು ಏಳನೆಯ ಲೀಲೆ.

ಹರನೇತ್ರಾಗ್ನಿಯಿಂದ ಬೆಂದ ಕಾಮನು ಹರಿಭಟ್ಟ –ಅಣ್ಣಪೂರ್ಣೆ ಎಂಬ ಬ್ರಾಹ್ಮಣ ದಂಪತಿಗಳ ಮಗನಾಗಿ ಹುಟ್ಟಿದ. ರತಿ ಸಹಗಮನ ಮಾಡಿ ಹೊಲೆಯನ್ನೊಬ್ಬನ ಮಗಳಾಗಿ ಹುಟ್ಟಿದಳು. ಅವರಿಬ್ಬರೂ ಪರಸ್ಪರ ಕಾಮಿಸಿ ಸತ್ತು ಚಿತೆಯಲ್ಲಿ ಒಂದಾಗಿ ಬೆಂದು ಸ್ವರೂಪವನ್ನು ಪಡೆದರು, ಅದನ್ನೆ ಕಾಮನ ಹಬ್ಬವೆಂದು ಅಚರಿಸುತ್ತಾರೆ. ಹೋಳಿ ಹಬ್ಬವೆಂದು ಕರೆಯುತ್ತಾರೆ.[೫೩] ಹಬ್ಬದ ಕೊನೆಯ ರಾತ್ರಿ ಕಾಮನ ತಲೆಯೊಡೆಯುವುದು. ಈ ಕಥೆಯ ಆಧಾರದ ಮೇಲೆ ಸಂಪ್ರದಾಯವು ಜನಪದರಲ್ಲಿ ಬೆಳೆದು ಬಂದಿದೆ. ಕಾಮನು ಸುಂದರನೆಂದು ಎಲ್ಲರೂ ಹಾಡಿ ಹೊಗಳಿರುವುದು ಸರ್ವವಿಧಿತ ಇವನ ಚಲುವಿಗೆ ಇನ್ನೊಂದು ಹೆಸರೇ ಕಾಮ, ಇಂತಹ ಚಲುಪಿನ ಓನ್ನೆಲೆಯಿರುವ ಕಾಮನ ಶಿಲ್ಪವನ್ನು ಅತ್ಯಂತ ರಸಿಕತನದಿಂದ ಸೊಗಸುಗಾರಿಕೆಯಿಂದ ನಿರ್ಮಿಸುತ್ತಾರೆ. ಹೋಳಿ ಹುಣ್ಣಿಮೆ ದಿವಸ ಕಾಮನ ಸುಂದರವಾದ ಮೂರ್ತಿ ಶಿಲ್ಪವನ್ನು ಮಾಡಿಸಿ ಊರಲ್ಲಿಯ ಕಾಮನ ಕಟ್ಟೆಯ ಚಾವಡಿಯಲ್ಲಿ ಅವನನ್ನು ಅಲಂಕಾರ ಮಾಡಿ ಪೂಜಿಸುವ ಆಚರಣೆ ಇದೆ. ಕೆಲವೊಂದು ಶಿಲ್ಪಗಳಲ್ಲಿ ರತಿಯ ಹೆಣ್ಣು ಶಿಲ್ಪಗಳನ್ನು ಮಾಡಿ ಕಾಮನ ತೊಡೆಯ ಮೇಲೆ ಕೂರಿಸಲಾಗುತ್ತದೆ. ಈ ಶಿಲ್ಪದಲ್ಲಿಯೂ ಅದನ್ನೆ ಕಾಣಬಹುದು.

---

೫೩. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೮೦ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ಈ ಮೂರ್ತಿಗಳನ್ನು ನೋಡಿ ಕಾಮನ ಮರ್ಮವನ್ನು ಅರಿಯಲು ಅಥವಾ ಸುಂದರ, ಸುಂದರಿಯರನ್ನು ನೋಡಿ ಆನಂದಿಸುವ ಉದ್ದೇಶದಿಂದಲೂ ಬಹಳಷ್ಟು ಸ್ತ್ರೀ ಪುರುಷರು ಸಂಜೆಯಿಂದ ಪ್ರಾರಂಭಿಸಿ ಮಧ್ಯರಾತ್ರಿಯವರೆಗೆ ಅಲ್ಲಲ್ಲಿ ಕೂಡಿಸಿರುವ ರತಿ ಕಾಮನನ್ನು ನೋಡುತ್ತಾರೆ. ರತಿಕಾಮ ಶಿಲ್ಪಗಳು ಮಾನವ ಗಾತ್ರದಾಗಿರುತ್ತದೆ. ಎನ್ನುವ ಆಧಾರದ ಮೇಲೆ ಈ ಜನಪದ ಮೂರ್ತಿಗಳು ಬಂದಿವೆ. ಇಲ್ಲಿ ಕಾಮನು ದೃಢಕಾಯನಾಗಿದ್ದು, ಹಳದಿ ಮೈ ಬಣ್ಣವಾಗಿವೆ. ಜಾಂಬಳಿ ಬಣ್ಣದ ಅಂಗಿ ಹಸಿರು ಪೇಟಾ, ಕೈಯಲ್ಲಿ ಕೆಂಪು ಬಣ್ಣದ ಹೂವನ್ನು ಹಿಡಿದಿದ್ದಾನೆ. ಅಗಲವಾದ ಕಣ್ಣು ಚೂಪಾದ ಮೂಗು ಹಾಗೂ ಕೋರೆಮೀಸೆ ಹಣೆಯ ಮೇಲೆ ನಾಮ ಹೊಂದಿದೆ, ಕೊರಳಲ್ಲಿ ಕಡೆಗೆ ಹಳದಿ ವರ್ಣದಿಂದ ಕೂಡಿದೆ ರತಿಯು ದಟ್ಟ ಹಸಿರು ಸೀರೆಯುಟ್ಟಿದ್ದು ಕೈಯಲ್ಲಿ ಕಡಗ ಇನ್ನೊಂದು ಕೈಯಲ್ಲಿ ಮಾವಿನಕಾಯಿ, ಸೀರೆಯ ಕೆಂಪುದಡಿಯನ್ನು ಹೊಂದಿವೆ. ಸುಂದರವಾದ ಕಣ್ಣು, ಕುಂಕುಮ, ನೀಳವಾದ ಮೂಗು ಹಾಗೂ ಮೂಗುತಿ, ಕಿವಿಯೋಲೆ, ಹಣೆಪದಕ, ಕೊರಳಲ್ಲಿ ಹಳದಿ ವರ್ಣದ ಕಡಗ ತಲೆಯ ಮೇಲೆ ಹೂವನ್ನು ಸಿಕ್ಕಿಸಲಾಗಿದೆ. ಈ ಕಾಮರತಿ ಶಿಲ್ಪವು ಕುಳಿತಿರುವ ಭಂಗಿಯು ಆಕರ್ಷಕವಾಗಿದೆ.

### ೧೪. ಪೀಠ

ಶ್ರೀಮಂತಿಕೆಯ ಸಂಕೇತವಾಗಿ ಕೆಲವು ರಾಜರು ಲೋಹ, ಚಿನ್ನ, ಬೆಳ್ಳಿ, ಮುಂತಾದವುಗಳಿಂದ ತಯಾರಿಸಿದ ಪೀಠಗಳನ್ನು ಉಪಯೋಗಿಸುತ್ತಾರೆ. ಮರದ ಪೀಠಗಳು ಇಸ್ರೇಲರ ಕಾಲದಿಂದಲೂ ಪ್ರಸಿದ್ಧವಾಗಿದ್ದವು ಅವು ಐದು ಮೋಳ ಉದ್ದ ಐದು ಮೋಳ ಅಗಲ ಹಾಗೂ ಮೂರು ಮೋಳ ಎತ್ತರವಿರುತ್ತಿದ್ದವು.[೫೪] ಕಲಘಟಗಿಯಲ್ಲಿ ತಯಾರಾದ ಈ ಪೀಠವು ಇಂದೂ ಶೃಂಗೇರಿಯ ಜಗದ್ಗುರು ಮಹಾಸ್ವಾಮಿಗಳ ಮಠದಲ್ಲಿ ಕಾಣಬರುತ್ತದೆ. ಈ ಕೃತಿಯಲ್ಲಿ ಕೆಲವೇ ಬಣ್ಣಗಳನ್ನು ಬಳಸಿ ನಿರ್ಮಿಸಿದ್ದಾರೆ. ಪೀಠದ ಮೇಲ್ಭಾಗದಲ್ಲಿ ಎಲೆಯಾಕಾರ ಸೃಷ್ಟಿಸಿಕೊಂಡು ಹಸಿರು, ಹಳದಿ, ಕೆಂಪು, ಬಿಳಿ, ವರ್ಣಗಳಿಂದ ಹೂಬಳ್ಳಿಯ ನಕ್ಷಾ ವಿನ್ಯಾಸಗಳನ್ನು ಮೂಡಿಸಿದ್ದಾರೆ. ಮಧ್ಯದಲ್ಲಿ ಅಶೋಕ ಚಕ್ರದ ಹಾಗೇ ಹಳದಿ ವರ್ಣದಿಂದ ಚಿತ್ರಿಸಿದ್ದು ಸುತ್ತಲೂ ಹೂಬಳ್ಳಿಯ ಸುಳುಹುಗಳನ್ನು ರಚಿಸಿದ್ದಾರೆ. ನೀಲಿ, ವರ್ಣದ ಪಟ್ಟಿಕೆಯ ಮಧ್ಯದಲ್ಲಿ ಕಪ್ಪು ವರ್ಣದಿಂದ ಉದ್ದವಾದ ಪಟ್ಟಿಕೆಯನ್ನು ಎಳೆಯಲಾಗಿದೆ. ಕೆಳಭಾಗದಲ್ಲಿ ಚೌಕಾಕಾರವಿದ್ದು ನೀಲಿ, ಬಿಳಿ, ತಿಳಿಗುಲಾಬಿ, ಕೆಂಪು, ಹಳದಿ, ವರ್ಣದಿಂದ ಚಕ್ರದ ಹಾಗೆ ಚಿತ್ರಿಸಿದ್ದು ಇದಕ್ಕೆ ಈ ಕಲಾವಿದರೇ ಹೇಳುವ ಹಾಗೆ ಕಮಲದ ಹೂ ಎನ್ನುತ್ತಾರೆ. ಇದಕ್ಕೆ ಹಿನ್ನೆಲೆ ಲೇಪನವಾಗಿ ಕೆಂಪನ್ನು ಬಳಿಯಲಾಗಿದೆ. ನಂತರ ಚೌಕಾಕಾರವಾಗಿ ಹಳದಿ ವರ್ಣದಿಂದ ಸೂಕ್ಷ್ಮವಾದ ಸುಳುವುಗಳನ್ನು ಬರೆದು ಹೊರ ರೇಖೆಯಾಗಿ ಬಿಳಿಬಣ್ಣವನ್ನು ಬಳಸಿದ್ದಾರೆ. ನಂತರ ಹಸಿರು ಎಲೆಗಳು ಬಿಳಿ ಮತ್ತು ಗುಲಾಬಿ ಬಣ್ಣದ ಹೂಗಳು ನೀಲಿ, ಪಟ್ಟಿಕೆ ಬಿಳಿವರ್ಣದ ರೇಖೆಯು ಕಂಡುಬರುತ್ತದೆ.

### ೧೫. ಸೋಪಾಸೆಟ್

ಮನೆಯ ಅಂದ ಚಂದ ಹೆಚ್ಚಿಸುವ ವಸ್ತುಗಳಲ್ಲಿ ಒಂದಾದ ಸೋಪಾಸೆಟ್. ಇದು ಕೂಡಾ ಕಲಾವಿದನ ಕೈಯಲ್ಲಿ ಅರಳಿದ ಕಲಾಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಮುಖ್ಯವಾಗಿ ಎರಡು ಭಾಗಗಳಲ್ಲಿ ಚಿತ್ರಗಳು ರಚನೆಯಾಗಿವೆ. ಮೇಲ್ಭಾಗದಲ್ಲಿ ಮತ್ತು ಕೆಳಭಾಗದಲ್ಲಿ ಸಣ್ಣ ಸಣ್ಣದಾಗಿ ಏಳು ಭಾಗ ಮಾಡಿಕೊಂಡು ನರ್ತಕಿಯರ ಚಿತ್ರಗಳನ್ನು ಬಿಡಿಸಿದ್ದಾರೆ. ಒಂದು ಭಾಗದಲ್ಲಿಯೂ ಒಂದೊಂದು ಭಂಗಿಯ ಚಿತ್ರಗಳು ಕಂಡುಬರುತ್ತವೆ. ಈ ನರ್ತಕೀಯರ ಬಟ್ಟೆ ಹೆಚ್ಚಾಗಿ ಹಸಿರು, ನೀಲಿ, ಕೆಂಪು, ಹಳದಿ, ಗುಲಾಬಿ, ಹಾಗೂ ಕುಪ್ಪಸಗಳು ಹಲವಾರು ವರ್ಣದಲ್ಲಿ ಕಾಣುತ್ತವೆ. ನೈಜತೆಯಿಂದ ಕೂಡಿದ ಈ ಚಿತ್ರದಲ್ಲಿ ಪಾರದರ್ಶಕದ ಹಾಗೇ ಬಿಳಿ ವರ್ಣದ ಬಟ್ಟೆಯನ್ನು ಬಿಡಿಸಲಾಗಿದೆ. ಸುಂದರವಾದ ನಿಸರ್ಗ, ಬೆಟ್ಟಗಳು, ಗಿಡಮರಗಳು, ಹಲವಾರು ದೇವಾಲಯಗಳು, ಕಮಾನಿನಾಕಾರದ, ಬೃಹತ್ಆಕಾರದ ಕಂಬಗಳು ಹಲವಾರು ವರ್ಣಗಳಿಂದ ರಂಜಿಸುತ್ತವೆ. ನೀಲಿ ಆಕಾಶದಲ್ಲಿ ಬಿಳಿವರ್ಣದ ಚಂದ್ರ, ಚುಕ್ಕೆಗಳು ದೂರದ ಕಲ್ಪನೆ ಬರುವ ಹಾಗೆ ಕಲಾವಿದ ಚಿತ್ರಿಸಿದ್ದಾನೆ. ಹೂಬಳ್ಳಿಯ ನಕ್ಷಾವಿನ್ಯಾಸಗಳು ಕಂಡುಬರುತ್ತವೆ. ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಕಮಾನು ರಚನೆಯಾಗಿದ್ದು ಅಲ್ಲಲ್ಲಿ

೫೪. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೧೭೪ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಬಣ್ಣದ ಬುಗುರೆಗಳನ್ನು ಜೋತು ಬಿಡಲಾಗಿದೆ. ಈ ಕೃತಿಯಲ್ಲಿ ಹೆಚ್ಚಾಗಿ ಕೆಂಪು, ಹಳದಿ, ಪ್ರಮುಖ ವರ್ಣಗಳಾಗಿವೆ. ನೀಲಿವರ್ಣವು ಕೃತಿಯಲ್ಲಿ ಅಲ್ಲಲ್ಲಿ ಬಳಕೆಯಾಗಿದೆ. ಕೂಡಲಿಕ್ಕೆ ಆರಾಮ ಎನ್ನಿಸುವ ಕಲ್ಪನೆಯಿಂದ ಒಳಭಾಗದಲ್ಲಿ ಮೆತ್ತನೆಯ ಗಾದಿಯನ್ನು ಬಿಳಿಬಟ್ಟೆಯಿಂದ ಕೂಡಿದ್ದು ಕಾಣಬಹುದು ಈ ಕೃತಿಯಲ್ಲಿ ನೀಲಿ ವರ್ಣವು ಬಳಕೆ ಕಡಿಮೆಯಾಗಿದೆ. ಸಣ್ಣ ಸಣ್ಣ ಹೂಗಳು ಬಿಳಿ, ಕೆಂಪು ವರ್ಣದಿಂದ ಶೋಭಿಸುತ್ತವೆ. ವಿವಿಧ ವರ್ಣಗಳು ರೇಖೆಗಳು ಸರಪಳಿಯಾಕಾರಗಳು ಕಂಡುಬರುತ್ತವೆ. ಸುಂದರವಾದ ಈ ಕೃತಿಯು ಬೆಂಗಳೂರಿನ ಕೆ.ಪಿ. ರಾಮಕೃಷ್ಣರವರ ಮನೆಯಲ್ಲಿ ಇಂದಿಗೂ ಕಾಣಬಹುದು.

### ೧೬. ಸ್ಟ್ಯಾಂಡಿಂಗ್ ತೊಟ್ಟಿಲು

ಈ ತೊಟ್ಟಿಲು ನೋಡುವುದಕ್ಕೆ ಗೋಪುರದ ಹಾಗೆ ಕಾಣಬರುತ್ತದೆ. ಮಧ್ಯದಲ್ಲಿ ಆಧಾರ ಸ್ಥಂಭವಾಗಿ ಎರಡು ಸ್ಥಂಭವನ್ನು ರಚಿಸಿ ನಿರ್ಮಿಸಲಾಗಿದೆ. ಇಲ್ಲಿ ಯಾವ ಚಿತ್ರಗಳು ಕಂಡು ಬರುವುದಿಲ್ಲವಾದರೂ ಆಟಕೆಯ ಗೊಂಬೆಯ ಹಾಗೇ ವಿವಿಧ ವರ್ಣದ ಸಣ್ಣ ಸಣ್ಣ ಕೋಲುಗಳು ಹೆಚ್ಚಾಗಿವೆ ತೊಟ್ಟಿಲು ತೂಗುವುದಕ್ಕೆ ಕಬ್ಬಿಣದ ಸರಪಳಿಯನ್ನು ಬಳಸಿರುವುದು ಕಂಡುಬರುತ್ತವೆ. ಅಲ್ಲದೆ ಮೊಳೆ ಹೊಡೆಯದೆ ಹಲವಾರು ಪಟ್ಟಿಕೆಯನ್ನು ಜೋಡಿಸಿರುವುದೆ ವೈಶಿಷ್ಟ್ಯವಾಗಿದೆ.

### ೧೭. ಸ್ಟ್ಯಾಂಡಿಂಗ್ ತೊಟ್ಟಿಲು

ಇಲ್ಲಿ ಕಲಾವಿದ ಕೇವಲ ನಾಲ್ಕು ವರ್ಣಗಳಲ್ಲಿ ರಚಿಸಿದ ತೊಟ್ಟಿಲು ಕೃತಿಯಾಗಿದೆ. ಇದು ಸ್ಟ್ಯಾಂಡಿಂಗ್ ತೊಟ್ಟಿಲಿನ ಮೊದಲ ಹಂತದಲ್ಲಿ ತಯಾರಿಸಿದ ತೊಟ್ಟಿಲು ಆಗಿರಬಹುದಾಗಿದೆ. ಅದಕ್ಕೆ ಇಲ್ಲಿ ಕಲಾವಿದರ ಹೆಚ್ಚು ಪರಿಶ್ರಮ ತೋರಿಬಂದಿಲ್ಲ ಆದರೂ ಇಂಥ ಹಲವಾರು ತೊಟ್ಟಿಲುಗಳೂ ಇಂದಿನ ತೊಟ್ಟಿಲುಗಳಿಗೆ ಮಾದರಿಯಾಗಿದೆ. ಇಲ್ಲಿ ವಸ್ತು ವಿಷಯವಾಗಿ ಈಶ್ವರ ,ನಂದಿಯನ್ನು ರಚಿಸಿದ್ದು ಕೆಂಪು, ಹಿನ್ನೆಲೆಯಲ್ಲಿ ಬಿಳಿವರ್ಣದಿಂದ ಮೂಡಿಬಂದಿದೆ. ಹಾಗೂ ಬಿಳಿವರ್ಣದ ರೇಖೆ, ಹೂವುಗಳು ಮೂಡಿಬಂದಿವೆ, ಎರಡು ಸ್ಥಂಭಗಳ ಆಧಾರದಿಂದ ಮಧ್ಯಭಾಗದಲ್ಲಿ ಅಡ್ಡಲಾಗಿ ಹಾಕಿದ ಮರದ ತುಂಡಿಗೆ ಸರಪಳಿ ಮೂಲಕ ತೊಟ್ಟಿಲಿಗೆ ಬಿಗಿಯಲಾಗಿದೆ. ನೀಲಿ, ಹಳದಿ, ಕೆಂಪು, ಬಿಳಿವರ್ಣ ಹೆಚ್ಚು ಉಪಯೋಗಿಸಲಾಗಿದೆ.

### ೧೮ .ಸ್ಟ್ಯಾಂಡಿಂಗ್ ತೊಟ್ಟಿಲು

ಈ ತೊಟ್ಟಿಲಿನಲ್ಲಿ ಪ್ರಮುಖವಾಗಿ ಕಾಣುವುದು ವರ್ಣಗಳ ರಾಶಿ ಇಲ್ಲಿ ಕಲಾವಿದನಿಗೆ ಚಿತ್ರ ಬಿಡಿಸುವುದಕ್ಕೆ ಪಟ್ಟಿಕೆಗಳು ಇರದೇ ಇರುವದೇ ಕಾರಣ ವರ್ಣಗಳ ಸಂಯೋಜನೆಯಲ್ಲಿ ಕಲಾವಿದ ತುಂಬಾ ಜಾಣ್ಮೆಯಿಂದ ತನ್ನ ಅನುಭವವನ್ನು ತೋರಿಸಿದ್ದಾನೆ. ಇಲ್ಲಿ ವರ್ಣಗಳ ಮಿಶ್ರಣ ಕುತುಹಲಕಾರಿಯಾಗಿದೆ. ನಾಲ್ಕು ಕಾಲು ಹೊಂದಿದ ಈ ತೊಟ್ಟಿಲು ಮೇಲ್ಭಾಗದಲ್ಲಿ ಅಡ್ಡವಾಗಿ ಬಂದ ಕಟ್ಟಿಗೆಗೆ ಇದು ಅಂಟಿಕೊಂಡು "ಸ್ಟ್ಯಾಂಡಿಂಗ್ ತೊಟ್ಟಿಲು" ವಾಗಿದೆ. ಅಲ್ಲಲ್ಲಿ ಕೆಂಪು ಬಣ್ಣದ ಬುಗುರೆಗಳನ್ನು ಪೋಣಿಸಲಾಗಿದೆ. ಈ ಕಲಾಕೃತಿಯಲ್ಲಿ ಹೆಚ್ಚಾಗಿ ನೀಲಿ ಮತ್ತು ಕೆಂಪು ವರ್ಣದ ಬಳಕೆಯಾಗಿದೆ. ಅಲ್ಲಲ್ಲಿ ಹಳದಿ, ಬಿಳಿ, ಜಾಂಬಳಿ, ವರ್ಣಗಳು ಕಂಡುಬಂದಿವೆ. ತೊಟ್ಟಿಲು ತೂಗಲು ಕಬ್ಬಿಣದ ಬಳೆಗಳನ್ನು ಬಳಸಲಾಗಿದೆ. ಈ ಕಲಾಕೃತಿಯು ಅರಗಿನ ಬಣ್ಣದಿಂದ ಅಲಂಕಾರಿಕವಾಗಿ ಮೂಡಿಬಂದಿದೆ. ಈ ಕಲಾಕೃತಿಯು ಧಾರವಾಡದ ಸಿ.ಪಿ.ಐ.ಮಿಸ್ಕಿನ್ ಅವರ ಮನೆಯಲ್ಲಿ ಇಂದಿಗೂ ನೋಡಬಹುದಾಗಿದೆ.

### ೧೯. ಸ್ಟ್ಯಾಂಡಿಂಗ್ ತೊಟ್ಟಿಲು

"ಒಂದು ಕಲಾಕೃತಿಯು ತನ್ನ ವರ್ತಮಾನದಲ್ಲಿ ಸಂಪೂರ್ಣವಾಗಿ ಜೀವಿಸದೆ ಅಪ್ರಸ್ತುತವಾದಲ್ಲಿ ಅದನ್ನು ಗಮಿಸಿಸಲೇ ಬಾರದು" ಎಂಬ ಪಿಕಾಸೋನ ಮಾತುಗಳನ್ನು ಗಮನಿಸಿಯೇ[೫೫] ಈ ಕಲಾವಿದ ತೊಟ್ಟಿಲುಗಳಲ್ಲಿ ಮಾರ್ಪಾಡುಗಳನ್ನು ಮಾಡಿರಬಹುದು, ಸುಂದರವಾದ ವರ್ಣ ವಿನ್ಯಾಸಗಳಿಂದ ತನ್ನ ಕಲೆಯನ್ನು

---

೫೫. ಕೆ.ವಿ.ಸುಬ್ರಹ್ಮಣ್ಯಂ : ಕಲಾಸಂವೇದನೆಯ ಒಳನೋಟಗಳು ಪು. ೧೪ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೭



೧೬. ಸ್ಟ್ಯಾಂಡಿಂಗ್ ತೊಟ್ಟಿಲು



೧೭. ಸ್ಟ್ಯಾಂಡಿಂಗ್ ತೊಟ್ಟಿಲು



೧೮. ಸ್ಟ್ಯಾಂಡಿಂಗ್ ತೊಟ್ಟಿಲು



೧೯. ಸ್ಟ್ಯಾಂಡಿಂಗ್ ತೊಟ್ಟಿಲು

ಇತರರೊಂದಿಗೆ ಈ ತೊಟ್ಟಿಲು ಮುಖಾಂತರ ತೋರ್ಪಡಿಸಿದ್ದಾನೆ. ವರ್ಣಗಳ ಸಂಯೋಜನೆಯಿಂದ ಪ್ರಾರಂಭಗೊಂಡು ನಿರ್ಮಾಣಕ್ರಿಯೆ ತುಂಬಾ ಮನಮೋಹಕವಾಗಿದೆ.. ಇಂತಹ ತೊಟ್ಟಲಿನಲ್ಲಿ ಇದ್ದ ಮಗು ಅಳುವುದೇ ಎನ್ನುವ ಸವಾಲನ್ನು ಹಾಕಿದ ಹಾಗಿದೇ ತೊಟ್ಟಿಲಿನ ಕೆಳಭಾಗದ ಪಟ್ಟಿಕೆಯಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳು ರಾರಾಜಿಸುತ್ತವೆ. ಹುಟ್ಟಿದ ಮಗು ಇಂತಹ ಶಕ್ತಿಗಳನ್ನು ಪಡೆಯಲಿ ಎಂದು ಚಿತ್ರಗಳನ್ನು ಬಿಡಿಸುತ್ತಾರೆ. ಈ ಕೃತಿಯಲ್ಲಿ ಐದು ಭಾಗಮಾಡಿಕೊಂಡು ಒಂದೊಂದರಲ್ಲಿಯೂ ಒಂದೊಂದು ಅವತಾರ ಮೂಡಿಬಂದಿವೆ. ಮೊದಲನೆಯದಾಗಿ ಮತ್ಸ್ಯ ಅವತಾರ, ನಂತರ ಕೂರ್ಮ, ವರಾಹ ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಮತ್ತು ಕಲ್ಕೀ (ಕಲಿಯುಗ) ಹೀಗೆ ವಿಷ್ಣುವಿನ ಹತ್ತು ಅವತಾರಗಳು ಇಲ್ಲಿವೆ. ನಮಗೆ ಕಾಣುವ ಹಾಗೆ ಐದು ಅವತಾರಗಳು ಕಂಡುಬರುತ್ತವೆ.

ದುಷ್ಟಶಕ್ತಿಯೊಂದನ್ನು ಪೌರಾಣಿಕ ಗ್ರಂಥಗಳಾದ ವೇದ, ಉಪನಿಷತ್ತುಗಳನ್ನು ಸಮುದ್ರ ಆಳಕ್ಕೆ ಹೊತ್ತುಕೊಂಡು ಹೋದಾಗ ವಿಷ್ಣು ಮತ್ಸ್ಯ ರೂಪತಾಳಿ ದುಷ್ಟಶಕ್ತಿಯೊಂದಿಗೆ ಹೋರಾಡಿ ವೇದ ಉಪನಿಷತ್ತುಗಳನ್ನು ರಕ್ಷಿಸಲು ವಿಷ್ಣು ಈ ಅವತಾರವನ್ನು ತಾಳಿದ ಇಲ್ಲಿ ವಿಷ್ಣುವಿನ ದೇಹದ ಕೇಳಭಾಗ ಹಸಿರು ವರ್ಣದಾಗಿದೆ. ಮೇಲ್ಭಾಗ ಗೋದಿಗೆಂಪು ವರ್ಣವಾಗಿದೆ. ಸಮುದ್ರ, ನೀಲಿ, ಆಕಾಶ ರಚಿತವಾಗಿದೆ. ಎರಡನೆಯ ಅವತಾರದಲ್ಲಿ ಸಮುದ್ರ ಮಂಥನದಲ್ಲಿ ಜಗತ್ತನ್ನು ಕಾಪಾಡಲು ಕೂರ್ಮ ಅವತಾರವನ್ನು ತಾಳುತ್ತಾನೆ. ಇಲ್ಲಿ ಸಹ ದೇಹಬಣ್ಣ ಗೋದಿಗೆಂಪು ಕೆಳಭಾಗ ಹಸಿರು ವರ್ಣವಾಗಿದೆ. ಸಮುದ್ರ ನೀಲಿಆಕಾಶ ಮೂಡಿಬಂದಿದೆ. ಮೂರನೆಯ ಅವತಾರದಲ್ಲಿ ಭೂಮಿಯನ್ನು ಹೊತ್ತುಕೊಂಡು ಹೋದ ಹಿರಣಾಕ್ಷ ಎಂಬ ರಾಕ್ಷಸನು ಸಂಹರಿಸಿ ತನ್ನ ಕೋರೆಹಲ್ಲುಗಳಿಂದ ಭೂಮಿಯನ್ನು ಸಮುದ್ರ ಆಳದಿಂದ ಮೇಲಕ್ಕೆತ್ತಲು ವರಾಹ ಅವತಾರ ತಾಳುತ್ತಾನೆ. ಈ ಚಿತ್ರ ಅಸ್ಪಷ್ಟವಾಗಿ ಮೂಡಿಬಂದಿದೆ. ನಾಲ್ಕನೆಯ ಅವತಾರದಲ್ಲಿ ಸಾವಿಲ್ಲದ ವರವನ್ನು ಪಡೆದ ಹಿರಣ್ಯಕಶಿಪು ಎಂಬ ರಾಕ್ಷಸನ ಅಟ್ಟಹಾಸ ಧ್ವಂಸಮಾಡಲು ನರಸಿಂಹ ಅವತಾರ ತಾಳುತ್ತಾನೆ. ಇಲ್ಲಿಯೂ ಸಹ ಮೈಬಣ್ಣ ಗೋದಿಗೆಂಪು, ಸಿಂಹಮುಖ, ಮಾನವ ಶರೀರ ಹೊಂದಿದ್ದಾನೆ. ಹಿನ್ನೆಲೆಯಲ್ಲಿ ಕಂಬವು ಸಿಳಿ ಬಂದಿರುವುದು ಕಂಡುಬರುತ್ತದೆ. ಐದನೆಯ ಅವತಾರದಲ್ಲಿ ಕೇಳಿದ ವರವ ಕೊಡುವ ಬಲಿಚಕ್ರವರ್ತಿ ಎಂಬ ಮುನಿಯ ಗರ್ವವನ್ನು ಮುರಿಯಲು ವಾಮನ ಅವತಾರವನ್ನು ತಾಳುತ್ತಾನೆ.[೫೬] ಕೈಯಲ್ಲಿ ಕೆಂಪು ಬಣ್ಣದ ಛತ್ರಿ, ಗೋದಿಗೆಂಪು ಮೈಬಣ್ಣ ಎರಡು ಕಂಬಗಳ ನಡುವೆ ನೀಲಿ ಆಕಾಶದ ಮುಂದೆ ಮೂಡಿಬಂದಿದೆ.ತೊಟ್ಟಿಲ ಮೇಲ್ಭಾಗದಲ್ಲಿ ಕಮಾನುಗಳನ್ನು ರಚಿಸಿಕೊಂಡು ಹೂಬಳ್ಳಿಯ ನಕ್ಷಾವಿನ್ಯಾಸ ರಚಿಸಲಾಗಿವೆ. ಅಲ್ಲಲ್ಲಿ ಬಣ್ಣದ ಪಟ್ಟಿಕೆಗಳನ್ನು ರಚಿಸಲಾಗಿದೆ. ತೊಟ್ಟಿಲನಲ್ಲಿರುವ ಮಗು ಕೆಂಪು ಬಟ್ಟೆ ಹಾಕಿರುವುದರಿಂದ ಅದು ಸಹ ಚಿತ್ರದ ಗೊಂಬೆಯಾಗಿದೆ.

**೨೦. ಸ್ಟ್ಯಾಂಡಿಂಗ್ ತೊಟ್ಟಿಲು**

ಈ ತೊಟ್ಟಿಲುಗಳಲ್ಲಿ ರಚಿತವಾದ ಚಿತ್ರಗಳು ವೀರಶೈವ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಇಲ್ಲಿ ಎರಡು ಪಟ್ಟಿಕೆಯನ್ನು ವಿಂಗಡಿಸಿಕೊಂಡು ಮೊದಲ ಪಟ್ಟಿಕೆಯಲ್ಲಿ ಕಮಾನುಗಳನ್ನು ರಚಿಸಿ ಮಧ್ಯದಲ್ಲಿ ಬುಗುರಿಯಾಕಾರ ಬಣ್ಣ ಬಣ್ಣದ ಗುಂಡುಗಳು ಕಂಡುಬರುತ್ತವೆ. ಹಾಗೇ ಹೂಬಳ್ಳಿಯ ನಕ್ಷಾವಿನ್ಯಾಸ ಸರಪಳಿಯಾಕಾರ ಗೋಚರವಾಗುತ್ತದೆ. ಎರಡನೆಯ ಪಟ್ಟಿಕೆಯಲ್ಲಿ ಐದು ಭಾಗ ಮಾಡಿಕೊಂಡು ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳು ಕಂಡುಬರುತ್ತವೆ. ಮೊದಲನೆಯದಾಗಿ ಸಿದ್ದಲಿಂಗೇಶ್ವರ, ಅಕ್ಕಮಹಾದೇವಿ, ಪಂಚಾಕ್ಷರಿ, ಅಲ್ಲಮಪ್ರಭು, ಕಲಬುರ್ಗಿ ಶಿವಶರಣರ ಚಿತ್ರಗಳು ಮೂಡಿಬಂದಿವೆ. ಈ ಚಿತ್ರಗಳು ತೊಟ್ಟಿಲುಕೊಳ್ಳುವವರ ಅಪೇಕ್ಷೆಗೆ ಅನುಸಾರವಾಗಿ ರಚನೆಯಾಗಿವೆ. ಇಲ್ಲಿ ಸಿದ್ದಲಿಂಗೇಶ್ವರ ಗೋದಿಗೆಂಪು ಮೈಬಣ್ಣ ಹೊಂದಿದ್ದು ಧ್ಯಾನ ಮುದ್ರೆಯಲ್ಲಿ ಕುಳಿತ್ತಿದ್ದಾನೆ. ಹಿನ್ನೆಲೆ ಹುತ್ತವು ರಚನೆಯಾಗಿದೆ. ಮೇಲ್ಬಾಗದ ತುದಿಯಲ್ಲಿ ಬಿಳಿವರ್ಣದ ಆಕಳು ಚಿತ್ರಿತವಾಗಿದ್ದು ಅಕ್ಕ ಪಕ್ಕದಲ್ಲಿ ಹಸಿರು ವರ್ಣಗಳಿಂದ ಮರಗಳು ಮೂಡಿಬಂದಿವೆ. ನಂತರ ಭಾಗದಲ್ಲಿ ಅಕ್ಕಮಹಾದೇವಿಯ ಶಿವಭಕ್ತ ದಂಪತಿಗಳ ಮಗಳಾಗಿ ಹುಟ್ಟಿ ಮಹಾದೇವಿ ಎಂಬ ಹೆಸರಿನಿಂದ ಬೆಳೆದಳು. ಸುಂದರಿಯಾದ ಇವಳನ್ನು ಕೌಶಿಕ ರಾಜ ಹೆಂಡತಿಯಾಗೆಂದು ಬೇಡಿದನು, ದೇವಿ ಒಪ್ಪಿದಳು, ಆದರೆ ಆತನು ಶಿವಭಕ್ತನಾಗಲು ಒಪ್ಪದ ಕಾರಣ ದೇವಿಯು

೫೬. ಸುಚಿತ್ರಾ ಲಿಂಗದಳ್ಳಿ : ವಿಜಯನಗರ ಭಿತ್ತಿಚಿತ್ರಕಲೆ ಎಂ.ಫಿಲ್. ಪ್ರ. ಪು. ೬೦ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬





೨೦. ಸ್ಟ್ಯಾಂಡಿಂಗ್ ತೊಟ್ಟಿಲು

ಮದುವೆಯಾಗದೆ ಬೆತ್ತಲೆಯಾಗಿ ಕೇಶವನ್ನು ವಸನವನ್ನಾಗಿ ಮಾಡಿಕೊಂಡು ಕಲ್ಯಾಣಕ್ಕೆ ಬಂದಳು. ಅಲ್ಲಿ ಅಲ್ಲಮಪ್ರಭುವಿನ ಉಪದೇಶವನ್ನು ಪಡೆದು ಶ್ರೀಶೈಲದ ಕದಳಿಯ ವನಕ್ಕೆ ತೆರಳಿ ಅಲ್ಲಿಯೇ ಶಿವೈಕ್ಯಳಾದಳು.[೫೭] ಇಲ್ಲಿ ದೇವಿಯ ಮೈಬಣ್ಣ ಗೋದಿಗೆಂಪು ವರ್ಣದಿಂದ ರಚಿಸಿದ್ದು ಹಿನ್ನೆಲೆಯಲ್ಲಿ ಆಕಳು ಬಿಳಿವರ್ಣದಲ್ಲಿ ರಚಿತವಾಗಿದೆ. ದೇವಿಯ ಕೇಶವು ಕಾಲತುದಿಯವರೆಗೂ ಕಂಡುಬಂದಿದೆ. ಇಲ್ಲಿಯ ಗಿಡಗಳು ಹಸಿರು ವರ್ಣದಲ್ಲಿ ರಚನೆಯಾಗಿವೆ. ಮುಂದೆ ಪಂಚಾಕ್ಷರ ಮುನಿಯು ಕಂಡುಬಂದಿದ್ದು ಮೈಬಣ್ಣ ಗೋದಿಗೆಂಪು ಎದುರುಗಡೆ ಶಿವಲಿಂಗ ಬೂದುವರ್ಣದಲ್ಲಿ ಮೂಡಿಬಂದಿದೆ. ಪಂಚಾಕ್ಷರಿಯ ಎಡ ಮತ್ತು ಬಲಭಾಗದಲ್ಲಿ ಬೃಹತ್ತಾದ ಕಂಬಗಳು ನಕ್ಷಾವಿನ್ಯಾಸದಿಂದ ಕೂಡಿವೆ. ನಾಲ್ಕನೆಯ ಭಾಗದಲ್ಲಿ ಅಲ್ಲಮಪ್ರಭು ಮೂಡಿಬಂದಿದ್ದಾನೆ. ಇಲ್ಲಿ ಬಿಳಿವರ್ಣದ ಪಂಚೆ ಗಿಡಮರಗಳು, ದೇವಾಲಯ ನೀಲಿ ವರ್ಣದಿಂದ ಕೂಡಿದೆ. ಪ್ರಭುತಲೆಜುಟ್ಟು ಕಟ್ಟಿದ್ದು ಶಿವನಿಗೆ ನಮಸ್ಕರಿಸುವ ಹಾಗೇ ಕಂಡುಬಂದಿದೆ.ಕಲಬುರ್ಗಿ ಶಿವಶರಣರು ಇಲ್ಲಿ ಎರಡು ಮುಖಗಳು ಕಂಡು ಬಂದಿವೆ. ಶರಣರಿಗೆ ಕಿರೀಟಗಳು ಕಂಡುಬಂದಿದ್ದು ಮೇಲ್ಭಾಗದಲ್ಲಿ ನವಿಲುಗರಿಯಾಕಾರವಿದೆ. ಎದುರು ಭಾಗದಲ್ಲಿ ಈಶ್ವರಲಿಂಗವು ಬೂದು ವರ್ಣದಿಂದ ರಚಿಸಿದ್ದಾರೆ. ಶರಣರ ಹಿಂಭಾಗ ದುಂಡಾಗಿದ್ದು ನೇರಳೆ ವರ್ಣದಿಂದ ಹೂಬಳ್ಳಿಯ ಕಮಾನು ರಚಿಸಿದ್ದಾರೆ. ಇಲ್ಲಿ ಎರಡು ಚಿತ್ರಗಳು ಕಮಾನು ಹೊಂದಿದ್ದು ಇನ್ನೆರಡು ಚಿತ್ರಗಳಲ್ಲಿ ಮರಗಳನ್ನು ಕಲಾವಿದ ಇಲ್ಲಿ ರಚಿಸಿದ್ದಾನೆ. ನಾಲ್ಕನೆಯ ಚಿತ್ರದಲ್ಲಿ ಯಥಾದರ್ಶನದ ಕಲ್ಪನೆ ಬರುವ ಹಾಗೇ ಕಲಾವಿದ ತಿಳಿನೀಲಿ, ಬಿಳಿ, ಕೆಂಪು, ವರ್ಣಗಳನ್ನು ಬಳಸಿ ದೂರದಲ್ಲಿ ಗಿಡಮರಗಳು, ದೇವಾಲಯಗಳು ಕಂಡುಬರುತ್ತವೆ.

ತೊಟ್ಟಿಲು ಕಂಬಗಳಿಗೆ ಬಣ್ಣಗಳ ಮಿಶ್ರಣ ಕುತುಹಲಕಾರಿಯಾಗಿದೆ. ಇಲ್ಲಿ ಕಂಬಗಳು ಚಕ್ರದ ಹಾಗೇ ತಿರುಗುತ್ತಿರುವ ಕಲ್ಪನೆ ಮೂಡುತ್ತದೆ. ಕೆಂಪು, ಹಳದಿ, ಅಲ್ಲಲ್ಲಿ ಹಸಿರು, ನೀಲಿ, ಬಿಳಿ, ಜಾಂಬಳಿ, ವರ್ಣವನ್ನು ಬಳಸಿದ್ದಾರೆ. ನೋಡಲಿಕ್ಕೆ ಇದು ದ್ವಾರಬಾಗಿಲಿನಂತೆ ಕಂಡುಬರುತ್ತದೆ.

### ೨೧.ಉಯ್ಯಾಲೆ

ಮದುವೆಯ ಸಂದರ್ಭದಲ್ಲಿ ವಧುವರರ ನಡುವೆ ನಡೆಯುವ ಒಂದು ವಿನೋದ ಆಟ ಹೂವಿನಿಂದ ಸಿಂಗರಿಸಿದ ಉಯ್ಯಾಲೆಯಲ್ಲಿ ಗಂಡು ಮೊದಲು ಕೂರುವನು ಆಗ ಹೆಣ್ಣು ಉಯ್ಯಾಲೆಯನ್ನು ತೂಗುವಳು ನಂತರ ಹೆಣ್ಣು ಕೂರುವಳು ಅವಳನ್ನು ಗಂಡು ತೂಗುವುದು ಇದಾದ ನಂತರ ಗಂಡು ಹೆಣ್ಣು ಜೊತೆಗೆ ಕೂಡಿಸಿ ಮನೆಮಂದಿ ಗೆಳೆಯ ಗೆಳತಿಯರು ತೂಗುವುದಾಗಿದೆ. ಇಂತಹ ಸಂಪ್ರದಾಯದೊಂದಿಗೆ ಬೆಳೆದು ಬಂದಿದೆ.[೫೮] ಹಿಂದೆ ಕೃಷ್ಣನು ಹಾಗೆ ರಾಧೆಯ ಉಯ್ಯಾಲೆ ಆಟ ನೆನಪಿಗೆ ಬರುತ್ತದೆ. ಈ ಕಲಾಕೃತಿಯ ಮೇಲಿನಿಂದ ಎರಡನೆಯ ಪಟ್ಟಿಯಲ್ಲಿ ಎಂಟು ಭಾಗಗಳನ್ನು ಮಾಡಿಕೊಂಡು ಎಂಟು ಭಾಗಗಳಲ್ಲಿಯ ನರ್ತಕೀಯು ಎದುರು ನೋಟದ ಭಂಗಿಯಲ್ಲದೆ ನಂತರದಲ್ಲಿ ನರ್ತಕೀಯರ ಚಿತ್ರಗಳು ರಚನೆಯಾಗಿವೆ. ಮೊದಲ ಭಾಗದಲ್ಲಿ ನರ್ತಕೀಯರು ಬಲಗಡೆ ನೋಡುತ್ತಿದ್ದು ಒಂದು ಕೈ ಮೇಲಕ್ಕೆ ಇನ್ನೊಂದು ಕೈ ಕೆಳಗೆ ಎರಡು ಕಾಲುಗಳನ್ನು ಡೊಂಕಿಸಿ ಒಂದು ಮುಂದೆ ಇನ್ನೊಂದು ಹಿಂದೆ ಇದೆ. ಮೂರನೆಯ ಭಾಗದ ಚಿತ್ರದಲ್ಲಿ ಎರಡು ಕೈಯನ್ನು ಮೇಲಕ್ಕೆ ಮಾಡಿ ಕಾಲುಗಳನ್ನು ಸಮನಾಗಿ ಜೋಡಿಸಲಾಗಿದೆ. ನಾಲ್ಕನೆಯದಾಗಿ ಇಲ್ಲಿ ಬಲಗೈಯನ್ನು ಕೆಳಗಿನಿಂದ ಮೇಲಕ್ಕೆ ಎಡಗೈಯನ್ನು ಕೆಳಕ್ಕೆ ಬಿಡಲಾಗಿದೆ. ಇಲ್ಲಯೂ ಸಹ ಒಂದು ಕಾಲು ಮುಂದೆ ಇನ್ನೊಂದು ಹಿಂದೆ ಇದೆ. ಐದನೆಯದಾಗಿ ಎರಡು ಕೈಗಳನ್ನು ಮುಂದೆ ಕೂಡಿಸಿದೆ, ಆರನೆಯ ಭಾಗದದಲ್ಲಿ ಬಲಗೈಯನ್ನು ಮೇಲಕ್ಕೆ ಎತ್ತಿ ಎಡಗೈಯನ್ನು ಬುಜದ ಮೇಲೆ ಸಮನಾಗಿ ನಿಲ್ಲಿಸಿದ್ದಾರೆ. ಬಲಗಾಲನ್ನು ಸ್ವಲ್ಪ ಡೊಂಕಿಸಿ ನಿಲ್ಲಿಸಿದ್ದಾಳೆ ಎಡಗಾಲನ್ನು ಸೊಂಟದ ಸಮನಾಗಿ ಮೇಲಕ್ಕೆ ಎತ್ತಿ ಬಲಗಾಲಿಗೆ ಹಚ್ಚಿದ್ದಾಳೆ, ಏಳನೆಯದಾಗಿ ಇಲ್ಲಿ ನರ್ತಕಿಯು ಬಲಗೈಯನ್ನು ಬುಜದ ಮೇಲೆ ಸಮಾಂತರವಾಗಿ ನಿಲ್ಲಿಸಿ ಮತ್ತೆ ಮುಂಗೈಯನ್ನು ಮೇಲಕ್ಕೆ ಒಯ್ಯಲಾಗಿದೆ. ಈ

---

೫೭. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೧ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೫೮. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೧ ಪು. ೨೧೭ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಕೃತಿಯಲ್ಲಿ ಬಲಗಾಲನ್ನು ಮೇಲಕ್ಕೆ ಎತ್ತಿದ್ದು, ಎಡಗಾಲನ್ನು ನೇರವಾಗಿ ಇಡಲಾಗಿದೆ. ಕೊನೆಯದಾಗಿ ಈ ನರ್ತಕೀಯು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿದ್ದಾಳೆ. ಎಡಗಾಲ ಮಂಡಿಯೂರಿ ಕುಳಿತಿರುವ ದೃಶ್ಯವಿದೆ. ಎಲ್ಲಾ ನರ್ತಕೀಯರ ಹಿಂದೆ ಬೃಹದ್ದಾಕಾರದ ನಕ್ಷಾ ವಿನ್ಯಾಸವಿದೆ. ಆದರೆ ಏಳನೆ ನರ್ತಕೀಯರು ಹಿಂದೆ ಇದು ಅತಿ ಸಣ್ಣ ಪ್ರಮಾಣದಲ್ಲಿ ಕಂಡುಬಂದಿದೆ. ಹಾಗೂ ಪ್ರತಿಯೊಂದು ಚಿತ್ರದ ಹಿನ್ನೆಲೆಯಾಗಿದೆ ಕಾಮನ ಬಿಲ್ಲಿನ ಹಾಗೆ ವರ್ಣಗಳನ್ನು ಮಿಶ್ರಣ ಮಾಡಲಾಗಿದೆ.

ಉಯ್ಯಾಲೆಯ ಕೊನೆಯ ಪಟ್ಟಿಕೆಯಲ್ಲಿ ನಿಸರ್ಗ ಚಿತ್ರಣ ಮೂಡಿದೆ. ಈ ದೃಶ್ಯದಲ್ಲಿ ಆನೆಗಳ ಸಾಲುಗಳು ಎದುರುಬದುರು ಬರುವಂತಹ ದೃಶ್ಯಇದಾಗಿದೆ. ಮುಖ್ಯವಾಗಿ ಇಲ್ಲಿ ಸೂರ್ಯೋದಯ ಸಂದರ್ಭ ರಚಿತವಾಗಿದ್ದು ಬೆಳಗಿನ ಸಮಯದ ಮಂಜನ್ನು ಸೇರೆ ಹಿಡಿಯಲಾಗಿದೆ. ಸಣ್ಣ ಸಣ್ಣದಾಗಿ ಸಾಲುಗಟ್ಟಿ ಬೆಳೆದ ಬೆಟ್ಟದ ಸಾಲು ಆನೆಗಳ ಹಾಗೆ ಸಾಲಾಗಿ ನಿಂತ ಬೃಹತ್ ಆಕಾರದ ಮರಗಳು ಮೂಡಿಬಂದಿವೆ. ಇಲ್ಲಿಯೂ ಸಹ ಹಿನ್ನೆಲೆ ಲೇಪನವನ್ನು ಮೂರು ವರ್ಣಗಳಿಂದ ರಚಿಸಲಾಗಿದ್ದು ಕಂಡುಬರುತ್ತದೆ. ನೋಡುವುದಕ್ಕೆ ಯಥಾದರ್ಶನದ ಅರಿವು ಮೂಡುವುದು ಕಂಡಿತ, ಆದರೆ ಮರಗಳಲ್ಲಿ ಈ ಭಾವನೆ ಮೂಡುವದಿಲ್ಲ ಮೇಲಿಂದ ಮೊದಲನೆಯ ಪಟ್ಟಿಕೆಯಲ್ಲಿ ಎಂಟು ಕಮಾನಿನಾಕಾರ ರಚಿಸಿ ಇಲ್ಲಿ ಹೂಬಳ್ಳಿಯ ನಕ್ಷಾ ವಿನ್ಯಾಸಗಳು ರಚಿಸಿದ್ದಾರೆ. ಅಲ್ಲಲ್ಲಿ ರೇಖೆಗಳು ಕಂಡುಬರುತ್ತವೆ.

ಎರಡನೆಯ ಪಟ್ಟಿಕೆಯಲ್ಲಿ ರಚಿಸಲಾದ ನರ್ತಕೀಯರು ದೇವತಾ ಸ್ತ್ರೀಯರು ಆಗಿರುತ್ತಾರೆ. ಅದರಲ್ಲಿ ರಂಬೆ, ಊರ್ವಶಿ, ಮೇನಕೆ, ಅಪ್ಸರೆಯರ ರೂಪ ಲಾವಣ್ಯದ ಬಗೆಗೆ ಭರತನ ನಾಟ್ಯಶಾಸ್ತ್ರದಲ್ಲಿ ರೂಪ, ಬೇದ, ಪ್ರಮಾಣ, ಲಾವಣ್ಯ, ವರ್ಣಿಕಾ ಭಂಗದ, ಬಗ್ಗೆ ಮಾಹಿತಿ ದೊರೆಯುತ್ತದೆ. ಮುನಿಗಳ ತಪಸ್ಸನ್ನು ಕೆಡಿಸಿದ್ದರ ಬಗ್ಗೆ ಅನೇಕ ಕಥೆಗಳು ಪುರಾಣದಲ್ಲಿವೆ. ಅಲ್ಲದೆ ತೊಡೆಯನ್ನು ಹೋಳುಮಾಡಿದ ನಂತರ ಅದರಲ್ಲೇ ಸುಂದರಿಯಾದ ಊರ್ವಶಿ ಹುಟ್ಟಿದಳೆಂದೂ ಆಕೆಯ ಸೌಂದರ್ಯವನ್ನು ಕಂಡು ಉಳಿದ ಅಪ್ಸರೆಯರು ನಾಚಿಕೆಯಿಂದ ಹಿಂದುರುಗಿದರೆಂದು ಕಥೆಯೂ ಇದೆ.

ಈ ಕಲಾಕೃತಿಯು ಸುಮಾರು ೬ X ೩ ಅಳತೆಯಲ್ಲಿ ಸಾಗುವಾನಿ ಕಟ್ಟಿಗೆಯಲ್ಲಿ ರಚನೆಯಾಗಿದೆ. ಇಲ್ಲಿ ಒಂದು ವರ್ಣದ ಪಕ್ಕದಲ್ಲಿ ಮತ್ತೊಂದು ವರ್ಣವನ್ನು ಮಿಶ್ರಣ ಮಾಡುವುದು ಕುತೂಹಲವುಂಟು ಮಾಡುತ್ತದೆ. ಈ ಕಲಾಕೃತಿಯು ಹೆಚ್ಚಾಗಿ ಕೆಂಪು ವರ್ಣದಲ್ಲಿ ಮೂಡಿಬಂದಿದ್ದು ಮಧ್ಯದಲ್ಲಿ ಹತ್ತಿಯನ್ನು ಬಳಸಿ ನಿರ್ಮಿಸಿದ ಕುಶನ್ ಕೂಡಾ ಇದೆ. ಇಲ್ಲಿಯೂ ಸಹಿತ ಮೊಳೆಗಳನ್ನು ಬಳಸದೆ ನಿರ್ಮಿಸಲಾಗಿದೆ. ಅಲ್ಲಲ್ಲಿ ಹಸಿರು ವರ್ಣವನ್ನು ಬಳಸಲಾಗಿದೆ. ಈ ಕಲಾಕೃತಿಯ ಹಿಂಬಾಗದ ಮೊದಲನೆ ಪಟ್ಟಿಕೆಯಲ್ಲಿ ಎಂಟು ಕಮಾನುಗಳನ್ನು ರಚಿಸಿದ್ದಾರೆ. ಒಂದರ ಮಧ್ಯದಲ್ಲಿ ಒಂದು ಹೂಗಳನ್ನು ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ನಿಸರ್ಗಚಿತ್ರ ರಚಿಸಿದ್ದು ಇಲ್ಲಿಯೂ ಸೂರ್ಯನು ಹುಟ್ಟುವ ಹಾಗೇ ಕಾಣುತ್ತದೆ. ದೂರದ ಬೆಟ್ಟಗಳು ನೀಲಿ ಆಕಾಶ, ಕೆಂಪು, ವರ್ಣದಿಂದ ಉದಯಿಸುತ್ತಿರುವ ಸೂರ್ಯನು ನೋಡುಗರ ಮನಸ್ಸನ್ನು ಮುಗ್ಧಗೋಳಿಸುತ್ತದೆ. ಇಲ್ಲಿಯೂ ಮನುಷ್ಯರ ಚಿತ್ರಗಳು ಕೂಲಿಕಾರ್ಮಿಕರ ಹಾಗೆ ಇವೆ. ಇಲ್ಲಿಯೂ ಗಿಡಗಳು ರಚನೆಯಾಗಿವೆ. ಅಲ್ಲದೇ ಎಲ್ಲ ಚಿತ್ರಗಳು ಎದುರುಬದುರಾಗಿವೆ. ಕೊನೆಯ ಪಟ್ಟಿಕೆಯಲ್ಲಿ ರಚನೆಯಾದ ಇದು ಸಹ ನಿಸರ್ಗಚಿತ್ರವಾಗಿದ್ದು ಇಲ್ಲಿ ಚಿಗರೆಗಳು ಸಾಲಾಗಿ ಎದುರುಬದುರಾಗಿ ಬರುತ್ತಿವೆ. ಬಲಗಡೆ ಒಂದು ಚಿಗರೆ ಓಡುತ್ತಿರುವ ಹಾಗಿದೆ. ಎಡಗಡೆಯಲ್ಲಿ ಎರಡು ಚಿಗರೆಗಳು ಓಡುತ್ತಿರುವ ಹಾಗಿದೆ. ನೀಲಿ ಆಕಾಶದಲ್ಲಿ ಸೂರ್ಯನು ಬಿಳಿವರ್ಣದಲ್ಲಿ ಚಿತ್ರಿಸಲಾಗಿದ್ದು ಸೂರ್ಯನ ಮುಂದೆ ನೀರಿನ ಹಾಗೆ ಕಪ್ಪು ವರ್ಣದಿಂದ ರಚಿಸಲಾಗಿದೆ. ಇಲ್ಲಿಯೂ ಗಿಡಗಳು ಸಾಲಾಗಿವೆ. ಸುಂದರವಾದ ವಿನ್ಯಾಸದಿಂದ ಕಂಗೋಳಿಸುತ್ತದೆ.

**೨೨. ಡಪ್ಪೆ ಪಲ್ಲಕ್ಕಿ**

ರಥೋತ್ಸವದಲ್ಲಿ ಉತ್ಸವ ಮೂರ್ತಿಯನ್ನು ಇರಿಸಿಕೊಂಡು ಇದೇ ತರಹದ ಬೇರೆ ದೇವರು ಮಠಾಧಿಪತಿಗಳು, ಋಷಿಗಳು, ರಾಜಮಹಾರಾಜರ ಮದುವೆಯಲ್ಲಿ ಇವರನ್ನು ವಿಶೇಷವಾಗಿ ಹೊತ್ತೊಯುವ ಸಾಧನ ದಂಡಿಗೆ, ಅಂಧನ ಮುಂತಾಗಿಯು ಕರೆಯುತ್ತಾರೆ. ಪ್ರಸಿದ್ಧ ಯಾತ್ರಾಸ್ಥಳಗಳಲ್ಲಿ ಈ ಪಲ್ಲಕ್ಕಿ ಉತ್ಸವ

ಜರುಗುವುದುಂಟು[೫೯] ಒಳ್ಳೆಯವರು ಉಳ್ಳಾಡುವಾಗ ಗುಳ್ಳವ ಪಲ್ಲಕ್ಕಿ ಬೇಡಿದಳೆಂಬ ಗಾದೆ ಮಾತಿನ ಹಿಂದೆ ಶಿಷ್ಟದೇವತೆಗಳ ಉತ್ಸವದಲ್ಲಿ ಇದರ ಬಳಕೆ ಹೆಚ್ಚಾಗಿ ಕಂಡುಬರುತ್ತದೆ.[೬೦] ಪಲ್ಲಕ್ಕಿಯ ಬಳಕೆಯನ್ನು ಹಂಪೆಯ ವೀರೂಪಾಕ್ಷ ದೇವಾಲಯದ ಮುಖಮಂಟಪದ ಛಾವಣಿಯಲ್ಲಿ ಭಿತ್ತಿ ಚಿತ್ರದಲ್ಲಿ ಕಾಣಬಹುದು. ಈ ಡಪ್ಪೆ ಪಲ್ಲಕ್ಕಿಗಳು ಸಾಮಾನ್ಯವಾಗಿ ಐದು ಅಡಿ ಉದ್ದವನ್ನು ಎರಡುವರೆ ಅಡಿ ಅಗಲವನ್ನು ಮತ್ತು ಹನ್ನೆರಡು ಅಂಗುಲ ಎತ್ತರವನ್ನು ಹೊಂದಿರುತ್ತವೆ. ಪಲ್ಲಕ್ಕಿಯನ್ನು ರಚಿಸಲು ಹನ್ನೆರಡು ಅಂಗುಲ ಎತ್ತರಕ್ಕೆ ಸುತ್ತಲೂ ಸಾಗುವಾನಿ ಮರದ ಹಲಗೆಯಿಂದ ಹಡಗಿನ ಆಕಾರದ ಚೌಕಟ್ಟನ್ನು ನಿರ್ಮಿಸಲಾಗುತ್ತದೆ. ತಲೆಭಾಗವನ್ನು ಹಲಗೆಯಿಂದ ಜೋಡಿಸಲಾಗುವುದು. ಪಲ್ಲಕ್ಕಿಯ ಎರಡುಕಡೆ ಕತ್ತರಿ ಆಕಾರದ ಪಟ್ಟಿಗಳ ನಡುವೆ ಕಮಾನಿನ ಆಕೃತಿಯ ಸಾಗುವಾನಿಯ ಬೊಂಬನ್ನು ಬಿಗಿಯಾಗಿ ಕಟ್ಟುತ್ತಾರೆ. ಈ ಡಪ್ಪೆ ಪಲ್ಲಕ್ಕಿಯ ಒಳಭಾಗದಲ್ಲಿ ರೋಣ ತಾಲೂಕಾ ನರೇಗಲ್ ಗ್ರಾಮದ ಶ್ರೀ ಹುಚ್ಚಿರಪ್ಪಜ್ಜ ಮಹಾಸ್ವಾಮಿಗಳ ಚಿತ್ರ ಬಿಡಿಸಲಾಗಿದೆ. ಇದರ ಕೆಳಗೆ, ಮೂರನೆಯ ಪಟ್ಟಿಕೆಯಲ್ಲಿ ವೃತ್ತಾಕಾರವಾಗಿ ವಿಂಗಡಿಸಿಕೊಂಡು ಹಳದಿ, ನೀಲಿ ವರ್ಣದ ಹೂಗಳನ್ನು ಚಿತ್ರಿಸಲಾಗಿದೆ. ಭಾಹ್ಯರೇಖೆಯಾಗಿ ಬಿಳಿ ವರ್ಣವನ್ನು ಬಳಸಲಾಗಿದೆ. ಡಪ್ಪೆ ಪಲ್ಲಕ್ಕಿಯ ಹೊರಭಾಗದ ಮೊದಲನೆಯ ಪಟ್ಟಿಕೆಯಲ್ಲಿ ಸುಳುವುಗಳಿಂದ ರಚಿಸಲಾಗಿದೆ. ಇದೇ ಭಾಗದ ಮೂರನೆಯ ಪಟ್ಟಿಕೆಯಲ್ಲಿ ದೊಡ್ಡ ದೊಡ್ಡ ಹೂಗಳನ್ನು ಪಲ್ಲಕ್ಕಿಯ ಸುತ್ತಲೂ ಬರೆಯಲಾಗಿದೆ. ಕೊನೆಯ ಪಟ್ಟಿಯಲ್ಲಿ ಹಸಿರು ವರ್ಣದಿಂದ ಎಲೆಗಳ ಆಕಾರದಲ್ಲಿ ಬಿಡಿಸಲಾಗಿದೆ. ಈ ಡಪ್ಪೆ ಪಲ್ಲಕ್ಕಿಯು ಹೆಚ್ಚಾಗಿ ಕೆಂಪು ವರ್ಣದಿಂದ ರಚಿಸಿದ್ದಾರೆ. ಅಲ್ಲಲ್ಲಿ ಸರಪಳಿಯಾಕಾರ ರೇಖೆಗಳನ್ನು ಈ ಕಲಾಕೃತಿಯಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಅರಗಿನ ಬಣ್ಣದಿಂದ ನಿರ್ಮಾನವಾದ ಕೃತಿಯಾಗಿದೆ. ಅಲ್ಲದೆ ದೇವಿಯ ಮೂರ್ತಿಕೂಡಿಸುವ ಸ್ಥಳದಲ್ಲಿ ಹತ್ತಿಯನ್ನು ಬಳಸಿ ಮೃದುವಾದ ಹೊದಿಕೆಯನ್ನು ಕಾಣಬಹುದಾಗಿದೆ. ಈ ಕಲಾಕೃತಿಯಲ್ಲಿ ಮೊಳೆಯನ್ನು ಹೊಡೆಯದೆ ಇರುವುದು ವಿಶೇಷವಾಗಿ ಕಂಡುಬರುತ್ತದೆ. ಅಲ್ಲದೇ 'ಪ್ರಾಚೀನ ಕನ್ನಡ ಕಾವ್ಯ' 'ಪಂಪಭಾರತ' ಹಾಗೂ 'ರಾಮ ವಿಜಯ' ಕಾವ್ಯದಲ್ಲಿ ಚಿನ್ನದಿಂದ ಕೂಡಿದ ಮುತ್ತಿನ ಪಲ್ಲಕ್ಕಿಯನ್ನು ಜನಕ ಮಹಾರಾಜ ಸೀತೆಗೆ ಬಳುವಳಿಯಾಗಿ ಕೊಡುತ್ತಾನೆ.[೬೧]

**೨೩. ಪಾಲಿಕೆ**

ಈ ಪಾಲಿಕೆಯಲ್ಲಿ ಹಲವಾರು ಬಣ್ಣಗಳ ಬಳಕೆಯಾಗಿದ್ದು ಕಂಡುಬರುತ್ತದೆ. ಅಲ್ಲದೆ ಮಠದ ಸ್ವಾಮಿಯ ಚಿತ್ರಗಳು ಇರುವುದು ಅಸ್ಪಷ್ಟವಾಗಿ ಕಂಡುಬರುತ್ತದೆ. ಹಡಗದ ಆಕಾರದಲ್ಲಿ ನಿರ್ಮಾಣವಾದ ಇದು ಸುಂದರ ವಿನ್ಯಾಸದಿಂದ ಕಂಗೊಳಿಸುತ್ತದೆ. ಕಮಾನು ಆಕಾರವಾಗಿ ಬಾಗಿದ ಮರದ ತುಂಡಿಗೆ ಬಿಳಿದಾರ ಹಗ್ಗ, ಮುಂತಾದವುಗಳನ್ನು ಬಿಗಿಯುವುದು ಸಾಮಾನ್ಯವಾಗಿದೆ ಇಲ್ಲಿ ಒಳಭಾಗದಲ್ಲಿ ಹಲವಾರು ವೃತ್ತಗಳನ್ನು ರಚಿಸಿ ಚಿಕ್ಕ ಚಿಕ್ಕ ಹೂಗಳನ್ನು ರಚಿಸಿದ್ದಾರೆ. ಅಲ್ಲದೇ ನಕ್ಷಾ ವಿನ್ಯಾಸ ಈ ಕಲಾಕೃತಿಯಲ್ಲಿ ಅಧಿಕ ಸುಳುವುಗಳಿಂದ ಕೂಡಿದ ಹಲವಾರು ಬಣ್ಣದ ರೇಖಾ, ಪಟ್ಟಿಕೆಗಳು ಮುಂತಾದವುಗಳು ರಚನೆಯಾಗಿವೆ.

**೨೪. ಪಾಲಿಕೆ**

ಈ ಮೇಲಿನ ಪಾಲಿಕೆಯ ಹಾಗೆ ಇಲ್ಲಿ ಹಲವಾರು ಬಣ್ಣಗಳು ಬಳಕೆಯಾದರು ಬಳಸುವ ವಿಧಾನ ಮಾತ್ರ ಒರಟಾಗಿದೆ ಎನ್ನಿಸುತ್ತದೆ. ಒರಟು ಒರಟಾದ ರೇಖೆಗಳು, ಸುಳುವುಗಳು, ಹೂಬಳ್ಳಿಯ ವಿನ್ಯಾಸ ಬಣ್ಣದ ಪಟ್ಟಿಕೆಗಳಲ್ಲಿ ಕಂಡುಬರುತ್ತದೆ. ಇಲ್ಲಿಯೂ ಸಹ ಮಧ್ಯದಲ್ಲಿ ವೃತ್ತರಚಿಸಿ ಮಠದ ಸ್ವಾಮಿಯ ಚಿತ್ರಬಿಡಿಸಿದ್ದು ಕಂಡುಬರುತ್ತದೆ. ಈ ಕಲಾಕೃತಿಯಲ್ಲಿ ಸೂಕ್ಷ್ಮವಾದ ರೇಖೆಗಳು ಎಲ್ಲೂ ಕಂಡುಬರುವದಿಲ್ಲ.

**೨೫. ಪಾಲಿಕೆ**

ಇಲ್ಲಿ ಎರಡು ಪಾಲಿಕೆಯಲ್ಲಿ ಕಲಾವಿದ ದೊಡ್ಡ ಸುಳುವುಗಳನ್ನು ರಚಿಸಿ ನೆರಳು ಬೆಳಕಿನ ಕಲ್ಪನೆ ಮೂಡಿಸಿದ್ದಾನೆ. ಅಲ್ಲದೆ ಉಬ್ಬುಶಿಲ್ಪದ ಕಲ್ಪನೆ ಮೂಡುವುದು ಇಲ್ಲಿ ಕೇವಲ ನಾಲ್ಕಾರು ಬಣ್ಣಗಳ ಬಳಕೆ

---

೫೯. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೧೨೩೧ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೬೦. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೪೪ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೬೧. -ಅದೇ- ಪು. ೩೮



೧೧. ಡಪ್ಪೆ ಪಲ್ಲಕ್ಕಿ



೧೩. ಪಾಲಕಿ



೨೪. ಪಾಲಕಿ



೨೫. ಪಾಲಕಿ



೨೬. ಪಾಲಕಿ

ಮಾತ್ರವಿದ್ದು ಕಂಡುಬರುತ್ತದೆ. ಕೆಳಭಾಗದಲ್ಲಿ ತಿಳಿಗುಲಾಬಿ, ತಿಳಿನೀಲಿ, ವರ್ಣಗಳಿಂದ ಎಲೆಯ ಹಾಗೆ ಅಥವಾ ಉಬ್ಬು ತಗ್ಗು ಎನಿಸುವ ಹಾಗೆ ರಚಿಸಿದ್ದಾರೆ. ಅಲ್ಲಲ್ಲಿ ದಟ್ಟಹಸಿರು ಬಣ್ಣದ ಬಳಕೆ ಇದೆ.

### ೨೬. ಪಾಲಿಕೆ

ಈ ಮೇಲಿನ ಎರಡು ಪಾಲಿಕೆಗಳು ಮತ್ತು ಈ ಪಾಲಿಕೆಯನ್ನು ಗಮನಿಸಿದಾಗ ಮೇಲಿನ ಎರಡು ಪಾಲಿಕೆಗಳು ರಚನಾ ಹಂತದವುಗಳಾಗಿವೆ. ಅಲ್ಲದೆ ಈ ಪಾಲಿಕೆಗಳು ಸ್ವಲ್ಪ ಮಟ್ಟಿಗಾದರು ಉತ್ತಮ ರೇಖೆಗಳು, ಸುಳುವುಗಳು, ವಿವಿಧ ವಿನ್ಯಾಸಗಳು, ವರ್ಣಗಳಲ್ಲಿ ಮೂಡಿವೆ. ಅಲ್ಲದೆ ಕಮಾನು ಹಾಗೆ ಅಡ್ಡಹಾಕಲಾದ ಮರದ ತುಂಡಿಗೂ ಸಹ ಸುಳುವುಗಳನ್ನು ರಚಿಸಿದ್ದಾರೆ. ಇದರ ಒಂದು ತುದಿಗೆ ಆನೆ. ಮತ್ತೊಂದು ತುದಿಗೆ ನಂದಿ ಮಧ್ಯದಲ್ಲಿ ಗೋಪುರ ಆಕಾರ ಕಂಡುಬರುತ್ತದೆ.

### ೨೭. ದ್ಯಾಮವ್ವ ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳು

ಗ್ರಾಮದೇವತೆಯ ಪ್ರಭಾವಳಿಯಾದ ಈ ಕಲಾಕೃತಿಯು ವಿಷ್ಣುವಿನ ಹತ್ತು ದಶಾವತಾರಗಳನ್ನು ಇಲ್ಲಿ ಚಿತ್ರಿಸಲಾಗಿದೆ. ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣು ಲೋಕ ಕಲ್ಯಾಣಕ್ಕಾಗಿ ಒಂದೊಂದು ಸಂದರ್ಭದಲ್ಲಿ ಒಂದೊಂದು ಅವತಾರಗಳನ್ನು ತಾಳಿ ದುಷ್ಟರಿಂದ ಜಗತ್ತನ್ನು ರಕ್ಷಿಸಿದ ಜಗದ್ರಕ್ಷಕ ಎಂಬ ಪ್ರತೀತಿ ಇದೆ. ಈ ಅವತಾರಗಳ ಹಿನ್ನೆಲೆಯಲ್ಲಿ ರೋಚಕವಾದ ಕಥೆಗಳನ್ನು ಹೆಣೆಯಲಾಗಿದೆ. ಈ ಅವತಾರಗಳಲ್ಲಿ ಮೊದಲಿಗೆ ಬರುವುದು ಮತ್ಸ್ಯ (ಮೀನು), ಅವತಾರ ನಂತರ ಕೂರ್ಮ (ಆಮೆ) ವರಾಹ ( ಹಂದಿ), ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ (ಕಲಿಯುಗ) ಹೀಗೆ ವಿಷ್ಣುವಿನ ಹತ್ತು ಅವತಾರಗಳು ಇಲ್ಲಿವೆ.

ಹಿಂದೂ ಧರ್ಮ ಮತ್ತು ಪುರಾಣಗಳಲ್ಲಿ ದೇವರು– ಮನುಷ್ಯ ಅಥವಾ ಪ್ರಾಣಿರೂಪ ಧರಿಸುವುದನ್ನು 'ಅವತಾರ' ಎಂದು ಕರೆಯಲಾಗಿದೆ. ಪ್ರಾಪಂಚಿಕ ನಿಯಮಗಳಿಗೆ ಭಂಗ ಬಂದು ದುಷ್ಕೃತ್ಯಗಳು ಹೆಚ್ಚಿದಾಗ ಅವುಗಳನ್ನು ನಿವಾರಿಸಿ ಹತೋಟಿಯಲ್ಲಿ ತರುವ ಸಲುವಾಗಿ ವಿಷ್ಣು ಅವತಾರ ಎತ್ತಿದನು ಎಂದು 'ಭಗವದ್ಗೀತೆ'ಯಲ್ಲಿ ಹೇಳಿದೆ ಮೊದಲ ಐದು ಅವತಾರಗಳು ಪೌರಾಣಿಕವಾದವುಗಳು ನಂತರ ಮೂರು ಅವತಾರಗಳು ನಯಕಾ ಅವತಾರಗಳು ಒಂಬತ್ತನೆಯದು ಧರ್ಮ ಸಂಬಂಧವಾದುದು ಕೊನೆಯ ಅವತಾರ ಇನ್ನೂ ಕಾಣಿಸಿಕೊಳ್ಳಬೇಕಾಗಿದೆ. 'ಭಾಗವತ ಪುರಾಣ' ದಲ್ಲಿ ವಿಷ್ಣುವಿನ ಅವತಾರಗಳು ಅಸಂಖ್ಯಾತವಾಗಿವೆ. ಎಂದು ಹೇಳಿ ಅವನ ಇಪ್ಪತ್ತೆರಡು ಅವತಾರಗಳನ್ನು ಉಲ್ಲೇಖಿಸಲಾಗಿದೆ.[೬೨]

ಅರ್ಧಚಂದ್ರಾಕಾರದಲ್ಲಿ ನಿರ್ಮಾಣವಾದ ಪ್ರಭಾವಳಿಯ ಮೇಲೆ ಹತ್ತು ವೃತ್ತಗಳನ್ನು ಮಾಡಿ ಚಿತ್ರಬಿಡಿಸಲಾಗಿದೆ. ಇದರಲ್ಲಿ ಎರಡು ವೃತ್ತಗಳು ಕೆಂಪು ವರ್ಣಹಿನ್ನೆಲೆ ಲೇಪನದ ಮೇಲೆ ಚಿತ್ರರಚಿಸಲಾಗಿದೆ. ಉಳಿದ ವೃತ್ತಗಳು ನೀಲಿ ಹಿನ್ನೆಲೆಯ ಮೇಲೆ ಬಿಡಿಸಲಾಗಿದೆ. ಮೊದಲನೆಯದಾಗಿ ಮತ್ಸ್ಯಾ ಅವತಾರ ಇಲ್ಲಿ ಕೆಳಗಿನ ಭಾಗ ಮೀನಿನಿಂದ ರಚನೆಯಾಗಿದ್ದು ಹಿಂದಿನ ಕೈಗಳಲ್ಲಿ ಚಕ್ರಗಳಿವೆ. ಮುಂದಿನ ಎರಡು ಕೈಯಲ್ಲಿ ಖಡ್ಗ, ಗಧೆ, ಮೀನನ್ನು ಹಸಿರು ವರ್ಣದಿಂದ ಚಿತ್ರಿಸಲಾಗಿದೆ. ಈ ಕೃತಿಯು ಕಿರೀಟ ಹೊಂದಿ ನೀರಿನ ಅಲೆಗಳ ಗೋಚರಮೂಡಿಸುತ್ತದೆ. ಕೂರ್ಮಾ ಅವತಾರದಲ್ಲಿ ದೇಹದ ಕೇಳಭಾಗವು ಆಮೇಯ ದೇಹವನ್ನು ಹೊಂದಿದ್ದು ಕಿರೀಟ ಆಭರಣ ಕಂಡುಬಂದು ಆಮೇಯ ದೇಹವನ್ನು ಹಸಿರು ವರ್ಣ ಉಳಿದ ಭಾಗ ಮಸುಕಾಗಿದೆ. ಮೂರನೆಯ ಅವತಾರ ವರಾಹ ಇದು ಸಹ ಸಂಪೂರ್ಣವಾಗಿ ಮಸುಕಾಗಿದೆ. ನಾಲ್ಕನೆಯದಾಗಿ ನರಸಿಂಹ ಅವತಾರ ಸಾವಿಲ್ಲದ ವರವನ್ನು ಪಡೆದ ಹಿರಣ್ಯಕಶಿಪು ಎಂಬ ರಾಕ್ಷಸನ ಅಟ್ಟಹಾಸವನ್ನು ಧ್ವಂಸಮಾಡುತ್ತಾನೆ. ಇಲ್ಲಿ ವಿಷ್ಣು ಸಿಂಹದ ಮುಖ ಹೊಂದಿದ್ದು ವಿಶಾಲವಾದ ಕಣ್ಣು ,ಉಗ್ರರೂಪ, ಎದ್ದು ತೋರುತ್ತದೆ.

ಐದನೆಯದು ವಾಮನ ಅವತಾರ ಈ ಅವತಾರವು ಬಲಿಚಕ್ರವರ್ತಿಯ ಗರ್ವವನ್ನು ಹರಣಮಾಡುವ ಸಲುವಾಗಿ ಮಹಾವಿಷ್ಣುವು ಒಬ್ಬ ಬ್ರಾಹ್ಮಣ ಬಾಲಕನ ರೂಪದಲ್ಲಿ ಬಂದು ಬಲಿಚಕ್ರವರ್ತಿಗೆ ದಾನವನ್ನು

೬೨. ಡಾ. ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೧ ಪು. ೯೯ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

ಕೇಳುತ್ತಾನೆ. ಕೇವಲ ಮೂರು ಪಾದ ಜಾಗವನ್ನು ಭೀಕ್ಷೆ ನೀಡು ಎಂದು ಕೇಳಿ ಒಂದು ಪಾದವನ್ನು ಭೂಮಿಗೆ ಇನ್ನೊಂದು ಪಾದವನ್ನು ಆಕಾಶಕ್ಕೆ ಇಡುತ್ತಾನೆ. ಈ ಚಿತ್ರದಲ್ಲಿ ಮುಖವು ಮುಗ್ಧ ಬಾಲಕನಂತಿದ್ದು ಒಂದು ಕೈಯಲ್ಲಿ ಮಂಡಲ ಇನ್ನೊಂದು ಕೈಯಲ್ಲಿ ಛತ್ರಿಯನ್ನು ಹಿಡಿದುಕೊಂಡಿದ್ದಾನೆ. ಇಲ್ಲಿ ಛತ್ರಿಯು ಹಳದಿ ವರ್ಣ ಮೈಬಣ್ಣವಾಗಿ ತಿಳಿಗುಲಾಬಿ, ಪಂಚೆಯನ್ನು ಹಳದಿ ಚಿತ್ರದ ಹಿನ್ನೆಲೆ ನೀಲಿ ವರ್ಣದ್ದಾಗಿದೆ. ಆರನೆಯದಾಗಿ ಪರಶುರಾಮನ ಅವತಾರವಾಗಿದೆ. ಜಮದಗ್ನಿ ಮತ್ತು ರೇಣುಕಾದೇವಿಯ ಮಗನಾಗಿ ಜನಿಸಿ ತಂದೆಯ ಆಜ್ಞೆಯಂತೆ ತಾಯಿಯ ಶಿರವನ್ನು ಕಡಿದು ತಂದೆಯ ವರಪ್ರಸಾದದಿಂದ ಮತ್ತೆ ತಾಯಿಯನ್ನು ಮರಳಿ ಪಡೆದಿರುವದಾಗಿದೆ.

ಇಲ್ಲಿ ಹಳದಿ ಪಂಚೆ ಮೇಲೆ ಮತ್ತೊಂದು ಹಸಿರು ಪಂಚೆಯ ಒಂದು ತಿಳಿಗುಲಾಬಿ ಬಣ್ಣದ ವಸ್ತ್ರ ಭುಜಗಳಿಂದ ಮೊಣಕಾಲಿನವರೆಗೂ ಬಿದ್ದಿದೆ ಕೈಯಲ್ಲಿ ಕೊಡಲಿ ಹಿನ್ನೆಲೆ ಮರಗಳು ಹಸಿರು ನೀಲಿ ಆಕಾಶ ಮೂಡಿಬಂದಿವೆ. ಏಳನೆಯದಾಗಿ ರಾಮ ಅವತಾರವಾಗಿದೆ. ಶ್ರೀರಾಮನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಾಣ ಬಿಡುತ್ತಿದ್ದಾನೆ. ಇನ್ನೊಂದು ಚಿತ್ರ ಮಸುಕಾಗಿದೆ. ಶ್ರೀರಾಮನ ಮೈಬಣ್ಣ ಹಸಿರಾಗಿ ಹಳದಿ ಪಂಚೆಯನ್ನು ಧರಿಸಿದ್ದಾನೆ. ಎಂಟನೆಯದಾಗಿ ಕೃಷ್ಣ ಅವತಾರ ಈ ಅವತಾರದಲ್ಲಿಯೂ ಚಿತ್ರಗಳು ಮಸುಕಾಗಿ ಮೂಡಿಬಂದಿವೆ. ಹಿನ್ನೆಲೆಯಲ್ಲಿ ತಿಳಿಗುಲಾಬಿ, ವರ್ಣ ಬಳಸಲಾಗಿದ್ದು ಒಂಭತ್ತನೆಯದಾಗಿ ಬೌದ್ಧವತಾರವಾಗಿದೆ. ಇಲ್ಲಿ ನಗ್ನ ರೂಪದಲ್ಲಿ ಬುದ್ಧನನ್ನು ಚಿತ್ರಿಸಿದ್ದು ಜ್ಞಾನ ಮುದ್ರೆಯ ಕೈಯನ್ನು ಹೊಂದಿದ್ದು ಇನ್ನೊಂದು ಕೈ ಯೋಗ ಮುದ್ರೆಯಲ್ಲಿದೆ. ತಲೆಯ ಕೂದಲು ಗುಂಗುರು ಕಾಣಬರುತ್ತವೆ.

ಹಿನ್ನೆಲೆಯಲ್ಲಿ ಬೃಹದಾಕಾರದ ಮರವಿದ್ದು ಹಳದಿವರ್ಣ ಮತ್ತು ಹಸಿರುವರ್ಣದಲ್ಲಿದೆ. ಹತ್ತನೆಯದು ಕಲ್ಕಿ ಅವತಾರವಾಗಿದೆ. ಇಲ್ಲಿ ಕುದುರೆ ಮೇಲೆ ಬರುವ ವಿಷ್ಣುವಿನ ರೂಪ ಕೈಯಲ್ಲಿ ಖಡ್ಗ, ಕಿರೀಟ, ಪಂಚೆಯು ಹಳದಿ ವರ್ಣದಲ್ಲಿ ಮರಗಳು ನೀಲಿ ಆಕಾಶ ಮೂಡಿಬಂದಿವೆ. ಪ್ರಭಾವಳಿಯ ಮೇಲೆ ಕೀರ್ತಿಮುಖವಿದ್ದು ವಿಶಾಲ ಕಣ್ಣು ಬಿಳಿಯ ವರ್ಣದಿಂದ ಕೋರೆಹಲ್ಲುಗಳು ರಚನೆಗೊಂಡಿವೆ. ನಾಲಿಗೆಯು ಕೆಂಪು ವರ್ಣದಾಗಿ ಮೂಗಿನ ತುದಿಯನ್ನು ಮುಟ್ಟಿದೆ ಕಿವಿಯ ಹತ್ತಿರ ಸುಳುವುಗಳು ಅಕ್ಕಪಕ್ಕದಲ್ಲಿ ರಚನೆಗೊಂಡಿವೆ. ಕೂದಲು ಎಲೆಯಾಕಾರವಾಗಿದ್ದು ಹಳದಿ ಮಿಶ್ರಿತ ಕೆಂಪು, ವರ್ಣಪಡೆದಿವೆ. ಅಲ್ಲಲ್ಲಿ ಹೂಬಳ್ಳಿಯ ನಕ್ಷಾ ವಿನ್ಯಾಸ ರೇಖೆಗಳು, ಸರಪಳಿಆಕಾರ, ಮಧ್ಯದಲ್ಲಿ ಕೆಂಪು ಬಣ್ಣವನ್ನು ಲೇಪಿಸಲಾಗಿದೆ.

**೨೮. ಗ್ರಾಮದೇವತೆ ದ್ಯಾಮವ್ವನ ಪ್ರಭಾವಳಿಗಳು**

ಈ ಪ್ರಭಾವಳಿಯು ಅರ್ಧಚಂದ್ರಾಕಾರದಲ್ಲಿ ಕಂಡು ಬಂದು ಮಧ್ಯದಲ್ಲಿ ವೃತ್ತಗಳನ್ನು ರಚಿಸಿ ವಿಷ್ಣುವಿನ ದಶಾವತಾರಗಳನ್ನು ಚಿತ್ರಿಸಿದ್ದಾರೆ. ಹಾಗೇ ಮತ್ತೆ ಈ ಪ್ರಭಾವಳಿಯಲ್ಲಿ ಕಮಾನು, ಆಕಾರ, ವೃತ್ತಾಕಾರ, ತೇರಿನಾಕಾರ, ಮುಂತಾದವುಗಳಾಗಿವೆ. ಇಲ್ಲಿ ಮುಖ್ಯವಾಗಿ ದ್ಯಾಮವ್ವನ ಪ್ರಭಾವಳಿಗಳು ಕಂಡು ಬಂದು ಇಲ್ಲಿ ರಚಿತವಾದ ಚಿತ್ರಗಳು ವಿಷ್ಣುವಿನ ದಶಾವತಾರಗಳೇ ಆಗಿವೆ. ಇವು ಹೆಚ್ಚಾಗಿ ವೃತ್ತಗಳಲ್ಲೇ ರಚಿಸಿದ್ದು ಕಂಡುಬರುತ್ತದೆ. ಚಿತ್ರಗಳು ಕೆಂಪು ಹಿನ್ನೆಲೆಯಲ್ಲಿ ಮೂಡಿದ್ದು, ಹಳದಿ ದಟ್ಟವರ್ಣವನ್ನು ಹಿನ್ನೆಲೆಯಾಗಿ ಬಳಸಿದ್ದಾರೆ. ಮಧ್ಯದಲ್ಲಿ ದೇವಿಯ ತಲೆ ಭಾಗಬರುವ ಸ್ಥಳವನ್ನು ತ್ರಿಕೋಣ, ತೇರಿನಾಕಾರ, ಬಾಗಿಲು, ಕಮಾನು, ಗೋಪುರ, ವೃತ್ತ ಆಕಾರಗಳು ಕಂಡು ಬಂದಿವೆ. ಕೆಳಭಾಗದಲ್ಲಿ ರಾಮಾಯಣ, ಮಹಾಭಾರತ, ಕೃಷ್ಣಾರ್ಜುನ ಯುದ್ಧದ ಸನ್ನಿವೇಶ, ಸೇವಕಿಯರು, ಲಕ್ಷ್ಮೀ, ಸರಸ್ವತಿ, ಶ್ರೀರಾಮನ ಪಟ್ಟಾಭಿಷೇಕ, ಭಗೀರಥ, ಆಂಜನೇಯ ಮುಂತಾದ ಚಿತ್ರಗಳು ಸಹಿತ ಕೆಂಪು ಹಿನ್ನೆಲೆಯಲ್ಲಿ ಮೂಡಿಬಂದಿವೆ. ಅಲ್ಲಲ್ಲಿ ಹೂಬಳ್ಳಿಯ ಪಟ್ಟಿಕೆಗಳು, ಹೂಗಳು, ಮಧ್ಯದಲ್ಲಿ ಕೀರ್ತಿಮುಖ, ಎಲೆಯಾಕಾರ ಸುಳುವುಗಳು, ಸಿಂಹ, ವಿವಿಧ ವರ್ಣಗಳಲ್ಲಿ ಮೂಡಿವೆ.

ದಶಾವತಾರದ ಕುರಿತು ಸಂಕ್ಷಿಪ್ತವಾಗಿ ಹೇಳುವುದಾದರೆ ಮೊದಲನೆಯ ಅವತಾರವಾಗಿ ಮತ್ಸ್ಯ (ಮೀನು) ನಂತರ ಕೂರ್ಮ (ಆಮೆ) ವರಾಹ (ಹಂದಿ) ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬುದ್ಧ, ಮತ್ತು ಕಲ್ಕಿ (ಕಲಿಯುಗ) ಯಾಗಿದೇ ಈ ದಶಾವತಾರದ ಚಿತ್ರಗಳನ್ನು ದ್ಯಾಮವ್ವನ ಪ್ರಭಾವಳಿಯ ಮೇಲೆ ಬರೆಯಲಾಗುವುದು ಎಂದು ಹೇಳುತ್ತಾರೆ ಇಲ್ಲಿಯ ಕಲಾವಿದರು.













೨೭. ಗ್ರಾಮ ದೇವತೆಯ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರ

### ಗ್ರಾಮದೇವತೆಗಳ ಹಿನ್ನಲೆ

ಗ್ರಾಮದೇವತೆಗಳ ಶಿಲ್ಪಗಳನ್ನು ರಚಿಸುತ್ತಿರುವಾಗ ಶಿಲ್ಪಿಯು ಸ್ನಾನ ಮಾಡಿ ಮಡಿಯಿಂದ ರಚಿಸುತ್ತಿರುವಾಗ ದೇವತೆಯ ಹೆಸರನ್ನು ಜಪಿಸುತ್ತಾ ವಿಗ್ರಹವನ್ನು ಏಕಾಂಗಿಯಾಗಿ ಏಕಾಂತ ಸ್ಥಳದಲ್ಲಿ ಕುಳಿತು ರಚಿಸುತ್ತಿದ್ದರೆಂದೂ ತಿಳಿದು ಬರುತ್ತದೆ. ಆ ದೇವತೆಯ ವಿಗ್ರಹ ಪೂರ್ತಿಗೊಳ್ಳುವವರೆಗೂ ವಿಗ್ರಹದ ಮುಖವನ್ನು ಬಟ್ಟೆಯಿಂದ ಮುಚ್ಚಿಡುತ್ತಿದ್ದರು. ಪೂರ್ತಿಗೊಂಡ ವಿಗ್ರಹವನ್ನು ಗರ್ಭಗುಡಿಯಲ್ಲಿ ಕೂಡಿಸಿ ನಂತರ ಮುಖಕ್ಕೆ ಇದ್ದ ಬಟ್ಟೆಯನ್ನು ಬಿಚ್ಚಿ ಪೂರ್ತಿಗೊಂಡ ಶಿಲ್ಪವನ್ನು ತೋರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಒಂದು ವೇಳೆ ಶಿಲ್ಪಿಯು ಮೈಲಿಗೆಯಾದರೆ ಏಕಾಂತ ಸ್ಥಳದಲ್ಲಿ ಗುಪ್ತವಾಗಿ ರಚಿಸದೇ ಇದ್ದ ವಿಗ್ರಹಗಳು ಎಷ್ಟು ಸುಂದರವಾಗಿದ್ದರು ಪೂಜೆಗೆ ಯೋಗ್ಯವಲ್ಲವೆಂದೂ, ಹಾಗೇ ರಚನೆಗೊಂಡ ವಿಗ್ರಹದಿಂದ ಶಿಲ್ಪಿಗೆ ಇಲ್ಲವೇ ಗ್ರಾಮ ಜನರಿಗೆ ಅಪಾಯವೆಂಬ ನಂಬಿಕೆಗಳೂ ಇದ್ದವೆಂದು ತಿಳಿದುಬರುತ್ತದೆ. ಕಲಘಟಗಿಯ ಕಲಾವಿದರು ಸಹ ದೇವಿಯ ಮೂರ್ತಿಶಿಲ್ಪಗಳ ರಚನೆಗೆ ಪ್ರತ್ಯೇಕವಾದ ಒಂದು ಕೋಣೆಯನ್ನೇ ನಿರ್ಮಿಸಿರುತ್ತಾರೆ. ಇಲ್ಲಿ ದೇವಿಯ ಮೂರ್ತಿಶಿಲ್ಪ ತಯಾರಿಸುವುದನ್ನು ಕಾಣಬಹುದು. ದೇವಾಲಯಗಳಲ್ಲಿ ಮೂಲ (ಶಿಲ್ಪ) ವಿಗ್ರಹಗಳಿಗೆ ಜನರ ಕೆಟ್ಟ ದೃಷ್ಟಿ ತಾಗಬಾರದೆಂದು ಹಲವಾರು ಶಿಲ್ಪಗಳನ್ನು ರಚಿಸುತ್ತಿದ್ದರು ಇವುಗಳಲ್ಲಿ ಪ್ರಾಣಿ, ಪಕ್ಷಿ, ಎಲೆ, ಬಳ್ಳಿ, ಮಿಥುನ ಮುಂತಾದವುಗಳನ್ನು ಕೊರೆಯುತ್ತಿದ್ದರು[೬೩] ಅದರಂತೆಯೆ ಇಲ್ಲಿಯೂ ಸಹ ವಿವಿಧ ವಿನ್ಯಾಸದ ಬಳ್ಳಿಗಳೂ ನಕ್ಷಾವಿನ್ಯಾಸಗಳು, ರೇಖೆಗಳು, ಅಕ್ಕಪಕ್ಕದಲ್ಲಿ ಸಣ್ಣ ಸಣ್ಣ ಸೈನಿಕರು ಅಥವಾ ಸೇವಕಿಯರ ಗೊಂಬೆಗಳನ್ನು ತಯಾರಿಸುವುದು ಕಂಡುಬರುವುದರೊಂದಿಗೆ ದಶಾವತಾರದ ಚಿತ್ರಗಳು ಮೂಡಿಬಂದಿರುತ್ತವೆ.

### ೨೯. ಗ್ರಾಮದೇವತೆ ದ್ಯಾಮವ್ವ ಶಿಲ್ಪ

ಸಪ್ತ ಮಾತೃಕೆಯರಲ್ಲಿ ಒಬ್ಬಳು ಈಕೆಯಲ್ಲೂ ಲೋಕದೇವತೆಯಾಗಿಲ್ಲ ಆದರೆ ಆಕೆ ಊರಿನ ಸುತ್ತಮುತ್ತಲಿನ ಜನಕ್ಕೆ ಮಾತ್ರ ಪ್ರಸಿದ್ಧವಾದಂತೆ ಕಂಡುಬರುತ್ತದೆ.[೬೪] ಇಲ್ಲಿ ದೇವಿಯ ಮೈಬಣ್ಣವು ಕೆಂಪು ಬಳಿದು ಮುಖದಲ್ಲಿ ರೌದ್ರತೆಯಿಂದ ಕೂಡಿದೆ. ಅಗಲವಾದ ಬಟ್ಟಲು ಕಣ್ಣುಗಳು ತೆಳುವಾದ ಕಪ್ಪು ಹುಬ್ಬು ಬಾಗಿವೆ. ತುಂಬಾ ಸೂಕ್ಷ್ಮವಾದ ಹಣೆನಾಮ ನೀಳಾದ ಮೂಗಿಗೆ ನತ್ತು, ಉಬ್ಬಿದ ತುಟಿಗಳು, ಕಿವಿಯೋಲೆ. ಕಿರೀಟ ವಿನ್ಯಾಸಗಳಿಂದ ಕೂಡಿದೆ ಕಿರೀಟದ ಮೇಲ್‌ತುದಿಯಿಂದ ಅಕ್ಕಪಕ್ಕದ ನಾಗರ ಶಿಲ್ಪ ರಚನೆಯಾಗಿದ್ದು ಕಂಡುಬರುತ್ತದೆ. ಹದಿನಾಲ್ಕು ಕೈಗಳನ್ನು ಹೊಂದಿದ ದೇವಿಯಾಗಿದ್ದಾಳೆ. ಹಲವಾರು ಆಯುಧಗಳು ಕಂಡುಬರುತ್ತವೆ. ದೇವಿಯ ವಾಹನ ಸಿಂಹವಾಗಿದ್ದು ಹಳದಿ ಮೈಬಣ್ಣವಾಗಿದೆ. ವೃತ್ತಾಕಾರದ ಕಣ್ಣುಗಳೂ ನೋಡುವದಕ್ಕೆ ಗ್ಲಾಸ್‌ನಂತೆ ಹೊಳೆಯುತ್ತವೆ. ಮೂಗು ಹೊರಚಾಚಿ ಬಾಗಿದ್ದು ಅಲ್ಲದೇ ಕೆಂಪು ಚುಕ್ಕೆ ಮೂಡಿವೆ ಗರಗಸದ ಹಾಗೇ ಸಾಲಾಗಿ ಕಾಣುವ ಬಿಳಿಬಣ್ಣದ ಹಲ್ಲು ಮಧ್ಯ ಚೂಪಾದ ಕೆಂಪುನಾಲಿಗೆ ಹೊರಚಾಚಿದೆ. ಕೇಶವು ಹಣಿಕೆಯಾಗೆ ಹೆಣೆದು ಕಪ್ಪು ಬಣ್ಣದ ರೇಖೆ ಎಳೆಯಲಾಗಿದೆ. ಕಾಲುಗಳಿಗೆ ಕೆಂಪು ಚುಕ್ಕೆ ಕಂಡುಬರುತ್ತವೆ. ದೇವಿಯು ಹಸಿರು ಸೀರೆಯುಟ್ಟಿದ್ದು ಪ್ರತ್ಯೇಕವಾಗಿ ಕಾಣುವ ಕಲ್ಪನೆ ಇದಾಗಿದೆ.

ದೇವಿಯ ಪ್ರಭಾವಳಿಯು ವಿಶೇಷವಾಗಿದ್ದು ಇದು ಕಮಾನು ತರಹ ರಚನೆಯಾಗಿದೆ. ಇಲ್ಲಿ ಮುಖ್ಯವಾಗಿ ವೃತ್ತಗಳನ್ನು ಸೃಷ್ಟಿಸಿ ಮಧ್ಯದಲ್ಲಿ ಮಾನವರ ಅಂದರೆ ಕಲಾವಿದರು ಹೇಳುವ ಹಾಗೆ ಈ ಚಿತ್ರಗಳು ಜನಪದ ಶೈಲಿ ಮಾನವನ ವಿವಿಧ ಭಾವ ಭಂಗಿಗಳನ್ನು ರಚಿಸಿದ್ದೇವೆ ಎನ್ನುತ್ತಾರೆ. ಈ ಶಿಲ್ಪ ಪ್ರಭಾವಳಿಯಲ್ಲಿ ವೈತ್ಯಾಸಗಳು ಕಂಡುಬರುತ್ತವೆ. ಸಮಾನ್ಯವಾಗಿ ದುರ್ಗಮ್ಮನ ಪ್ರಭಾವಳಿಯಲ್ಲಿ ಅಷ್ಟದಿಕ್ಪಾಲಕರು, ದ್ಯಾಮವ್ವನ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರ ಕಂಡುಬರುತ್ತದೆ. ಆದರೆ ಇಲ್ಲಿ ಎರಡಕ್ಕಿಂತ ಭಿನ್ನವಾಗಿ ಜನಪದ ನೃತ್ಯಶಿಲ್ಪಗಳು ಮೂಡಿವೆ.

ಪ್ರಭಾವಳಿಯಲ್ಲಿ ಮುಖ್ಯವಾಗಿ ಕಂಡುಬರುವ ಸುಳುವುಗಳು ಇಲ್ಲಿ ಕಾಷ್ಠದಲ್ಲಿಯೇ ಕೆತ್ತಲಾಗಿದ್ದು, ವೃತ್ತದಲ್ಲಿಯ ವ್ಯಕ್ತಿಚಿತ್ರಗಳು ಸಹ ಉಬ್ಬು ಶಿಲ್ಪವಾಗಿದ್ದು ಹೂಬಳ್ಳಿಯ ವಿನ್ಯಾಸಗಳು, ಗಿಳಿಗಳು, ಉಬ್ಬು ಶಿಲ್ಪಗಳಾಗಿವೆ,

---

೬೩. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೨೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೬೪. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೧೯೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ನಂತರ ಅದರ ಮೇಲೆ ವರ್ಣ ಲೇಪನ ಮಾಡಲಾಗಿದೆ. ಈ ಶಿಲ್ಪದಲ್ಲಿ ಹಲವಾರು ವರ್ಣಗಳು ಬಳಕೆಯಿದ್ದು ಕಂಡುಬರುತ್ತದೆ. ಪ್ರಭಾವಳಿಯ ಕೆತ್ತನೆಯಲ್ಲಿ ಕಲಾವಿದನು ಜಾಣ್ಮೆ ಮೆರೆದಿದ್ದಾನೆ. ಈ ಗ್ರಾಮದೇವಿಯು ಬಮ್ಮಿಗಟ್ಟಿಯ ದ್ಯಾಮವ್ವನ ದೇವಸ್ಥಾನದಲ್ಲಿದೆ.

### ೩೦. ಗ್ರಾಮದೇವತೆ ದ್ಯಾಮವ್ವ ಶಿಲ್ಪ

ಸಪ್ತ ಮಾತೃಕೆಯರಲ್ಲಿ ಒಬ್ಬಳು ದ್ಯಾಮವ್ವ ಈಕೆಯಲ್ಲೂ ಲೋಕದೇವತೆಯಾಗಿಲ್ಲ ಆದರೆ ಆಕೆ ಆ ಊರಿನ ಸುತ್ತಮುತ್ತಲಿನ ಜನಕ್ಕೆ ಮಾತ್ರ ಪ್ರಸಿದ್ಧಿವಾದಂತೆ ಕಂಡುಬರುತ್ತದೆ. ಈ ದೇವಿಯು ಎಂಟು ಕೈಗಳನ್ನು ಹೊಂದಿದ್ದು ಮೈಬಣ್ಣವಾಗಿ ಕೆಂಪನ್ನು ಬಳಸಲಾಗಿದೆ. ಅಗಲವಾದ ಕಣ್ಣು ಬಾಗಿದ ಕಪ್ಪು ಹುಬ್ಬು, ಚೂಪಾದ ಮೂಗು, ಮೂಗುತಿ, ಉಬ್ಬಿದ ತುಟಿ ಹಣೇಯ ನಾಮವಾಗಿ ಹಳದಿ ವರ್ಣದ ರೇಖೆ ಆಗಲವಾದ ಕಿವಿಯೋಲೆ ಗೋಪುರ ಆಕಾರದ ಬೆಳ್ಳಿಯ ಬಣ್ಣದ ಕಿರೀಟ ಹಳದಿ ವರ್ಣದ ಹಾವು ಕಿರೀಟದ ಮಧ್ಯ, ಕಿರೀಟದ ತುದಿಯಲ್ಲಿ ಕೀರ್ತಿಮುಖ ಮೇಲಿಂದ ಕಿವಿಯವರೆಗೆ ಇಳಿಬಿದ್ದ ಹಳದಿ ವರ್ಣದ ಹಾವುಗಳು ಕಂಡುಬರುತ್ತದೆ. ದೇವಿಯ ತಲೆ ಹಿಂಭಾಗ ಕಪ್ಪು ವರ್ಣದ ವೃತ್ತಾಕಾರ ದೇವಿಯು ಕಪ್ಪು ಮಿಶ್ರಿತ ಹಸಿರು ವರ್ಣದ ಸೀರೆಯುಟ್ಟು ನಿಂತಿದ್ದಾಳೆ. ಕೈಯಲ್ಲಿ ಆಯುಧ ಧರಿಸಿದ್ದಾಳೆ, ದೇವಿಯ ಉಗ್ರರೂಪ ತೋರಿಸುವುದಕ್ಕೆ ಈ ಹಸಿರು ಬಣ್ಣದ ಸೀರೆ ತೊಡಿಸಿರಬಹುದು.

ದೇವಿಯ ಪ್ರಭಾವಳಿಯಲ್ಲಿ ವೃತ್ತಗಳನ್ನು ರಚಿಸಿ ಅದರಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳು ಮೂಡಿವೆ. ಎಲ್ಲಾ ವೃತ್ತಗಳ ಹಿನ್ನೆಲೆಯೂ ಕೆಂಪು ವರ್ಣದಲ್ಲಿವೆ. ಈ ದಶಾವತಾರದ ಚಿತ್ರದಲ್ಲಿ ಮೊದಲಿಗೆ ಮತ್ಸ್ಯ (ಮೀನು) ಅವತಾರ ಇಲ್ಲಿ ಕೆಳಗಿನ ಭಾಗ ಮೀನಿನಿಂದ ರಚನೆಯಾಗಿದ್ದು ಹಿಂದಿನ ಕೈಗಳಲ್ಲಿ ಚಕ್ರಗಳಿವೆ. ಮುಂದಿನ ಎರಡು ಕೈಗಳಲ್ಲಿ ಖಡ್ಗ, ಗಧೆ, ಮೀನನ್ನು ಹಸಿರು ವರ್ಣದಿಂದ ಚಿತ್ರಿಸಲಾಗಿದೆ. ಅಲ್ಲದೆ ಕಿರೀಟ ಹೊಂದಿ ನೀರಿನ ಅಲೆಗಳ ಭ್ರಮೆ ಮೂಡಿಸುತ್ತದೆ. ಎರಡನೆಯ ಅವತಾರದಲ್ಲಿ ಕೂರ್ಮವಾಗಿ ದೇಹದ ಕೆಳಭಾಗವು ಆಮೆಯ ದೇಹವನ್ನು ಹೊಂದಿದ್ದು ಕಿರೀಟ ಆಭರಣ ಆಯುಧಗಳು ಕಂಡುಬರುತ್ತದೆ. ಆಮೆಯ ದೇಹವನ್ನು ಹಸಿರು ವರ್ಣಬಳಸಿದ್ದು ಕಾಣುತ್ತದೆ. ಮೂರನೆಯ ಅವತಾರ ವರಾಹ ಇದು ಸ್ಪಷ್ಟವಾಗಿ ಕಾಣಲಾರದು ನಾಲ್ಕನೆಯ ಅವತಾರ ನರಸಿಂಹನಾಗಿ ಸಾವಿಲ್ಲದ ವರವನು ಪಡೆದ ಹಿರಣ್ಯಕಶಪು ಎಂಬ ರಾಕ್ಷಸನ ಅಟ್ಟಹಾಸವನ್ನು ನಾಶಮಾಡುತ್ತಾನೆ. ಇಲ್ಲಿ ವಿಷ್ಣು ಸಿಂಹಮುಖವು ಉಗ್ರರೂಪ ಹೊಂದಿದೆ ಐದನೆಯದಾಗಿ ವಾಮನ ಅವತಾರ ಬಲಿಚಕ್ರವರ್ತಿಯ ಗರ್ವವನ್ನು ಹರಣಮಾಡುವ ಸಲುವಾಗಿ ವಿಷ್ಣು ಒಬ್ಬ ಬ್ರಾಹ್ಮಣ ಬಾಲಕನ ರೂಪದಲ್ಲಿ ಬಂದು ಬಲಿ ಚಕ್ರವರ್ತಿಗೆ ಧಾನವನ್ನು ಕೇಳುತ್ತಾನೆ. ಕೇವಲ ಮೂರು ಪಾದ ಜಾಗವನ್ನು ಭೀಕ್ಷೆ ನೀಡು ಎಂದು ಒಂದು ಪಾದ ಭೂಮಿಗೆ ಇನ್ನೊಂದು ಪಾದ ಆಕಾಶಕ್ಕೆ ಇಡುತ್ತಾನೆ.

ಈ ಚಿತ್ರದಲ್ಲಿ ಮುಖವು ಮುಗ್ಧ ಬಾಲಕನಂತೆ ಇದ್ದು ಕೈಯಲ್ಲಿ ಮಂಡಲ, ಇನ್ನೊಂದು ಕೈಯಲ್ಲಿ ಛತ್ರಿ ಇದೆ. ಮೈಬಣ್ಣ ಗೋದಿಗೆಂಪು, ಹಳದಿ ಛತ್ರಿ, ನೀಲಿ ಪಂಚೆ ಕಂಡುಬರುತ್ತದೆ. ಆರನೆಯ ಅವತಾರವಾಗಿ ಪರಶುರಾಮ ಜಮದಗ್ನಿ ಮತ್ತು ರೇಣುಕಾದೇವಿಯ ಮಗನಾಗಿ ಜನಿಸಿ ತಂದೆಯ ಆಜ್ಞೆಯಂತೆ ತಾಯಿಯ ಶಿರವನ್ನು ಕಡಿದು ತಂದೆಯ ವರ ಪ್ರಸಾದಿಂದ ಮತ್ತೆ ತಾಯಿಯನ್ನು ಪಡೆದುದಾಗಿದೆ. ಮೈಬಣ್ಣ ಗೋದಿಗೆಂಪು ಹಸಿರು ಪಂಚೆ ಧರಿಸಿದ್ದಾನೆ. ಏಳನೆಯ ಅವತಾರದಲ್ಲಿ ಶ್ರೀರಾಮನಾಗಿ ಇಲ್ಲಿ ಶ್ರೀರಾಮನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಾಣ ಬಿಡುತ್ತಿದ್ದಾನೆ. ಎದುರು ನಿಂತಿರುವ ವ್ಯಕ್ತಿಯ ಪಂಚೆಯು ಹಳದಿ ವರ್ಣದ್ದಾಗಿದೆ.

ಎಂಟನೆಯದಾಗಿ ಕೃಷ್ಣಾ ಅವತಾರ ಇಲ್ಲಿಯೂ ಚಿತ್ರವು ಸ್ಪಷ್ಟವಾಗಿ ಕಾಣದೆ ಹೋಗಿದೆ. ಒಂಭತ್ತನೆಯ ಅವತಾರ ಬೌದ್ಧ ಅವತಾರವಾಗಿದೆ. ಇಲ್ಲಿ ನಗ್ನ ರೂಪದಲ್ಲಿ ಬುದ್ಧನು ಮೂಡಿಬಂದಿದ್ದು ಧ್ಯಾನ ಮಗ್ನನಾದ ಬುದ್ಧನ ಮುಖವು ಲೋಕ ಕಲ್ಯಾಣದ ಕುರಿತಂತೆ ಇರುವುದು ಕಂಡುಬರುತ್ತದೆ. ಗುಂಗುರು ಕೂದಲು ಬೃಹತ್ತಾದ ಗಿಡ ಸಣ್ಣ ಬೆಟ್ಟಗಳು ಕಪ್ಪು ವರ್ಣದಲ್ಲಿ ಮೂಡಿವೆ. ಹತ್ತನೆಯ ಅವತಾರ ಕಲ್ಕಿಯಾಗಿದೆ. ಇಲ್ಲಿ ಕುದುರೆ ಮೇಲೆ ಇರುವ ಕಲ್ಪನೆ ಮಾತ್ರ ಕಾಣಿಸುತ್ತದೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆ ಖಾಲಿಜಾಗವನ್ನು ಹಳದಿ ವರ್ಣದಿಂದ

ತುಂಬಲಾಗಿದೆ. ನೀಲಿ ವರ್ಣದ ಮೇಲೆ ಬಿಳಿವರ್ಣದ ಹೂಗಳು ಮೂಡಿವೆ. ಪ್ರಭಾವಳಿಯ ಕೊನೆಯಲ್ಲಿ ಹಸಿರು ಬಣ್ಣದ ಎಲೆಯಕಾರ ಮಾಡಿ ಕೆಂಪು, ಹಳದಿ, ಮಿಶ್ರಿತ ಮೊಗ್ಗು ಕಂಡುಬರುತ್ತದೆ. ವಕ್ರವಾಗಿ ಚಲಿಸಿದ ವಿವಿಧ ವರ್ಣಗಳ ರೇಖೆಗಳು ಕಾಣುತ್ತದೆ. ಪ್ರಭಾವಳಿಯ ಕೆಳಭಾಗದಲ್ಲಿ ಲಕ್ಷ್ಮೀ, ಸರಸ್ವತಿ, ದ್ವಾರಪಾಲಕರ ಚಿತ್ರಗಳಿವೆ. ಇಲ್ಲಿ ಲಕ್ಷ್ಮೀಯು ನಾಲ್ಕು ಕೈಯನ್ನು ಹೊಂದಿದ್ದು ಬಿಳಿ ಕುಪ್ಪಸ, ನೀಲಿಸೀರೆ ಕಿರೀಟಧಾರಿಯಾಗಿ ಸುಂದರವಾದ ಅಲಂಕಾರದಿಂದ ಕೂಡಿದ ಪೀಠದ ಮೇಲೆ ನಿಂತು ಅಭಯ ಹಸ್ತವಾಗಿದ್ದಾಳೆ. ಬೂದು ವರ್ಣದ ಆನೆಗಳು ಕಂಡುಬಂದಿವೆ. ಸರಸ್ವತಿಯು ನೀಲಿ ಸೀರೆಯುಟ್ಟು ನಾಲ್ಕು ಕೈಗಳನ್ನು ಹೊಂದಿದ್ದಾಳೆ. ಒಂದು ಕಾಲನ್ನು ಡೊಂಕಿಸಿ ನಿಂತಿರುವ ಭಂಗಿ ಇದೆ. ಹಿನ್ನೆಲೆಯಲ್ಲಿ ಹಸಿರು ವರ್ಣದಿಂದ ಕೂಡಿದ ನವಿಲು, ಮತ್ತು ಸರಸ್ವತಿಯು ಪೀಠದ ಮೇಲೆ ನಿಂತಿದ್ದಾರೆ. ದ್ವಾರಪಾಲಕರು ನಾಲ್ಕು ಕೈಗಳನ್ನು ಹೊಂದಿದ್ದು ಆಯುಧಗಳನ್ನು ಹಿಡಿದಿದ್ದಾರೆ. ಮೈಬಣ್ಣವಾಗಿ ಗೋದಿಗೆಂಪು ಕಿರೀಟಧಾರಿಯಾಗಿ, ಕೆಂಪು, ಪಂಚೆ, ಭುಜದಿಂದ ಪೀಠದವರೆಗೆ ಗಿಳಿಹಸಿರು ವರ್ಣದ ಬಟ್ಟೆಯನ್ನು ಇಳಿಬಿಡಲಾಗಿದೆ. ಈ ನಾಲ್ಕು ಚಿತ್ರಗಳು ಪೀಠದ ಮೇಲೆ ನಿಂತಿವೆ. ಇಲ್ಲಿಯೂ ಹಿನ್ನೆಲೆ ಲೇಪನ ಕೆಂಪು.ವರ್ಣವಾಗಿದೆ. ಕಂಬಗಳು, ರೇಖೆಗಳು, ಚುಕ್ಕೆಗಳು, ಹೂಬಳ್ಳಿ ಕಾಣುತ್ತವೆ. ಅಲ್ಲದೆ ಈ ಶಿಲ್ಪವು ಧಾರವಾಡ ಜಿಲ್ಲೆಯ ಯಾದವಾಡ ಗ್ರಾಮದಲ್ಲಿದೆ.

### ೩.೧. ಗ್ರಾಮದೇವತೆ ದ್ಯಾಮವ್ವ ಶಿಲ್ಪ

ಕರ್ನಾಟಕದ ಪ್ರತಿಯೊಂದು ಗ್ರಾಮಗಳಲ್ಲಿ ಜನಪದರ ದೇವತೆಯಾಗಿರುವ ದ್ಯಾಮವ್ವನ ಶಿಲ್ಪಗಳು ತುಂಬಾ ಆಕರ್ಷಕವಾಗಿರುತ್ತವೆ. ಈ ದ್ಯಾಮವ್ವ ಶಿಲ್ಪ ಉಗ್ರ ಸ್ವರೂಪವನ್ನು ಹೊಂದಿದ್ದು ಸಿಂಹ ಇಲ್ಲವೆ ಹುಲಿಯ ಮೇಲೆ ಕುಳಿತ ಭಂಗಿಯಲ್ಲಿದೆ. ಉಗ್ರಮುಖಭಾವ ಅಗಲವಾದ ಕಣ್ಣು, ಹತ್ತು ಕೈಗಳನ್ನು ಹೊಂದಿದ್ದಾಳೆ ದೇವಿಯು ಕೆಂಪು ಮೈಬಣ್ಣ ನೀಳವಾದ ಮೂಗು ಹಾಗೂ ಮೂಗುತಿ ಧರಿಸಿದ್ದಾಳೆ. ಬಂಗಾರ ಹೊಂದಿದ ದೇವಿಯು ಇಲ್ಲಿ ವಿಶೇಷವಾಗಿ ದೇವಿಯ ಹಲ್ಲುಗಳು ಸ್ಪಷ್ಟವಾಗಿ ಬಿಳಿವರ್ಣದಿಂದ ಕಂಡುಬಂದಿವೆ. ಕೋರಲು, ಕಿವಿ, ಕೈಗಳಲ್ಲಿ ಆಭರಣಗಳು ಇವೆ. ತಲೆಯ ಮೇಲೆ ಹೂಬಳ್ಳಿಗಳಿಂದ ಕೂಡಿದ ಕಿರೀಟ ಹಾಗೆ ಅಕ್ಕ ಪಕ್ಕದಲ್ಲಿ ನಾಗತ ಹಾವು ಕೀರಿಟದ ಮೇಲುತುದಿಯಲ್ಲಿಯೂ ಇದೆ. ಇದು ಬಂಗಾರ ವರ್ಣದಲ್ಲಿ ರಚಿಸಲಾಗಿದೆ. ದೇವಿಯ ಹತ್ತು ಕೈಗಳಲ್ಲಿ ವಿವಿಧ ಆಯುಧಗಳಿಂದ ಈ ಶಿಲ್ಪ ಆಕರ್ಷಕವಾಗಿರುತ್ತದೆ. ಸಾಮಾನ್ಯವಾಗಿ ಈ ಶಿಲ್ಪಗಳು ಮನುಷ್ಯಾಕೃತಿ ಇಲ್ಲವೇ ಹೆಚ್ಚು ಕಡಿಮೆ ಅಳತೆಯಲ್ಲಿ ನಿರ್ಮಾಣವಾಗಿರುತ್ತವೆ. ಈ ಶಿಲ್ಪಗಳ ವಾಹನ ಹುಲಿ, ಸಿಂಹ ಮುಂತಾದ ಶಿಲ್ಪಗಳಾಗಿವೆ. ಈ ಶಿಲ್ಪದಲ್ಲಿ ದೇವಿಯ ಸಿಂಹದ ಮೇಲೆ ಕುಳಿತ್ತಿದ್ದಾಳೆ. ಸಿಂಹದ ಮುಖವು ಭಯವನ್ನುಂಟು ಮಾಡುತ್ತದೆ. ಬಿಳಿ ವರ್ಣದಲ್ಲಿ ಮೂಡಿಬಂದ ಕೋರೆ ಹಲ್ಲುಗಳು ಸಿಂಹದ ನಾಲಿಗೆ ಮೂಗಿನ ತುದಿಯನ್ನು ತಲುಪಿದೆ. ಎರಡು ಕಾಲು ಮೇಲಕ್ಕೆ ಎತ್ತಿ ಎರಡು ಕಾಲುಗಳ ಮಧ್ಯ ಸೈನಿಕನು ಕೈಯಲ್ಲಿ ಆಯುಧ ಹಿಡಿದು ಕುಳಿತ್ತಿದ್ದಾನೆ. ದೇವಿ ಶಿಲ್ಪಕ್ಕೆ ನೀಲಿ ವರ್ಣದ ಸೀರೆಯನ್ನು ಉಡಿಸಲಾಗಿದೆ. ಸಿಂಹದ ಕೂದಲು ಸೂಕ್ಷ್ಮವಾದ ರೇಖೆಗಳಿಂದ ರಚಿಸಲಾಗಿದೆ. ಕಾಲು ಕೆಳಗೆ ಬಿಳಿವರ್ಣದ ಪಟ್ಟಿಕೆಯನ್ನು ಎಳೆಯಲಾಗಿದೆ. ಉಗುರುಗಳನ್ನು ಕ್ರೂರತೆ ಕಾಣುವ ಹಾಗೆ ಕೆಂಪು ವರ್ಣದಿಂದ ತೋರಿಸಲಾಗಿದೆ. ದೇವಿಯ ಹಿನ್ನೆಲೆಯಾಗಿ ಪ್ರಭಾವಳಿಯು ಬಳಸಿಕೊಂಡು ಇದು ಚಂದ್ರಾಕಾರವಾಗಿದ್ದು ಇಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳು ಮೂಡಿವೆ. ಇದಕ್ಕಾಗಿ ಹತ್ತು ವೃತ್ತಗಳನ್ನು ರಚಿಸಿಕೊಂಡು ಅವತಾರಗಳನ್ನು ಬಿಡಿಸಲಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಹಳದಿ ವರ್ಣ ಲೇಪಿಸಿ ಎಲೆ ಹೂಗಳನ್ನು ಬರೆಯಲಾಗಿದೆ. ಮಧ್ಯದಲ್ಲಿ ದೇವಿಯು ಎದ್ದು ಬರುವಹಾಗೆ ಕೆಂಪು ವರ್ಣವನ್ನು ಬಳಸಿದ್ದಾರೆ. ಪ್ರಭಾವಳಿಯ ಹೊರ ಅಂಚಿನಲ್ಲಿ ಹಳದಿ ಮಿಶ್ರಿತ ಬಿಳಿವರ್ಣದ ಹೂಗಳು ಸರಪಳಿಹಾಗೆ ಹೆಣೆಯಲಾಗಿದೆ. ಪ್ರಭಾವಳಿಯು ಕೀರ್ತಿಮುಖ ಹೊಂದಿದ್ದು ಕಿವಿಯ ಎರಡು ಪಕ್ಕದಲ್ಲಿ ಶಂಖದ ಹಾಗೆ ಸುಳುವುಗಳನ್ನು ಬಿಡಿಸಿದ್ದಾರೆ. ಬಿಳಿ ವರ್ಣದ ಕೋರೆ ಹಲ್ಲು ಇರುವ ಇಲ್ಲಿಯೂ ಕೀರ್ತಿಯ ನಾಲಿಗೆ ಮೂಗಿನ ತುದಿಯನ್ನು ಮುಟ್ಟಿದೆ. ಕೂದಲುಗಳು ಹಳದಿ ವರ್ಣದಿಂದ ರಚಿತವಾಗಿವೆ. ಇವು ಎಲೆಯ ಆಕಾದಲ್ಲಿ ಕಂಡುಬಂದಿವೆ.

ದ್ಯಾಮವ್ವನ ವಾಹನ ಶಿಲ್ಪಗಳು ನಿಂತ ಮಲಗಿದ ಮತ್ತು ಕಾಲುಗಳನ್ನು ಮೇಲಕ್ಕೆತ್ತಿದ ಭಂಗಿಗಳಲ್ಲವೆ. ಇವುಗಳನ್ನು ಸಾಮಾನ್ಯವಾಗಿ ಹಳದಿ, ಕೆಂಪು, ನೀಲಿ, ಕಪ್ಪು ಬಣ್ಣಗಳನ್ನು ಲೇಪಿಸಿ ಅಲಂಕರಿಸಲಾಗಿದೆ. ಹೆಚ್ಚಾಗಿ



೨೮.



೨೯.



೩೦.



೩೧.

ದ್ಯಾಮವ್ವ ಮೂರ್ತಿಗಳು

ವಾಹನ ಶಿಲ್ಪಗಳಿಗೆ ಹಳದಿಯನ್ನು ಮೈಬಣ್ಣವಾಗಿ ಬಳಿಯಲಾಗಿದೆ. ಮತ್ತು ಕಪ್ಪು ಮೀಸೆ ಬರೆಯಲಾಗಿದೆ. ಈ ಎಲ್ಲ ಶಿಲ್ಪಗಳನ್ನು ಉದ್ದಗಲ್ಲಕ್ಕೆ ಸಂಬಂಧಿಸಿದ ಅಳತೆಗಳು ಇರುತ್ತವೆ. ಆದರೆ ಯಾವುದೆ ರೀತಿಯ ಶಾರೀರಿಕ ರಚನೆಗಳನ್ನು ಪ್ರಮಾಣಬದ್ಧವಾಗಿ ರಚಿಸಿರುವದಿಲ್ಲ ಈ ದ್ಯಾಮವ್ವನ ಶಿಲ್ಪಗಳಿಗೆ ಇಷ್ಟೇ ಕೈಗಳಿರಬೇಕೆಂಬ ನಿಯಮವಿಲ್ಲ ಸಾಮಾನ್ಯವಾಗಿ ನಾಲ್ಕರಿಂದ ಹತ್ತು ಕೈಗಳನ್ನು ಹೊಂದಿರುವ ಶಿಲ್ಪಗಳು ಕಂಡುಬರುತ್ತವೆ. ದ್ಯಾಮವ್ವನ ಕೈಯಲ್ಲಿ ಕ್ರಮವಾಗಿ ತ್ರಿಶೂಲ, ಡಮರು, ಪದ್ಮ, ಖಡ್ಗ, ಬಟ್ಟಲು, ಭರ್ಚಿ, ಶಂಕು, ಚಕ್ರಗಳಿದ್ದರೆ ಪ್ರಭಾವಳಿಯ ಕೆಳಭಾಗ ನಾಲ್ಕು ಭಾಗವಾಗಿ ವಿಂಗಡಿಸಿಕೊಂಡು ಚಿತ್ರ ಬರೆಯಲಾಗಿದೆ. ಇಲ್ಲಿ ರಾಮಾಯಣ, ಮಹಾಭಾರತ, ಅಲ್ಲದೆ ಸೇವಕಿ, ಪರಮೇಶ್ವರ, ಭಗೀರಥ, ಕುರುಕ್ಷೇತ್ರ, ಭೀಮಾರ್ಜುನರ ಚಿತ್ರಗಳು ನೈಜಶೈಲಿಯಲ್ಲಿ ಮೂಡಿಬಂದಿವೆ. ಈ ಗ್ರಾಮದೇವತೆಯ ದ್ಯಾಮವ್ವ ಶಿಲ್ಪವು ಕಲಘಟಗಿಯ ಗ್ರಾಮದಲ್ಲಿದೆ.

### ೩೨. ಗ್ರಾಮದೇವತೆ ದ್ಯಾಮವ್ವ ಶಿಲ್ಪ

ವಿಶೇಷವಾಗಿ ಈ ದೇವಿಯ ಮೈಬಣ್ಣ ಮನುಷ್ಯರಂತೆ ಇದ್ದು ಮುಖದಲ್ಲಿಯ ಭಾವನೆ ಮಾತ್ರ ರೌದ್ರಾವತಾರವಾಗಿದೆ. ಹನ್ನೆರಡು ಕೈಗಳನ್ನು ಹೊಂದಿದ ದೇವತೆ ಆಯುಧಗಳನ್ನು ಹಿಡಿದು ದುಷ್ಟಸಂಹಾರದ ಸಿದ್ಧತೆಯಲ್ಲಿ ನಿಂತಿದ್ದಾಳೆ. ಕಣ್ಣಿನಲ್ಲಿ ಕ್ರೂರಭಾವನೆ ಮೂಡಿದ್ದು ಕಂಡುಬರುತ್ತದೆ. ತಿಳಿಗುಲಾಬಿ, ತುಟಿ, ಮೂಗುತಿ ಕೆಂಪು ಹಣೆನಾಮ ಕಿರೀಟಧಾರಿದೇವಿ ನೀಲಿದಡಿಯ ಹಸಿರು ಸೀರೆಯುಟ್ಟು ವಾಹನದೊಂದಿಗೆ ಹೊರಡುವ ಲಕ್ಷಣಗಳು ಕಾಣಬರುತ್ತವೆ. ಇಲ್ಲಿ ಸಿಂಹವು ಬಾಯ್ತೆರೆದು ಕೊಂಡಿದ್ದು ಗರಗಸದ ಹಾಗೆ ಹೊಂದಿಸಿದ ಬಿಳಿವರ್ಣದ ಹಲ್ಲುಗಳು ಚೂಪಾದನಾಲಿಗೆ ಮೂಗು ತುದಿಯವರೆಗೂ ಹೋಗಿದೆ. ಮೂಗಿನ ಹೊಳ್ಳಿ ಕೆಂಪಾಗಿದ್ದು, ಕಣ್ಣುಗಳಲ್ಲಿ ಬಿಳಿ, ಕಪ್ಪು, ಹಳದಿ, ಬಳಸಿ ಉಬ್ಬು ತಗ್ಗು ಕಾಣುವ ಹಾಗೆ ಕಪ್ಪು ಮಿಶ್ರಿತ ಕೆಂಪು ಬಳಿದು ಕಿವಿಮಾತ್ರ ತಿಳಿಗುಲಾಬಿಯಿಂದ ಕೂಡಿವೆ. ಕೊರಳಲ್ಲಿ ಕೇಶಗಳು ಇಳಿಬಿದ್ದಿರುವುದು ಅಲ್ಲದೆ ಕಾಲೂಗುರು ಮಾತ್ರ ಬಿಳಿ ವರ್ಣದಿಂದ ಕೂಡಿದೆ.

ದೇವಿಯನ್ನು ದೊಡ್ಡವಳೆಂದು ತೋರಿಸುದಕ್ಕೆ ಕಲಾವಿದ ಕೆಳಭಾಗದಲ್ಲಿ ಚಿಕ್ಕ ಚಿಕ್ಕ ಗೊಂಬೆ, ಗಣೇಶನ ಮುಖಶಿಲ್ಪಗಳನ್ನು ಇರಿಸಿದ್ದಾನೆ. ಪ್ರಭಾಳಿಯಲ್ಲಿ ವಿಷ್ಣುವಿನ ದಶಾವತಾರ ಮೂಡಿದು ಕಂಡುಬರುತ್ತದೆ. ಇಲ್ಲಿಯೂ ಮೊದಲನೆಯದಾಗಿ ಮತ್ಸ್ಯ (ಮೀನು) ಕೂರ್ಮ (ಆಮೆ) ವರಾಹ(ಹಂದಿ) ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬುದ್ಧ, ಮತ್ತು ಕಲ್ಕಿ (ಕಲಿಯುಗ) ಯಾಗಿದೆ. ಇವು ವೃತ್ತಗಳಲ್ಲಿ ಕಂಡುಬಂದಿದ್ದು ಕೆಳಭಾಗದಲ್ಲಿ ಚಿತ್ರಗಳು ಅಸ್ಪಷ್ಟವಾಗಿ ಮೂಡಿವೆ. ಅಲ್ಲಲ್ಲಿ ಹೂಬಳ್ಳಿಯ ನಕ್ಷಾ ವಿನ್ಯಾಸಗಳು ಕಂಡುಬರುತ್ತವೆ. ಪ್ರಭಾವಳಿಯ ಮಧ್ಯದಲ್ಲಿ ಕೀರ್ತಿಮುಖವು ರಚನೆಯಾಗಿದೆ. ಈ ದೇವಿಯು ಶಿಲ್ಪವು ಹಳ್ಳಿಯಾಳ ತಾಲೂಕು ಪಾಳಾದಲ್ಲಿದೆ.

### ೩೩. ಗ್ರಾಮದೇವತೆಯ ದ್ಯಾಮವ್ವ ಶಿಲ್ಪ

ಈ ದೇವತೆಯು ಎಲ್ಲಿಯೂ ಲೋಕದೇವತೆಯಾಗಿಲ್ಲವಾದರು ಆಯಾ ಪ್ರದೇಶದ ಜನರಿಗೆ ಮಾತ್ರ ದೇವತೆಯಾಗಿದ್ದಾಳೆ. ಇಲ್ಲಿ ದೇವಿಯ ಮುಖಬಣ್ಣ ದಟ್ಟ ಹಸಿರು ಬಳಸಿದ್ದು ಕಣ್ಣುಗಳಲ್ಲಿ ರುದ್ರತೆಯ ಭಾವನೆ ತೋರ್ಪಡಿಸುತ್ತದೆ. ಹಣೆಯಲ್ಲಿ ರಕ್ತ ವರ್ಣದ ಅಡ್ಡ ಪಟ್ಟಿ, ನೀಳಾದ ಮೂಗು, ಮೂಗುತಿ, ಕೆಂಪು ತುಟಿಗಳು, ರಚನೆಯಾಗಿವೆ. ಬಂಗಾರ ವರ್ಣ ಕಿರೀಟ ಧರಿಸಿದ ದೇವಿಯ ಎರಡೆ ಕೈಗಳು ಕಂಡುಬಂದು. ಕೇಸರಿ ಬಣ್ಣದ ಸೀರೆಯು ದೇವಿಯ ಕಾಲುಕೆಳವರಿಗೆ ಇಳಿಬಿದಿದ್ದೆ ಕಾಲ್ಬೂದಿಬೆರಳುಗಳಲ್ಲಿ ಉಗುರುಗಳಿಗೆ ಬಿಳಿವರ್ಣ ಬಳಿದು ಕಂಡುಬರುತ್ತದೆ. ದೇವಿಯ ವಾಹನವಾದ ಸಿಂಹವು ದೇವಿಯನ್ನು ಹೊತ್ತು ಮುಂದಕ್ಕೆ ಬರುವಹಾಗೆ ಒಂದು ಕಾಲು ಸ್ವಲ್ಪ ಮುಂದೆ ಇಟ್ಟಿರುವುದು ಸೂಕ್ಷ್ಮವಾಗಿ ಕಂಡುಬಂದಿದೆ. ಇಲ್ಲಿ ಸಿಂಹದ ಕಣ್ಣುಗಳಿಗೆ ಬಿಳಿಬಣ್ಣದ ವೃತ್ತ, ಬಿಳಿಕೋರೆ ಹಲ್ಲುಗಳು ಚಿತ್ರಿಸಲಾಗಿದೆ. ಕೇಶಗಳು ಕರಿದಾಗಿದ್ದು ಕಿವಿ ಮತ್ತು ಕಾಲೂಗುರು ಬಿಳಿವರ್ಣದಲ್ಲಿ ಮೂಡಿವೆ. ಇಲ್ಲಿ ದೇವಿಯ ಹಿಂದೆ ಪ್ರಭಾವಳಿಯಲ್ಲಿ ರಚಿತವಾದ ಚಿತ್ರಗಳು ವಿಷ್ಣುವಿನ ದಶಾವತಾರದ ಚಿತ್ರಗಳೇ ಆಗಿವೆ. ಆದರೆ ಭಿನ್ನವಾಗಿ ಅಂದರೆ ಭಾವಚಿತ್ರದ ಹಾಗೇ ಚಿತ್ರಿಸಿದ್ದು ವಿಶೇಷವಾಗಿದೆ. ದಶಾವತಾರದ ಬಗ್ಗೆ ಹಿಂದಿನ ಚಿತ್ರಗಳಲ್ಲಿ ಸಂಪೂರ್ಣವಾಗಿ ವಿವರಿಸಿದೆ. ಮತ್ತೆ ಹೇಳುವುದು ಸರಿಯಲ್ಲವೆಂದು ತಿಳಿದು ಆದರೂ



೩೨. ದ್ಯಾಮವ್ವ ಮೂರ್ತಿ



೩೩. ದ್ಯಾಮವ್ವ ಮೂರ್ತಿ



೩೪. ಗ್ರಾಮ ದೇವತೆ ದುರ್ಗಮ್ಮ



೩೫. ಗ್ರಾಮ ದೇವತೆ ದುರ್ಗಮ್ಮ

ಅವತಾರದಲ್ಲಿ ಮೊದಲನೇಯದಾಗಿ ಮತ್ಸ್ಯ (ಮೀನು) ಅವತಾರ, ಕೂರ್ಮ (ಆಮೆ), ವರಾಹ ( ಹಂದಿ), ನರಸಿಂಹ, ವಾಮನ, ಪರುಶುರಾಮ, ಶ್ರೀರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ( ಕಲಿಯುಗ) ಯಾಗಿದೆ. ಇವು ಕೆಂಪು ಹಿನ್ನಲೆಯಲ್ಲಿ ಮೂಡಿಬಂದಿವೆ. ಅಲ್ಲಲ್ಲಿ ಹೊಬಳ್ಳಿಯ ನಕ್ಷಾ ವಿನ್ಯಾಸ ಕಂಡುಬಂದು ಪ್ರಭಾವಳಿಯ ಮಧ್ಯದ ತುದಿಯಲ್ಲಿ ಕಳಸದ ಹಾಗೇ ನಿರ್ಮಿಸಿದ್ದಾರೆ. ಇದು ನೋಡುವುದಕ್ಕೆ ಮಹಾರಾಜರ ಕೂಡುವ ಕುರ್ಚಿಆಕಾರ ಕಂಡುಬರುತ್ತದೆ.

### ೩೪. ದ್ಯಾಮವ್ವ ಶಿಲ್ಪ

ಸಪ್ತ ಮಾತೃಕೆಯರಲ್ಲಿ ಒಬ್ಬಳು ದ್ಯಾಮವ್ವ ಇಲ್ಲವೇ ದ್ಯಾಮವ್ವ ಈಕೆ ಯಲ್ಲೂ ಲೋಕದೇವತೆಯಾಗಿಲ್ಲ. ಆದರೆ ಊರಿನ ಸುತ್ತಮುತ್ತಲಿನ ಜನಕ್ಕೆ ಮಾತ್ರ ಪ್ರಸಿದ್ಧವಾದಂತೆ ಕಂಡುಬರುತ್ತದೆ.[೬೫] ಇಲ್ಲಿ ದೇವಿಯ ಮೈಬಣ್ಣವಾಗಿ ಕೆಂಪು ಬಣ್ಣವನ್ನು ಉಪಯೋಗಿಸಲಾಗಿದೆ. ಕಿರೀಟ ಮತ್ತು ಆಭರಣಧಾರಿಯಾದ ದೇವಿಯು ಹತ್ತು ಕೈಗಳನ್ನು ಹೊಂದಿ ಹಲವಾರು ಆಯುಧಗಳನ್ನು ಹಿಡಿದಿದ್ದಾಳೆ, ದೇವಿಯು ವಾಹನವಾದ ಸಿಂಹದ ಮೇಲೆ ಆಸೀನಳಾಗಿ ಉಗ್ರರೂಪ ಕಾಣುತ್ತದೆ. ದೇವಿಯ ವಾಹನವಾದ ಸಿಂಹಕ್ಕೆ ಹಳದಿಬಣ್ಣ ಬಳಿದು ಅಗಲವಾದ ಕಣ್ಣುಗಳನ್ನು ಚಿತ್ರಿಸಲಾಗಿದೆ. ಕೋರೆಹಲ್ಲುಗಳು ನೋಡುವದಕ್ಕೆ ಭಯವನ್ನುಂಟುಮಾಡುವ ಹಾಗೇ ಮೂಡಿಬಂದಿದೆ. ದೇವಿಯ ಹಿನ್ನೆಲೆಯಲ್ಲಿ ಪ್ರಭಾವಳಿಯಿದ್ದು ಹಲವಾರು ವೃತ್ತ ರಚಿಸಿ ಪಟ್ಟಿಕೆಯಲ್ಲಿಯೂ ವಿವಿಧ ಚಿತ್ರಗಳೂ ಕೆಂಪು ಹಿನ್ನಲೆ ಮೇಲೆ ಮೂಡಿಸಿರುವುದು ಕಂಡುಬರುತ್ತದೆ. ದೇವಿಯು ಹಸಿರು ಸೀರೆ ಉಟ್ಟಿರುವುದು ಕಂಡುಬರುತ್ತದೆ.

### ೩೫. ಗ್ರಾಮ ದೇವತೆ ದುರ್ಗಮ್ಮ ಶಿಲ್ಪ

ಈಕೆಯು ಎಲ್ಲಿಯೂ ಲೋಕದೇವತೆಯಾಗಿಲ್ಲ, ಸ್ಥಳೀಯ ದೇವತೆಯಾಗಿದ್ದಾಳೆ ಈ ದೇವಿಯು ಹಸಿರು ಸೀರೆಯೊಟ್ಟು ಮೈಬಣ್ಣವಾಗಿ ಹಸಿರನ್ನೇ ಬಳಸಿರುವುದು ಕಂಡುಬರುತ್ತದೆ. ಆರು ಕೈಗಳನ್ನು ಹೊಂದಿರುವ ದೇವತೆಯಾದ ದೇವಿಯು ಸಿಂಹದ ಮೇಲೆ ಕುಳಿತು ಸವಾರಿ ಮಾಡುವ ಹಾಗೆ ಮೂಡಿಬಂದಿದೆ. ದೇವಿಯ ಬಟ್ಟಲ ಕಣ್ಣು ಮೂಗುತಿ ಕೋರೆಹಲ್ಲು, ತಿಳಿಗುಲಾಬಿ ಉಬ್ಬಿದ ತುಟಿಗಳು ನೀಳಾದ ಮೂಗು ಕಂಡುಬರುತ್ತದೆ. ಕಿರೀಟ ಮತ್ತು ಆಭರಣಧಾರಿಯಾಗಿದ್ದಾಳೆ. ಹಿನ್ನಲೆಯಲ್ಲಿ ವೃತ್ತಾಕಾರದ ಪ್ರಭಾವಳಿಯು ಇದ್ದು ಮಧ್ಯದಲ್ಲಿ ಕೀರ್ತಿಮುಖ ಮೂಡಿಬಂದಿದೆ. ಇಲ್ಲಿ ಸಿಂಹದ ಮುಖ ಕೀರ್ತಿಯ ಮುಖದಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದಿದೆ.

### ೩೬. ಗ್ರಾಮ ದೇವತೆ ದುರ್ಗಮ್ಮ ಶಿಲ್ಪ

ಸ್ಥಳೀಯ ದೇವತೆಯಾದ ಈ ದುರ್ಗಮ್ಮ ಈ ಶಿಲ್ಪವು ಎಂಟು ಕೈಗಳನ್ನು ಹೊಂದಿದ್ದು ಮೈ ಬಣ್ಣವಾಗಿ ಕೆಂಪು ಬಣ್ಣ ಬಳಿಯಲಾಗಿದೆ. ಹಸಿರು ಸೀರೆಯುಟ್ಟು ದೇವಿಯು ಉಗ್ರರೂಪದೊಂದಿಗೆ ನಿಂತಿದ್ದಾಳೆ. ಆಭರಣ ಧಾರಿಯಾದ ಈ ದೇವತೆ ಎತ್ತರದಷ್ಟು ಪ್ರಭಾವಳಿಯನ್ನು ರಚಿಸಲಾಗಿದ್ದು ಕಂಡುಬರುತ್ತದೆ. ಅಗಲವಾದ ಕೆಂಪು ಬಣ್ಣದ ಪೀಠದ ಮೇಲೆ ಈ ದೇವಿಯು ನಿಂತಿರುವುದು ಕಂಡುಬರುತ್ತದೆ. ಪ್ರಭಾವಳಿಯಲ್ಲಿ ಚಿತ್ರಗಳು ಮಸುಕಾಗಿ ಕಾಣುವುದರಿಂದ ಆ ಚಿತ್ರಗಳ ಕುರಿತು ವಿಶ್ಲೇಷಿಸುವುದು ಕಷ್ಟ ಸಾಧ್ಯವಾಗಿದೆ.

### ೩೭. ಗ್ರಾಮ ದೇವತೆ ದುರ್ಗಮ್ಮ ಶಿಲ್ಪ

ಈ ದೇವತೆಯೂ ಸಿಂಹದ ಮೇಲೆ ಕುಳಿತಿರುವುದಾಗಿ ಕಂಡುಬರುತ್ತದೆ. ರಾಕ್ಷಸರನ್ನು ಸಂಹಾರ ಮಾಡುತ್ತಿರುವ ದೃಶ್ಯಕಂಡುಬರುತ್ತದೆ. ಇಲ್ಲಿ ಬೃಹತ್ತಾಕಾರದ ಪೀಠದ ಮಧ್ಯದಲ್ಲಿ ವಾಹನದೊಂದಿಗೆ ಕಂಡುಬರುವ ಚಿತ್ರವು ನೋಡುವುದಕ್ಕೆ ರಥದ ವಿನ್ಯಾಸವು ಕಂಡುಬರುತ್ತದೆ. ಹಲವಾರು ವರ್ಣಗಳ ಬಳಕೆ ಈ ಶಿಲ್ಪದಲ್ಲಿ ಕಂಡುಬಂದರು ಹೆಚ್ಚಾಗಿ ಕೆಂಪು, ಹಳದಿ, ನೀಲಿವರ್ಣ ಉಪಯೋಗಿಸಲಾಗಿದೆ. ರಾಕ್ಷಸರಿಗೆ ನೀಲಿವರ್ಣ, ವಾಹನಕ್ಕೆ ಹಳದಿ ವರ್ಣ ಬಳೆದು ದೇವಿಯ ಉಗ್ರ ಸ್ವರೂಪ ಕಾಣುವಹಾಗೆ ಕೆಂಪು ಬಣ್ಣವನ್ನು ಬಳೆಯಲಾಗಿದೆ. ದೇವಿಯು ತಲೆಯ ಮೇಲೆ ಏಳು ಹೆಡೆಯ ಸರ್ಪವು ಹಳದಿ ಮತ್ತು ಬಿಳಿ ವರ್ಣದಲ್ಲಿ ಇದ್ದು ಕಂಡುಬರುತ್ತದೆ.

---

೬೫. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೧೯೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ದೇವಿಯು ಧರಿಸಿದ ಹಸಿರು ವರ್ಣದ ಸೀರೆ ದೇವಿಗೆ ಪ್ರತ್ಯಕತೆಯನ್ನು ಸೂಚಿಸುತ್ತದೆ. ಸಿಂಹವು ಎಡಕ್ಕೆ ಮುಖಮಾಡಿ ಕೆಳಗೆ ಕುಳಿತ ರಾಕ್ಷಸನ ತಲೆಯನ್ನು ಕಚ್ಚುತ್ತಿದ ದೇವಿಯು ಬಲಗೈ ಕತ್ತಿಯಿಂದ ರಾಕ್ಷಸರ ಎದೆಗೆ ತಿವಿದಿರುವುದಾಗಿದೆ ನಿಂತ ರಾಕ್ಷಸನ್ನು ತನ್ನ ಆಯುಧವನ್ನು ಮೇಲೆತ್ತಿ ದೇವಿಗೆ ಹೊಡೆಯುತ್ತಿರುವದು ದೇವಿಯು ಸಿಟ್ಟಿನಿಂದ ತನ್ನ ತ್ರಿಶೋಲದಿಂದ ಅವನ ಎದೆಗೆ ತಿವಿದಿರುವಹಾಗೆ ಮೂಡಿಬಂದಿದೆ.

ಸುಂದರವಾದ ವರ್ಣ ವಿನ್ಯಾಸದಿಂದ ಕೂಡಿದ ಹಿನ್ನೆಲೆಯ ಪ್ರಭಾವಳಿಯು ನೋಡುಗರಿಗೆ ಮನಃ ಸೋಲುವ ಹಾಗೇ ಕಲಾವಿದ ತನ್ನ ಜಾನ್ಮೆಯಿಂದ ರಚಿಸಿದ್ದಾನೆ. ಹಲವಾರು ನಕ್ಷಾ ವಿನ್ಯಾಸಗಳು, ಹೊಗಳು, ಬಳ್ಳಿಗಳೂ, ಚುಕ್ಕೆಗಳು, ಎಲೆಕಾರ ವೃತ್ತದಲ್ಲಿ ವಿವಿಧ ದೇವಿಯ ಶಕ್ತಿಯ ಅವತಾರಗಳು ಕಂಡುಬರುವು ಹಾಗೆ ಚಿಕ್ಕ ಚಿಕ್ಕ ಚಿತ್ರಗಳು ಮೂಡಿಬಂದಿವೆ. ಎಡ ಮತ್ತು ಬಲಭಾಗದಲ್ಲಿ ನವಿಲು ಚಿತ್ರಗಳು ಮೂಡಿವೆ.

**೩೮. ಗ್ರಾಮದೇವತೆ ದ್ಯಾಮವ್ವ ಶಿಲ್ಪ**

ಈ ದೇವತೆಯು ಎಲ್ಲಿಯೂ ಲೋಕ ದೇವತೆಯಾಗಿಲ್ಲ ಆದರೂ ಊರಿನ ಜನಕ್ಕೆ ಮಾತ್ರ ಪ್ರಸಿದ್ದಿಯಾದ ದೇವಿತೆಯಾಗಿದ್ದಾಳೆ. ಇಲ್ಲಿ ಮುಖ್ಯವಾಗಿ ದೇವಿಯು ಉಗ್ರ ಸ್ವರೂಪ ತೋರಿಸುದಕ್ಕೆ ಕಲಾವಿದ ಮೈಬಣ್ಣವಾಗಿ ದಟ್ಟು ಹಸಿರು, ಕೆಂಪು ಸೀರೆ ಉಡಿಸಿರುವುದಾಗಿದೆ. ಎಂಟು ಕೈಗಳಲ್ಲಿ ಆಯುಧಗಳನ್ನು ಹಿಡಿದ ದೇವಿಯು ಕಮಾನು ಬಾಗಿಲು ಆಕಾರದ ಪ್ರಭಾವಳಿಯನ್ನು ಹೊಂದಿದ್ದಾಳೆ ಇಲ್ಲಿ ದೇವಿಯ ಶಿಲ್ಪ ದೊಡ್ಡದು ಎಂದು ತೋರಿಸುವುದಕ್ಕೆ ಕಲಾವಿದ ಚಿಕ್ಕ ಚಿಕ್ಕ ಎಡ ಮತ್ತು ಬಲಗಳಲ್ಲಿ ಒಂದು ಸೈನಿಕ, ಮತ್ತೊಂದು ಸೇವಕಿಯರ ಶಿಲ್ಪವನ್ನು ರಚಿಸಿದ್ದಾರೆ. ಹಲವಾರು ವರ್ಣಗಳಿಂದ ವಿನ್ಯಾಸಗೊಂಡ ಕಲಾಕೃತಿಯಲ್ಲಿ ಹೂಬಳ್ಳಿಯ ನಕ್ಷಾವಿನ್ಯಾಸಗಳು ಕಂಡುಬರುತ್ತವೆ.

**೩೯. ದುರುಗ ಮುರಗಿಯವರ ಪಟ್ಟಿಗೆ.**

ದುರುಗ ಮುರಗಿಯವರು ದಸರೆಯ ಹಬ್ಬವನ್ನು ಬಿಟ್ಟು ಉಳಿದ ಯಾವ ಹಬ್ಬವನ್ನು ಆಚರಿಸುದಿಲ್ಲ ಇವರು ದುರುಗಮ್ಮ, ಮರುಗಮ್ಮ, ಮಾರಮ್ಮ, ಪಾಲಕಮ್ಮ, ದೇವತೆಗಳನ್ನು ಬುಟ್ಟಿ ಅಥವಾ ಪೆಟ್ಟಿಗೆಯಲ್ಲಿಟ್ಟುಕೊಂಡು ತಿರುಗುವರು ಇವರು ಜಿಂಕೆ ಚರ್ಮದಿಂದ ಮಾಡಿರುವ ಬುರು ಬುರು ವಾದ್ಯವನ್ನು ಬಾರಿಸುತ್ತಾ

*ಮರಗಮ್ಮ ಬಂದಾಳ್ರೆ ಎವ್ವಾ*
*ದುರಗಮ್ಮ ಬಂದಾಳ್ರೆ ಎವ್ವಾ*
*ಬರ್ರೆ ಎವ್ವಾ ಬರ್ರೆ ಎವ್ವಾ*
*ಬರ್ರೆ ತಾಯಿ ಬರ್ರೆ ತಾಯಿ*

ಎಂದು ಓಣಿಯಲ್ಲಿ ತಿರುಗಿ ಹಾಡುವುದುಂಟು ಅದೇ ಹೊತ್ತಿಗೆ ಆಕೆಯ ಗಂಡ ಕುಣಿಯುತ್ತಾ ಚಾಟಿಯಿಂದ ಮೈಗೆ ಹೊಡೆದು ರಕ್ತ ಸುರಿಸುತ್ತಾ ದವಸಧಾನ್ಯಗಳನ್ನು ಪಡೆಯುತ್ತಾನೆ.[೬೬] ದೇವಿಯು ಬಟ್ಟಲ ಕಣ್ಣುಗಳು ನೋಡುಗನನ್ನು ಭಯ ಹುಟ್ಟಿಸುವ ಹಾಗೇ ಚಿತ್ರಿತವಾಗಿವೆ. ಕಮಾನು ಬಿಲ್ಲಿನಾಕಾರದ ಹುಬ್ಬುಗಳು ಕಪ್ಪು ವರ್ಣದಲ್ಲಿ ಮೂಡಿವೆ. ಹಣೆನಾಮ, ಕೋರೆಹಲ್ಲು, ಮೂಗುತಿ ಕಿವಿಯೋಲೆ, ಕೊರಳಲ್ಲಿ ಆಭರಣಗಳು ಕಂಡುಬಂದಿವೆ. ದೇವಿಯು ನಾಲ್ಕು ಕೈಗಳನ್ನು ಹೊಂದಿದ್ದು ಮೈಬಣ್ಣವಾಗಿ ಕೆಂಪು ಬಣ್ಣ ಬಳಸಲಾಗಿದೆ. ಐದು ಸರ್ಪಗಳಿಂದ ಕೂಡಿದ ದೇವಿಯು ಹಸಿರು ಬಣ್ಣದ ಸೀರೆಯುಟ್ಟು ಬಿಳಿಚಿಕ್ಕೆಗಳಿಂದ ಕೂಡಿ ಕುಪ್ಪಸ ತೊಟ್ಟಿದ್ದಾಳೆ. ದೇಪಿಯ ಹಿಂಭಾಗದಲ್ಲಿ ದಟ್ಟ ಹಸಿರು ಕೆಂಪು ವರ್ಣದ ಹೂಗಳು ರಚನೆಯಾಗಿವೆ. ದೇವಿಯ ಸೊಂಟಕ್ಕೆ ಸರ್ಪಸುತ್ತಿರುವುದು ಕಂಡುಬರುತ್ತದೆ. ಕೆಳಭಾಗದ ಪಟ್ಟಿಕೆಯಲ್ಲಿ ನಾಲ್ಕುಭಾಗ ಮಾಡಿ ಚಿತ್ರರಚಿಸಲಾಗಿದೆ. ಹಿನ್ನೆಲೆ ವರ್ಣವಾಗಿ ಕೆಂಪು ವರ್ಣವನ್ನು ಬಳಸಲಾಗಿದೆ. ಕೆಳಭಾಗದಲ್ಲಿ ಭೂತಪ್ಪನ ಮುಖವನ್ನು ಕೆಂಪು ವರ್ಣದಿಂದ ರಚಿಸಲಾಗಿದೆ. ಅಗಲವಾದ ಬಟ್ಟಲ ಕಣ್ಣುಗಳು ಭಯವುಂಟು ಮಾಡುವಂತೆ ಕಾಣುತ್ತೆವೆ. ಚೂಪುಮೀಸೆ, ಕೋರೆ ಹಲ್ಲು ಬಿಳಿವರ್ಣದ ಹಣೆನಾಮ, ಹಸಿರು ವರ್ಣದ ನಕ್ಷಾವಿನ್ಯಾಸ ಕೂಡಿದ ಕಿರೀಟ ಕಿವಿಯೋಲೆ

೬೬. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೧೦೩೪ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫



೩೬. ಗ್ರಾಮ ದೇವತೆ ದುರ್ಗಮ್ಮ



೩೭. ಗ್ರಾಮ ದೇವತೆ ದುರ್ಗಮ್ಮ



೩೮. ದುರುಗ ಮುರಗಿಯವರ ಪೆಟ್ಟಿಗೆ



೩೯. ಸಿಂಹ



೪೦. ಸಿಂಹ

ಸೂಕ್ಷ್ಮವಾದ ಹಳದಿ ಬಣ್ಣದ ಹೊರರೇಖೆ ಹಾಕಲಾಗಿದೆ. ಪಟ್ಟಿಗೆಯ ನಾಲ್ಕು ಭಾಗದಲ್ಲಿ ದೇವಿ ಅವತಾರಗಳು ಮೂಡಿವೆ. ಲಕ್ಷ್ಮೀ , ಕಾಳಿಕಾದೇವಿ, ಶಕ್ತಿ ಅವತಾರ ಚಿತ್ರಗಳು ಕಂಡುಬರುತ್ತವೆ. ಇಲ್ಲಿ ಲಕ್ಷ್ಮೀಯು ಮೂರು ಮುಖವನ್ನು ಹೊಂದಿದ್ದು ನಾಲ್ಕು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದಾಳೆ. ಹೆಸಿರು ಬಣ್ಣದ ಸೀರೆ, ಬಿಳಿ ಕುಪ್ಪಸ, ಗುಲಾಬಿ ವರ್ಣದ ಕಮಲದ ಮೇಲೆ ಆಸೀನಳಾಗಿದ್ದಾಳೆ. ಹಲವಾರು ದೇವತೆಯರ ಚಿತ್ರಗಳು ವಿವಿಧ ವರ್ಣಗಳಲ್ಲಿ ಮೂಡಿಬಂದಿವೆ. ಪಟ್ಟಿಗೆಯ ಮಧ್ಯದಲ್ಲಿ ಹಳದಿ ಬಣ್ಣದ ಪಟ್ಟಿಕೆಯಲ್ಲಿ ಹಸಿರು ಎಲೆಬಳ್ಳಿಯನ್ನು ರಚಿಸಲಾಗಿದೆ. ಅಕ್ಕಪಕ್ಕದಲ್ಲಿ ಕಪ್ಪು ಪಟ್ಟಿಕೆ ಮೇಲ್ಭಾಗದಲ್ಲಿ ಸಣ್ಣದಾದ ಭೂತಪ್ಪದ ಮುಖ ಜಾಂಬಳಿ ವರ್ಣದಾಗಿದ್ದು ಎರಡು ಹಾವುಗಳು ಹಳದಿವರ್ಣದಿಂದ ರಚನೆಯಾಗಿವೆ.

### ೪೦. ಸಿಂಹ

ಭಾರತದಲ್ಲಿ ಸಿಂಹ ಗ್ರಾಮದೇವತೆಗಳ ವಾಹನ ಇದು ವಿಷ್ಣುವಿನ ದಶಾವತಾರಗಳಲ್ಲಿ ಒಂದು. ಇದು ಆಯಶ್ಯಂಕುವಿನ ವಾಹನವೂ ಹೌದು. ಸಾಮಾನ್ಯವಾಗಿ ದುರ್ಗದ ಎಲ್ಲಮ್ಮ ಸಿಂಹದ ಮೇಲೆ ಆಸೀನಳಾಗಿರುತ್ತಾಳೆ.[೬೭] ಇಲ್ಲಿ ಕಂಡುಬರುವ ಸಿಂಹವು ಎದುರು ಮುಖವಾಗಿದ್ದು ಹಳದಿ ಮೈಬಣ್ಣ ಹೊಂದಿದೆ. ಉಗ್ರರೂಪದಿಂದ ಕೂಡಿದ ಸಿಂಹವು ದುಂಡಾದ ಕಣ್ಣುಗಳನ್ನು ಹೊಂದಿದೆ. ಕಣ್ಣಿನಲ್ಲಿ ಉಗ್ರರೂಪತೆಯ ಭಾವನೆಯ ವರ್ಣಗಳು ಇದ್ದು. ಭಯವುಂಟು ಮಾಡುತ್ತವೆ. ಹೊರಚಾಚಿದ ಕೆಂಪುವರ್ಣದ ನಾಲಿಗೆ ಮೂಗಿನ ತುದಿಯವರೆಗೂ ಹೋಗಿದ್ದು ಕೋರೆಯ ಹಲ್ಲುಗಳು ಗರಗಸದ ಹಾಗೆ ಹೆಣೆದಿವೆ. ಕಾಲುಗೂರು ಕ್ರೂರತೆಯನ್ನು ಬಿಂಬಿಸುತ್ತವೆ. ಕತ್ತಿನಭಾಗದಲ್ಲಿ ಕೇಶವು ಒಂದರ ಮೇಲೊಂದು ಇದ್ದು ಕಪ್ಪು ವರ್ಣ ಬಳಸಲಾಗಿದೆ. ಎದೆಭಾಗಕ್ಕೆ ಕೆಂಪು ಚುಕ್ಕೆಗಳು ರಾರಾಜಿಸುತ್ತವೆ. ಕಣ್ಣಿನ ಸುತ್ತಲೂ ಬಿಳಿವರ್ಣದ ವೃತ್ತ ಹಳದಿವರ್ಣದ ರೇಖೆ ಮೂಡಿದೆ.

### ೪೧. ಸಿಂಹ

ಈ ಮೇಲೆ ಹೇಳಿದಂತೆ ಇದು ಸಹ ದೇವಿಯ ವಾಹನವಾಗಿದೆ. ಎಡಗಡೆ ಮುಖಮಾಡಿ ಕುಳಿತಿರುವ ಸಿಂಹವು ಬಾಯಿತೆರೆದುಕೊಂಡಿದೆ. ಕೋರೆಹಲ್ಲುಗಳು ಒಂದಕ್ಕೊಂದು ಹೆಣೆದಿರುವ ಹಾಗೆ ಬಾಯಿಯ ಒಳಭಾಗದಲ್ಲಿ ಕೆಂಪಾಗಿ ಕಾಣಬರುತ್ತದೆ. ಕೇಶವು ಕುದುರೆಯ ಕೇಶದ ಹಾಗೇ ಕೆಳಗೆ ಇಳಿಬಿದ್ದು ನೋಡುವುದಕ್ಕೆ ಎಲೆಯ ಮೇಲೊಂದು ಎಲೆಯನ್ನುವ ಭಾವನೆ ಬರುವುದು ಸಹಜವಾಗಿದೆ. ಮೈಬಣ್ಣ ಹಳದಿ ಬಳಿದು ಮುಂಗಾಲು ಮೇಲೆತ್ತಿ ಉಗುರುಗಳು ಬಿಳಿವರ್ಣದಿಂದ ಕೂಡಿವೆ. ಹಿಂಗಾಲು ಸ್ವಲ್ಪ ಮಡಚಿ ಮುಂಚಾಚಿಕೊಂಡಿದೆ. ಚೋಟು ಬಾಲ ಚಿತ್ರಿಸಿದ್ದು ತೆಳುವಾದ ನಡು ಬೃಹತ್ತಾಕಾರದ ದೇಹ ದೇವಿಗಾಗಿ ಕಾಯುತ್ತಿರುವ ಹಾಗೆ ಮೇಲ್ಮುಕಮಾಡಿ ಕುಳಿತ್ತಿದ್ದು ಇಲ್ಲಿ ಕೇಶಗಳಿಗೆ ಕಪ್ಪು ಬಿಳಿದಿರುವುದಾಗಿ ಕಂಡುಬರುತ್ತದೆ.

### ೪೨. ಕುರ್ಚಿ

ಕುರ್ಚಿಗಳ ರಚನೆ ಮತ್ತು ವಿನ್ಯಾಸಗಳು ಅವನ್ನು ಬಳಸುವ ವರ್ಗಗಳ ಮೇಲೆ ನಿರ್ಧಾರಿತವಾಗುತ್ತವೆ. ಅವರವರ ಆರ್ಥಿಕ ಉತ್ಪನ್ನಗಳ ಮೇಲೆ ಅಭಿರುಚಿಗಳ ಹಿನ್ನೆಲೆಯಲ್ಲಿ ಅವು ಬಳಕೆಯಾಗುತ್ತವೆ. ಇಂದಿನ ಕುರ್ಚಿಗಳು ಮನೆಯ ವಿನ್ಯಾಸ ಗಾತ್ರಗಳ ಮೇಲೆ ಬಳಕೆಯಾಗುತ್ತವೆ. ವಿಜಯನಗರ ಕಾಲಾವಧಿಯಲ್ಲಿ ಕುಸುರಿ ಕೆಲಸದ ಜೊತೆಗೆ ಕಟ್ಟಿಗೆಯ ಮೇಲೆ ಅಂದವಾದ ವರ್ಣಾಲಂಕಾರವನ್ನು ಕುಸುರಿ ಕೆತ್ತನೆಯಷ್ಟೇ ಪ್ರಧಾನವಾಗಿ ಗುರುತಿಸಬಹುದಾಗಿದೆ. ಮುಂದುವರಿದು ಈ ವರ್ಣಾಲಂಕಾರ ಪರಂಪರೆಗೆ ಮೈಸೂರು ಅರಸರು ಇನ್ನಷ್ಟು ಪ್ರೋತ್ಸಾಹ ನೀಡಿ ಬೆಳೆಸಿದರು.[೬೯] ಧಾರವಾಡ ಜಿಲ್ಲೆಯ ಕಲಘಟಗಿಯಲ್ಲಿ ಈ ಪರಂಪರೆಯ ಜೀವಂತಿಕೆಯನ್ನು ಕಾಣಬಹುದು. ಇಲ್ಲಿ ತಯಾರಾಗುವ ತೊಟ್ಟಿಲು, ಪಲ್ಲಕ್ಕಿ, ತೂಗುಮಂಚ, ಗ್ರಾಮದೇವತೆ, ಟೀಪಾಯಿ, ಸೋಪಾಸೆಟ್‌ಗಳು ಅದ್ಭುತವಾದ ವರ್ಣವಿನ್ಯಾಸದ ಮಾದರಿಗಳಾಗಿವೆ.

---

೬೭. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೪೨ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦
೬೮. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೪೯ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦
೬೯. ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೫೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦




೪೧. ಕುರ್ಚಿ



೪೨. ಗ್ರಾಮದೇವತೆಯ ದ್ಯಾಮವ್ವನ ಪ್ರಭಾವಳಿಯ ಕೆಳ ಪಟ್ಟಿಕೆ

ಆಧುನಿಕ ಪರಿಸರಕ್ಕೆ ಬಂದಾಗ ಇಲ್ಲೂ ಕೂಡಾ ವೈವಿಧ್ಯಮಯವಾದ ಕುರ್ಚಿಗಳ ಬಳಕೆಯನ್ನು ಕಾಣುತ್ತವೆ, ಆರಂಭದ ಹಂತದ ಕುರ್ಚಿಗಳಿಗೆ ಸೈಡ್ ಹ್ಯಾಂಡಲ್‌ಗಳು ಇದ್ದದ್ದು ಕಂಡುಬರುವುದಿಲ್ಲ ಲಂಡನ್ನಿನಲ್ಲಿ ೧೮೫೧ ರಲ್ಲಿ ಮಾರಿಸ್ ಆಂಡ್ ಕಂಪನಿ ಆಯೋಜಿಸಿದ್ದ ಗ್ರೇಟ್ ಯಗ್ಜಿಬಿಷನ್ನಿನಲ್ಲಿ ವಿವಿಧ ವಿನ್ಯಾಸಗಳ ಕುರ್ಚಿಗಳ ಪ್ರದರ್ಶನ ನಡೆಯಿತು ಇಲ್ಲಿ ಪ್ರದರ್ಶನವಾದ ಕುರ್ಚಿಗಳಿಗೆ ಕೈಗಳಿಲ್ಲದೆ ಆಗಿದ್ದವು ನಂತರದ ದಿನಗಳಲ್ಲಿ ಬೆಳವಣಿಗೆ ಕಂಡು ಕೈಗಳಿದ ಕುರ್ಚಿಗಳ ಬಳಕೆ ಕಂಡುಬರುತ್ತದೆ.[೬೯]

ಒಟ್ಟಿನಲ್ಲಿ ಎಷ್ಟೇ ಮಾರ್ಪಾಟುಗಳು ಈ ಕುರ್ಚಿಯಲ್ಲಿ ಆಗುತ್ತಿದ್ದರು. ಕಲಾವಿದನ ಮಾನಸಿಕ ವಿಶ್ಲೇಷಣೆ ತುಂಬಾ ಉನ್ನತ ಮಟ್ಟದ್ದು ಹಿಂದೆ ಹೆಚ್ಚಾಗಿ ಕುಸುರಿ ಕೆತ್ತನೆ ಕೆಲಸವಾಗಿತ್ತು. ಇಂದು ರಚಿತವಾದ ಈ ಕೃತಿಯು ವರ್ಣಮಯವಾಗಿದೆ. ಹಲವಾರು ವರ್ಣಗಳ ಬಳಕೆಯಲ್ಲಿ ನಿಸರ್ಗಚಿತ್ರಣ, ಪ್ರಾಣಿಗಳು, ನರ್ತಕೀಯರು, ಕಂಡುಬರುತ್ತಾರೆ. ಮೇಲ್ಭಾಗದಲ್ಲಿ ನೋಡಿದ ಕೂಡಲೆ ಯಥಾದರ್ಶನದ ಕಲ್ಪನೆ ಮೂಡಿಸುತ್ತದೆ. ಸಾಲಾಗಿ ಎದುರು ಬದಿರಾಗಿ ನಿಂತ ಆನೆಯ ಸಾಲು ಬೂದು ವರ್ಣಗಳಿಂದ ತುಂಬಿದೆ. ಅದೇ ಕಲ್ಪನೆ ಬರುವಹಾಗೇ ಹಸಿರು ಮರಗಳು, ಅನತಿ ದೂರದ ಬೆಟ್ಟ, ಮುಸುಕಾಗಿ ಕಾಣುವುದು, ಸ್ವಚ್ಛವಾದ ನೀರು ಸಾವಿರಾರು ಕಿ. ಮೀಟರಗಳ ಅಂತರದ ಭಾವನೆ ಹುಟ್ಟಿಸುವ ನೀಲಿ ಆಕಾಶ, ಇಲ್ಲಿ ಕಲಾವಿದ ತನ್ನ ಕಣ್ಣಿನ ಸೂಕ್ಷ್ಮತೆಯನ್ನು ಕುಂಚ, ವರ್ಣ, ಬಳಸುವ ವಿಧಾನ, ತುಂಬಾ ಮನಃ ಮೋಹಕವಾಗಿದೆ. ಈ ಕೃತಿಯ ಕೆಳಭಾಗದಲ್ಲಿ ಮತ್ತೊಂದು ನಿಸರ್ಗಚಿತ್ರವಿದ್ದು ಇಲ್ಲಿ ಆನೆ, ಚಿಗರೆ, ಸಿಂಹ, ಮುಂತಾದ ಪ್ರಾಣಿಗಳಿವೆ. ಇಲ್ಲಿ ವಿಭಾಗವಾರು ಮಾಡಿಕೊಂಡು ರಚಿಸಲಾಗಿದೆ. ಆನೆಯು ಮುಂದಕ್ಕೆ ನಡೆಯುತ್ತಿರುವ ಭಂಗಿಯಲ್ಲಿದೆ. ಮೈಬಣ್ಣವಾಗಿ ಬೂದು, ಚಿಗರೆಗಳು ತಮ್ಮ ಹಸಿವನ್ನು ನಿಗಿಸಿಕೊಳ್ಳುತ್ತವೆ. ಅದರಲ್ಲಿ ಒಂದು ಚಿಗರೆ ಆನೆಯ ಕಡೆಗೆ ನೋಡುತ್ತಿರುವ ಹಾಗೇ ಕೆಂಪು ಬಣ್ಣಹೊಂದಿದೆ, ನಂತರದಲ್ಲಿ ಸಿಂಹಗಳು ಇದ್ದು ಎದ್ದುನಿಂತ ಸಿಂಹ ಗರ್ಜಿಸುವ ಹಾಗೆ ಬಾಲ ಮೇಲಕ್ಕೆ ಹೋಗಿದೆ. ಇನ್ನೊಂದು ಕುಳಿತಿದೆ. ಕೆಂಪು ಮಿಶ್ರಿತ ಕೇಸರಿ ವರ್ಣದಲ್ಲಿದೆ. ಕೊನೆಯದಾಗಿ ಕಾಣುವ ಭಾಗವು ಅಸ್ಪಷ್ಟವಾಗಿರುತ್ತದೆ. ನಾಲ್ಕು ಭಾಗಗಳ ಹಿನ್ನೆಲೆ ಗಿಡಗಳಿದ್ದು ಹೆಚ್ಚಾಗಿ ಕಪ್ಪು ವರ್ಣದಿಂದ ಕೂಡಿದೆ. ಕುರ್ಚಿಯ ಎಡಗಡೆಯ ಭಾಗದ ಪಟ್ಟಿಕೆಯಲ್ಲಿ ನೃತ್ಯಕ್ಕೆ ಸಂಬಂಧಿಸಿದ ಚಿತ್ರಗಳು ಮೂಡಿಬಂದಿವೆ. ಇಲ್ಲಿ ರಚನೆಯಾದ ಚಿತ್ರಗಳು ಶಿಲಾಬಾಲಕೆಯರು ಇರಬಹುದಾಗಿದೆ. ಚಿತ್ರಗಳು ಸ್ಪಷ್ಟವಾಗಿ ಕಾಣಿಸದೆ ಇರುವುದರಿಂದ ವಿಶ್ಲೇಷಣೆಗೆ ತುಂಬಾ ಕಷ್ಟವಾಗಿದೆ. ಎರಡು ಪಕ್ಕದಲ್ಲಿ ಕಾಣುವ ಕಾಮಾನಿನಾಕಾರಗಳು ಹೂಗಳಿಂದ ರೇಖೆ ಸರಪಳಿಗಳಿಂದ ಅಲಂಕೃತವಾಗಿದೆ. ಇಲ್ಲಿ ಹೆಚ್ಚಾಗಿ ಕೆಂಪು ವರ್ಣವು ಹೆಚ್ಚಾಗಿದೆ ಮೂಲ ವರ್ಣಗಳಿಂದ ರಚಿತವಾದ ಈ ಕೃತಿಯು ಮೂಲ ಚಿತ್ರಗಳನ್ನೇ ಪಡೆದುಕೊಂಡಿದೆ. ಕಲಾವಿದನ ಕಲ್ಪನೆ ತಾಳ್ಮೇ, ಶ್ರದ್ದೆ, ವಿಧಾನ ಸೊಗಸಾಗಿದೆ.

### ೪೩. ಗ್ರಾಮದೇವತೆಯ ದ್ಯಾಮವ್ವನ ಪ್ರಭಾವಳಿಯ ಕೆಳಪಟ್ಟಿಕೆ

ಈ ಕಲಾಕೃತಿಯು ದ್ಯಾಮವ್ವನ ಪ್ರಭಾವಳಿಯ ಹಲಗೆ (ಪ್ಯಾನಲ್ಸ್) ಕುರಿತಾಗಿದ್ದು ಇಲ್ಲಿ ಮುಖ್ಯವಾಗಿ ಎರಡುಭಾಗ ಅದರಲ್ಲಿ ಮತ್ತೆ ನಾಲ್ಕು ಭಾಗ ವಿಂಗಡಿಸಿ ಚಿತ್ರ ಬರೆಯಲಾಗಿದೆ. ಮೊದಲನೆಯದಾಗಿ ಭೀಮ ಶಿವನನ್ನು ಪ್ರತ್ಯಕ್ಷ ಮಾಡುವುದು. ಎರಡನೆಯದಾಗಿ ಭಗೀರಥ ಮೂರು ಶ್ರೀರಾಮ ಪಟ್ಟಾಬಿಷೇಕ ನಾಲ್ಕು ಕುರುಕ್ಷೇತ್ರಗಳಾಗಿವೆ. ಈ ಚಿತ್ರಗಳು ದೇವಿಯ ದುಷ್ಟಸಂಹಾರಮಾಡಿ ಜಗತ್ತಿಗೆ ಕಲ್ಯಾಣಮಾಡುವುದನ್ನು ಈ ಚಿತ್ರಗಳ ಮೂಲಕ ಕಾಣಬಹುದು. ಇಲ್ಲಿ ಭೀಮನು ಶಿವನನ್ನು ಪ್ರತ್ಯಕ್ಷೆ ಮಾಡಿಕೊಳ್ಳಲು ತನ್ನ ಗಧೆಯನ್ನು ಆಕಾಶಕ್ಕೆ ಬಗೆದು ಅದಕ್ಕೆ ತನ್ನ ಎದೆಯನ್ನು ಒಡ್ಡಿನಿಂತ ಭಂಗಿ ಅದ್ಬುತವಾಗಿದೆ.[೭೦] ಭೀಮನು ಮೈಬಣ್ಣವಾಗಿ ಗೋದಿಗೆಂಪು, ಕೇಸರಿ, ತಿಳಿಗುಲಾಬಿ, ವರ್ಣದ ಪಂಚೆಯನ್ನು ತೋರಿಸಲಾಗಿದೆ. ಅವನ ಭಕ್ತಿಗೆ ಮೆಚ್ಚಿದ ಪರಶಿವನು ಪ್ರತ್ಯಕ್ಷವಾಗಿ ಆ ಗಧೆಯನ್ನು ಅಂತರಿಕ್ಷದಲ್ಲಿಯೇ ಹಿಡಿದಿರುವ ಶಿವನು ಆಕಾಶ ಬಣ್ಣದಲ್ಲಿ ಆಕಾಶ ವರ್ಣದಲ್ಲಿಯೆ ಮೂಡಿದೆ. ಇಲ್ಲಿ ಗಧೆಯು ಬಂಗಾರದ ವರ್ಣದಿಂದ ಕೂಡಿದ್ದು ಕಂಡುಬರುತ್ತದೆ. ಎದುರು ನಿಂತ ಅರ್ಜುನ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು ಆಯುಧಗಳನ್ನು ಪಡೆದಿರವುದು ಕಂಡು ಬರುತ್ತದೆ.

೭೦. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೩೦೨ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ಆಭರಣಗಳನ್ನು ಹೊಂದಿದ ಅರ್ಜುನ, ಮತ್ತು ಭೀಮ ಇಲ್ಲಿ ಅರ್ಜುನ ಕಿರೀಟ ಧರಿಸಿದ್ದು ಬುಜಕೀರ್ತಿಯಿಂದ ಮೊಳಕಾಲಿನವರೆಗೂ ತಿಳಿಗುಲಾಬಿ ವರ್ಣದ ವಸ್ತ್ರವು ಕಂಡುಬರುತ್ತದೆ. ಕೇಸರಿ, ಹಸಿರು, ಮತ್ತು ಮೈಬಣ್ಣವಾಗಿ ಗೋದಿಗೆಂಪು ಬಣ್ಣ ಹೊಂದಿದ್ದಾನೆ. ಹಿನ್ನೆಲೆಯಲ್ಲಿ ನೀಲಿ ಹಾಗೂ ತಿಳಿ ಹಸಿರು ವರ್ಣದ ಗಿಡಗಳು ರಚನೆಯಾಗಿವೆ. ಕೆಳಭಾಗ ಅಂದರೆ ಭೂಮಿಯ ವರ್ಣವಾಗಿ ದಟ್ಟ ಕೆಂಪು ವರ್ಣವನ್ನು ಕಲ್ಲುಗಳನ್ನು ಕಪ್ಪು ಬಣ್ಣದಲ್ಲಿ ಮೂಡಿಬಂದಿದೆ. ಈ ಚಿತ್ರವು ಕಮಾನಿನಲ್ಲಿ ಇದ್ದು ಕಮಾನಿಗುಂಟ ಬಟ್ಟೆಯನ್ನು ಇಳಿಬಿಡಲಾಗಿದೆ. ಹೊರಭಾಗದಲ್ಲಿ ನೀಲಿ ವರ್ಣದ ಬಳ್ಳಿಯೊಂದಿಗೆ ಕೆಂಪು, ಬಿಳಿ. ಹಳದಿ ಮಿಶ್ರಿತ ಹೂಗಳು ರೇಖೆ ಚುಕ್ಕೆಗಳು ಕಂಡುಬರುತ್ತವೆ.

ಎರಡನೆಯದಾಗಿ ಭಗೀರಥ ಚಿತ್ರವಾಗಿದ್ದು ಇಲ್ಲಿ ಸಗರನ ನೂರನೆಯ ಯಜ್ಞದಲ್ಲಿ ಇಂದ್ರನು ಕುದುರೆಯನ್ನು ಅಪಹರಿಸಿ ಕಪಿಲ ಋಷಿಯ ಹಿಂದೆ ಬಿಟ್ಟನು ಸಗರನ ನೂರು ಮಕ್ಕಳು ಕುದುರೆಯನ್ನು ಹುಡುಕಿ ಕಪಿಲ ಋಷಿಯೆ ಕಳ್ಳನೆಂದು ಅವನನ್ನು ಭಾದಿಸಲು ಅವನು ಕಣ್ಣುತೆರೆದು ಅವರನ್ನೆಲ್ಲಾ ಸುಟ್ಟನು. ಆ ವಂಶದಲ್ಲಿ ಹುಟ್ಟಿದ ಭಗೀರಥನು ಶಿವನನ್ನು ಕುರಿತು ತಪಸ್ಸು ಮಾಡಿ ಗಂಗೆಯನ್ನು ಭೂಲೋಕಕ್ಕೆ ಹರಿಸಿದನು.[೭೧] ಇಲ್ಲಿ ಋಷಿಯು ಕೈಮುಗಿದು ಮೈಬಣ್ಣ ಗೋದಿಗೆಂಪು ಬಳಸಲಾಗಿದೆ. ಕೆಂಪು, ಹಸಿರು, ವರ್ಣದ ಪಂಚೆಯನ್ನು ಬಿಡಿಸಲಾಗಿದೆ. ಶಿವನು ನೀಲಿವರ್ಣ, ಚರ್ಮವನ್ನು ಕೇಸರಿ ಬಣ್ಣದಲ್ಲಿ ಮೂಡಿದೆ. ಆಯುಧಗಳಿಂದ ಶಿವನು ಮೇಲಕ್ಕೆ ಮುಖಮಾಡಿ ನಿಂತಿದ್ದಾನೆ. ಆಕಾಶದಲ್ಲಿ ಭಗೀರಥನು ಗಂಗೆಯನ್ನು ಭೂಮಿಗೆ ಹರಿಸಿದ್ದು ಬಹಳ ಸೂಕ್ಷ್ಮವಾಗಿ ಮೂಡಿಬಂದಿದೆ. ಪಕ್ಕದಲ್ಲಿ ಪಾರ್ವತಿಯು ಗುಲಾಬಿವರ್ಣದ ಸೀರೆ ಕಿರೀಟ, ಬಿಳಿವರ್ಣದ ಆಕಳು ಗಂಗೆಯನ್ನು ದಿಟ್ಟಿಸಿನೋಡುತ್ತಿರುವದು, ಹಾಗೆ ಇದು ಸಹ ಕಮಾನಿನಲ್ಲಿ ರಚನೆಯಾಗಿದೆ. ತಿಳಿಗುಲಾಬಿಯ ವರ್ಣ ಶಿವನಹಿಂದೆ ಬಳಸಿ ಶಿವನು ಮುಂದೆ ಬರುವಹಾಗೆ ಮಾಡಿದ್ದಾನೆ.

ಮೂರನೆಯದಾಗಿ ಶ್ರೀರಾಮ ಪಟ್ಟಾಭಿಷೇಕ ಮೂಡಿಬಂದಿದೆ. ಇಲ್ಲಿ ಪರಂಪರಾಗತವಾಗಿ ದೊರೆತ ದಿವ್ಯ ಕಿರೀಟ ಚಿನ್ನ ಮತ್ತು ರತ್ನಗಳಿಂದ ಕೂಡಿದ ಈ ಕಿರೀಟ ಅನೇಕ ರಾಜಾದೀರಾಜರು ಧರಿಸಿದ ಕಿರೀಟ ಅಂಥಹ ಮಹಾನ್ ಕಿರೀಟವನ್ನು ವಸಿಷ್ಠರು ರಾಮನ ತಲೆಯ ಮೇಲೆ ಇಟ್ಟರು[೭೨] ಈ ದೃಶ್ಯದಲ್ಲಿ ಹನುಮಂತನು ಕೆಳಗಡೆ ಕುಳಿತಿದ್ದು ಕಂಡುಬರುತ್ತದೆ. ಶ್ರೀರಾಮನು ಸೀತೆ, ಹನುಮಂತ ಆಭರಣಗಳಿಂದ ಕೂಡಿದ್ದಾರೆ. ಶ್ರೀರಾಮನ ಹಾಗೂ ಹನುಮಂತನ ಮೈಬಣ್ಣ ತಿಳಿನೀಲಿ ವರ್ಣದಲ್ಲಿ ಮೂಡಿಬಂದಿದೆ. ಸೀತೆಯು ಗೋದಿಗೆಂಪು ವರ್ಣದಲ್ಲಿ ರಚಿತಳಾಗಿದ್ದಾಳೆ. ಹಸಿರುಸೀರೆ, ತೊಟ್ಟು ಇವಳು ಅಭಯ ಹಸ್ತವನ್ನು ತೋರಿದ್ದಾಳೇ. ಶ್ರೀರಾಮನು ಕೇಸರಿ ವರ್ಣದ ಪಂಚೆತೊಟ್ಟು ಬಂಗಾರದ ಪೀಠದ ಮೇಲೆ ಕುಳಿತಿರುವಹಾಗಿದೆ. ಸುಂದರ ವಿನ್ಯಾಸಗಳಿಂದ ಕೂಡಿದ ಈ ಪೀಠ ತುಂಬಾ ಎತ್ತರವಾಗಿದೆ. ಹಿನ್ನೆಲೆಯಲ್ಲಿ ಜಾಂಬಳಿ ವರ್ಣದಿಂದ ಕಮಾನು ರಚನೆಯಾಗಿದೆ. ರಾಮನು ಹನುಮಂತನಿಗೆ ವರಹಸ್ತವಾಗಿರುವುದು ಕಂಡುಬರುತ್ತದೆ. ಹನುಮಾನ ಕಾಲಕೆಳಗೆ ಕೆಂಪು ಬಣ್ಣದ ಚೌಕಾಕಾರಗಳು ಮೂಡಿವೆ. ಸುಂದರವಾದ ವರ್ಣಸಂಯೋಜನೆಯಿಂದ ಕೂಡಿದ ಈ ಚಿತ್ರವು ನೈಜ ಶೈಲಿಯಲ್ಲಿದೆ.

ನಾಲ್ಕನೆಯದಾಗಿ ಕುರುಕ್ಷೇತ್ರಯುದ್ಧ ಮಹಾಭಾರತದಿಂದ ಪ್ರಸಿದ್ಧವಾಗಿರುವ ಸ್ಥಳವಾಗಿದೆ. ಬಹಳ ವರ್ಷಗಳ ಹಿಂದೆ ಕುರುಕ್ಷೇತ್ರದಲ್ಲಿ ಶಮಂತ ಪಂಚಕವೆಂಬ ಹೆಸರಿತ್ತು. ಮುಂದೆ ಕುರು ಇಲ್ಲಿ ತಪಸ್ಸು ಮಾಡಿ ಪವಿತ್ರಗೊಳಿಸಿದ್ದರಿಂದ ಈ ಸ್ಥಳಕ್ಕೆ ಕುರುಕ್ಷೇತ್ರವೆಂದು ಹೆಸರಾಯಿತು.[೭೩] ಈ ಕೃತಿಯಲ್ಲಿ ಕೌರವರಿಗೆ ಪಾಂಡವರಿಗೆ ಯುದ್ಧವಾಯಿತು ಮತ್ತು ರಥದ ಮೇಲೆ ಕುಳಿತು ಬಾನ ಬಿಡುತ್ತಿರುವುದು ಮೇಲ್ಭಾಗದಲ್ಲಿ ಗಧೆಯನ್ನು ಎತ್ತಿಕೊಂಡು ಬರುತ್ತಿರುವುದು ದೂರದಲ್ಲಿ ಸೈನಿಕರು ಯುದ್ಧದಲ್ಲಿ ನಿರತರಾಗಿದ್ದಾರೆ. ರಥವು ಬಂಗಾರ ವರ್ಣದಲ್ಲಿ ಕಂಡುಬಂದಿದೆ. ಇಲ್ಲಿ ಸಹ ಆಭರಣಗಳು, ನೀಲಿ ಆಕಾಶ ರಚನೆಯಾಗಿದೆ. ಒಟ್ಟು ನಾಲ್ಕು ಭಾಗಗಳಲ್ಲಿ ಚಿತ್ರಗಳು ಮೂಡಿಬಂದು ಹೊರ ಮೈ ರೇಖೆಯು ಕೆಂಪು, ಬಿಳಿ ಮತ್ತು ನೀಲಿ ಎಲೆಗಳು, ಬಿಳಿ ಕೆಂಪು ಮಿಶ್ರಿತ ಹಳದಿ ಹೂಗಳು ಕಂಡುಬಂದಿವೆ.

---

೭೧. ತ.ಸು. ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೨೯೪ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

೭೨. ಮತ್ತೂರು ಕೃಷ್ಣಮೂರ್ತಿ: ಶ್ರೀರಾಮಕಥಾಸಾರ ಪು. ೪೪೮ ಗುರುಗುಹ ಗಾನ ನಿಲಯ ಶ್ರೀರಾಮಪುರ ಬೆಂಗಳೂರು ೧೯೮೦

೭೩. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೧ ಪು. ೪೫೨ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

### ೪೪. ಗ್ರಾಮದೇವತೆ ದುರ್ಗಮ್ಮ ದೇವಿಯ ಪ್ರಭಾವಳಿಯ ಕೆಳಪಟ್ಟಿಕೆ

ಈ ಕಲಾಕೃತಿಯಲ್ಲಿ ಒಟ್ಟು ನಾಲ್ಕು ಭಾಗಮಾಡಿಕೊಂಡು ಚಿತ್ರಗಳನ್ನು ರಚಿಸಲಾಗಿದೆ. ಮೊದಲನೆಯದಾಗಿ ಕೃಷ್ಣನ ವಿಶ್ವಸ್ವರೂಪ, ಲಕ್ಷ್ಮೀ, ಭೀಮದುರ್ಯೋಧನರ ಯುದ್ಧ, ಸರಸ್ವತಿಯ ಚಿತ್ರಗಳಾಗಿವೆ. ಪ್ರಥಮವಾಗಿ ಕೃಷ್ಣನ ವಿಶ್ವಸ್ವರೂಪದಲ್ಲಿ ಅರ್ಜುನ, ಕೃಷ್ಣ ಆಭರಣಗಳಿಂದ ಅಲಂಕೃತರಾಗಿದ್ದಾರೆ, ನೀಲಿವರ್ಣದ ಹಿನ್ನೆಲೆಯಲ್ಲಿ ಈ ಚಿತ್ರ ಮೂಡಿಬಂದಿದೆ. ಎರಡನೆಯದಾಗಿ ಲಕ್ಷ್ಮೀ ಇವಳು ಹಿಂದೂ ಪುರಾಣದ ಪದ್ಮದೇವತೆ ವಿಷ್ಣುವಿನ ಪತ್ನಿ ಈಕೆಯನ್ನು ಶ್ರೀ ಎಂದೂ ಲಕ್ಷ್ಮೀ ಎಂದೂ ಕರೆಯುತ್ತಾರೆ. ಕಮಲದಲ್ಲಿ ಹುಟ್ಟಿದವಳು ಕಮಲ ವರ್ಣದವಳು ಕಮಲದಂತ ತೊಡೆಯವಳು ಕಮಲದಂತ ಕಣ್ಣುಳ್ಳವಳು ಕಮಲದ ಮೇಲೆ ನಿಂತಿರುವಳು[೨೪] ಎಂದು ಕಲ್ಪನೆ ಇಲ್ಲಿ ಹಸಿರು ಸೀರೆಯುಟ್ಟು ಕಿರೀಟಧಾರಿಯಾದ ಇವಳು ಗುಲಾಬಿ ವರ್ಣದ ಕಮಲದ ಹೂವಿನಲ್ಲಿ ಆಸೀನಳಾಗಿದ್ದಾಳೆ ಹಸಿರು ಗಿಡಮರಗಳು, ನೀಲಿ ಬಿಳಿ, ವರ್ಣದ ಆಕಾಶ ಬೂದುವರ್ಣದ ಆನೆಯು ಸೊಂಡಿಲನ್ನು ಮೇಲೆತ್ತಿ ನಿಂತಿವೆ. ನಾಲ್ಕು ಕೈ ಹೊಂದಿದ ಲಕ್ಷ್ಮೀಯು ಅಭಯ ಹಸ್ತತೋರಿದ್ದಾಳೆ. ಮೇಲಿನ ಎರಡು ಕೈಗಳಲ್ಲಿ ಕಮಲದ ಪುಷ್ಪ ಹಿಡಿದಿದ್ದಾಳೆ. ಕೆಳಭಾಗದಲ್ಲಿ ನೀಲಿವರ್ಣದ ನೀರು ಕಂಡುಬರುತ್ತದೆ. ಮೂರನೆಯದಾಗಿ ಭೀಮ ದುರ್ಯೋಧನರ ಗಧಾ ಯುದ್ಧವು ರಚನೆಯಾಗಿದೆ ಸುಂದರವಾವ ನಿಸರ್ಗದೊಂದಿಗೆ ಈ ಕೃತಿಯೂ ಮೂಡಿಬಂದಿದೆ. ಗಿಡಮರಗಳು ಹಸಿರು ಹಾಸಿಗೆ ಆಕಾರದ ಹುಲ್ಲು ಬೆಳೆದಿರುವುದು ಕಾಣಬಹುದು. ನೀಲಿ ಆಕಾಶ ಕಿರೀಟಧಾರಿಯಾಗಿದ್ದಾರೆ. ನಾಲ್ಕನೆಯದಾಗಿ ಸರಸ್ವತಿ ಈಕೆ ಭೂಮಿಯನ್ನೇ ಪತ್ರವನ್ನಾಗಿ ಮಾಡಿಕೊಂಡು ಸಪ್ತಸಾಗರಗಳನ್ನು ಮಸಿಯಾಗಿಟ್ಟುಕೊಂಡು ಶಿವನ ಮಹಿಮೆಯನ್ನು ಬರೆಯ ಹೊರಟಳು. ಬ್ರಹ್ಮ ಕಲ್ಪಕೋಟಿಗಳ ಕಾಲ ಬರೆದರೂ ಮುಗಿಯದಿರಲು ಆಕೆ ನಾಚುವಳು.[೨೫] ಗುಲಾಬಿ ವರ್ಣದಿಂದ ರಚಿತವಾದ ಕಮಲದಲ್ಲಿ ಆಶೀನಳಾದ ಈಕೆ ಗಿಳಿಹಸಿರು ಬಣ್ಣದ ಸೀರೆಯನ್ನುಟ್ಟು ಕೈಯಲ್ಲಿ ವೀಣೆಯನ್ನು ಹೊಂದಿದ್ದಾಳೆ. ಅಲಂಕೃತ ಆಭರಣ ಹೊಂದಿದ ದೇವಿಯು ತಲೆಯಹಿಂದೆ ಕೆಂಪುವರ್ಣದ ವೃತ್ತಾಕಾರವಿದೆ. ಸರಸ್ವತಿಯು ನಾಲ್ಕು ಕೈಗಳನ್ನು ಹೊಂದಿದ್ದಾಳೆ. ಬೆಟ್ಟಗಳು ಕಪ್ಪುವರ್ಣ ನೀಲಿಆಕಾಶ ಹಸಿರು ಮರಗಳು, ನೀಲಿವರ್ಣದ ನೀರಿನ ಮೇಲೆ ತಿಳಿಗುಲಾಬಿ ವರ್ಣದ ಕಮಲದ ಪುಷ್ಪದ ಮೇಲೆ ಕುಳಿತಿರುವ ಚಿತ್ರವಿದೆ.

ಒಟ್ಟು ನಾಲ್ಕು ಚಿತ್ರಗಳು ರಚನೆಯಾಗಿದ್ದು ಹಿನ್ನೆಲೆಯಲ್ಲಿ ಹಳದಿ ವರ್ಣವನ್ನು ಬಳಸಲಾಗಿದೆ. ಸುಂದರವಾದ ವರ್ಣಗಳಿಂದ ಹೊರ ರೇಖೆಯನ್ನು ಬರೆಯಲಾಗಿದೆ. ನೀಲಿ ವರ್ಣದ ಪಟ್ಟಿಕೆ ಚಿತ್ರದ ಹೊರಭಾಗದಲ್ಲಿ ರಚನೆಯಾಗಿ ಅದರಲ್ಲಿ ಹೂಬಳ್ಳಿಗಳು ರಚನೆಯಾಗಿವೆ. ಕೆಂಪು ಹಳದಿ ವರ್ಣದ ರೇಖೆಗಳು ಕಂಡುಬರುತ್ತವೆ. ಈ ಎಲ್ಲಾ ಚಿತ್ರಗಳು ನೈಜ ಶೈಲಿಯಲ್ಲಿವೆ.

### ೪೫. ಗ್ರಾಮದೇವತೆ ದುರ್ಗಮ್ಮ ದೇವಿಯ ಪ್ರಭಾವಳಿಯ ಕೆಳಪಟ್ಟಿಕೆ

ಈ ಕಲಾಕೃತಿಯಲ್ಲಿ ಹೆಚ್ಚಾಗಿ ಹಳದಿ ಹಿನ್ನೆಲೆಯಲ್ಲಿ ರಚನೆಗೊಂಡಿರುವುದು ಕಂಡುಬರುತ್ತದೆ. ಇಲ್ಲಿ ಒಟ್ಟು ಎಂಟು ಚಿತ್ರಗಳು ರಚನೆಯಾಗಿದ್ದು ನಾಲ್ಕು ಭಾಗಗಳಲ್ಲಿ ಕಂಡುಬರುತ್ತವೆ. ಇಲ್ಲಿ ದ್ವಾರಪಾಲಕ, ವಿಷ್ಣು, ಪರಮೇಶ್ವರ, ನರ್ತಕಿ, ಸೇವಕಿಯರ ಚಿತ್ರಗಳಿವೆ. ಮೊದಲನೆಯದಾಗಿ ದ್ವಾರಪಾಲಕರು ದೇವಾಲಯದ ಬಾಗಿಲುಗಳಲ್ಲಿ ಕಂಡುಬರುತ್ತಾರೆ. ಇಲ್ಲಿ ಕಂಡು ಬರುವ ಚಿತ್ರವು ಅಸ್ಪಷ್ಟವಾಗಿರುದರಿಂದ ವಿಶ್ಲೇಷಣೆ ಆಳಕ್ಕೆ ಇಳಿಯುವುದು ಕಷ್ಟವಾಗಿದೆ. ಎರಡನೆಯದಾಗಿ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದು ತಿಳಿನೀಲಿವರ್ಣದಲ್ಲಿ ರಚನೆಯಾಗಿದ್ದಾನೆ. ಕೈಯಲ್ಲಿ ಆಯುಧಗಳು ಕಂಡುಬರುತ್ತವೆ. ಕಮಲ ಪುಷ್ಪದಲ್ಲಿ ನಿಂತ ವಿಷ್ಣುವಿನ ಹಿಂದೆ ಸಮುದ್ರದಿಂದ ಮೇಲೆದ್ದ ಸರ್ಪವು ವಿಷ್ಣುವಿನ ಕಿರೀಟದ ಮೇಲೆ ಬಂದಿರುವುದು ಅಲ್ಲದೆ ಐದು ಮುಖವನ್ನು ಹೊಂದಿದೆ ಬೂದುವರ್ಣದಲ್ಲಿ ಮೂಡಿಬಂದಿದೆ. ಹಿನ್ನೆಲೆಯಾಗಿ ಗುಲಾಬಿವರ್ಣ ಚಿಕ್ಕ ಚಿಕ್ಕ ಹೂಗಳು ಮರಗಳು ಮೂಡಿವೆ. ಮೂರನೆಯಾದಾಗಿ ಪರಮೇಶ್ವರ ಈ ಚಿತ್ರವು ಸಹಿತ ಗಲಾಬಿ ವರ್ಣದ ಹಿನ್ನೆಲೆಯಲ್ಲಿ ರಚನೆಯಾಗಿದೆ. ಪರಮೇಶ್ವರನ್ನು ನೀಲಿವರ್ಣದಲ್ಲಿ

---

೨೪. ಡಾ ಚಂದ್ರಶೇಖರ ಕಂಬಾರ : ಕನ್ನಡ ಜಾನಪದ ವಿಶ್ವಕೋಶ ಸಂಪುಟ ೦೨ ಪು. ೧೨೫೬ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೨೫. ತ.ಸು.ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೪೮೧ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ರಚಿಸಿದ್ದಾರೆ. ಸೊಂಟದ ಭಾಗಕ್ಕೆ ಹುಲಿಚರ್ಮ ಸುತ್ತಿದ್ದು ಹುಲಿಯ ಮುಖವು ಸ್ಪಷ್ಟವಾಗಿ ಕಾಣುತ್ತದೆ. ಕೊರಳಲ್ಲಿ ಕೇಸರಿಬಣ್ಣದ ನಾಗರಹಾವು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಹಿನ್ನಲೆಯಲ್ಲಿ ತೆಳುಗುಲಾಬಿಯ ವರ್ಣದಿಂದ ಆಕಳು ಮೂಡಿಬಂದಿದೆ. ಕಾಲು ಕೆಳಭಾಗದಲ್ಲಿ ನೀಲಿವರ್ಣವನ್ನು ಬಳಸಿದ್ದಾರೆ. ನಾಲ್ಕನೆಯದಾಗಿ ದ್ವಾರಪಾಲಕರ ಚಿತ್ರವಿದು ಕೈಯಲ್ಲಿ ಆಯುಧಗಳನ್ನು ಹಿಡಿದು ಒಂದು ಕಾಲು ಸ್ವಲ್ಪ ಮೇಲಕ್ಕೆ ಮಡಚಿ ನಿಂತಿರುವ ಭಂಗಿಯಲ್ಲಿದೆ. ಹಳದಿ ವರ್ಣದ ಪಂಚೆ, ಆಭರಣಗಳನ್ನು ಧರಸಿ ಪೀಠದ ಮೇಲೆ ನಿಂತಿದ್ದಾನೆ ಬುಜಕೀರ್ತಿಯಿಂದ ಕಾಲಿನವರೆಗೆ ಕೆಂಪು ಬಣ್ಣದ ವಸ್ತ್ರವು ಇಳೆ ಬಿದ್ದಿರುವುದು ಕಾಣುತ್ತದೆ. ಹಿಂಭಾಗದಲ್ಲಿ ಗುಲಾಬಿ ತಿಳಿಗುಲಾಬಿ ಬಿಳಿವರ್ಣದಿಂದ ವೃತ್ತಕಾರ ರಚಿಸಿದ್ದಾರೆ. ಐದನೆಯದಾಗಿ ನರ್ತಕಿಯ ಚಿತ್ರದಲ್ಲಿ  ಆಭರಣಗಳೇ ಪ್ರಮುಖವಾಗಿವೆ .ಬಲಗಾಲನ್ನು ಡೊಂಕಿಸಿ ತುದಿಬೆರಳನ್ನು ಪೀಠಕ್ಕೆ ಊರಿದ್ದಾಳೆ ಗೋದಿ ಬಣ್ಣದಿಂದ ಕೂಡಿದ ಮೈಬಣ್ಣ ಕೆಂಪು ಬಟ್ಟೆಧರಿಸಿದ್ದಾಳೆ ಸ್ತನಗಳಿಗೆ ಪ್ರತ್ಯೇಕ ಕೆಂಪು ಬಟ್ಟೆಯನ್ನು ತೊಡಿಸಲಾಗಿದೆ. ಕೇಶದಿಂದ ತಿಳಿ ಗಿಳಿಹಸಿರು ಬಣ್ಣದ ಬಟ್ಟೆಯು ಮೊಣಕಾಲವರೆಗೂ ಕೆಳಗೆ ಬಿದ್ದಿರುವುದು ಕಂಡುಬರುತ್ತದೆ. ನಂತರ ಸೇವಕಿಯರು ಕೈಯಲ್ಲಿ ಚಾಮರ ಹಿಡಿದು ಬೀಸುವುದು ಆಕಾಶದಲ್ಲಿರುವ ಹಾಗೇ ಕಾಣುತ್ತದೆ. ಇಲ್ಲಿಯು ಸ್ತನಗಳಿಗೆ ಕಪ್ಪು ನೀಲಿವರ್ಣ, ಸೊಂಟದ ಕೆಳಭಾಗದಲ್ಲಿ ತಿಳಿಗುಲಾಬಿ, ಮೇಲಪದರಾಗಿ ಹಸಿರು ಬಟ್ಟೆಯನ್ನು ಚಿತ್ರಿಸಿದ್ದಾರೆ. ಆಕಾಶದ ಕಲ್ಪನೆ ಮೂಡುವ ಹಾಗೇ ಕಲಾವಿದ ಚಿತ್ರಿಸಿದ್ದಾರೆ.

ನಾಲ್ಕು ಭಾಗಗಳಿಗೂ ಹೊರರೇಖೆಯನ್ನು ಕೆಂಪು ವರ್ಣದಿಂದ ಅಗಲವಾಗಿ ಎಳೆದು ಅದರಲ್ಲಿ ಚುಕ್ಕೆಗಳು ಮೂಡಿವೆ. ಪಕ್ಕದಲ್ಲಿ ನೀಲಿವರ್ಣದ ಎಲೆ ಹೂಗಳು ಕಂಡುಬರುತ್ತವೆ. ಈ ಎಲ್ಲಾ ಚಿತ್ರಗಳಿಗೂ ಮೂಲವರ್ಣಗಳನ್ನೇ ಬಳಸಿದ್ದಾರೆ.

ಇಂತಹ ಹಲವಾರು ಕಲಾಕೃತಿಗಳನ್ನು ಕಲಘಟಗಿಯ ಕಲಾವಿದರು ಸುಂದರ ವರ್ಣವಿನ್ಯಾಸದೊಂದಿಗೆ ನಿರ್ಮಿಸಿರುವ ಕಲಾವಿದರಾಗಿದ್ದಾರೆ. ಇದಕ್ಕೆ ಕಾರಣ ಕಲಘಟಗಿಯ ತೇವಾಂಶ ಭರಿತ ಉದುರೆಲೆ ಕಾಡು ಮುಳ್ಳುಕಾಡು ಮತ್ತು ಕುರುಚಲು ಕಾಡುಗಳು ಮುಖ್ಯವಾಗಿವೇ ತೇವತುಂಬಿದ ಉದುರೆಲೆ ಕಾಡುಗಳು ಮಲೆನಾಡಿಗೆ ಸೀಮಿತ ಈ ಕಾಡುಗಳಲ್ಲಿಯ ಮುಖ್ಯವಾದ ಮರ ತೇಗ, ಬೀಟೆ, ಹೊನ್ನೆ ಮತ್ತು ನಂದಿ,ಸಾಗುವಾನಿ ಮುಂತಾದಮರಗಳು ಇಲ್ಲಿ ನೈಸರ್ಗಿಕವಾಗಿ ಬೆಳೆಯುತ್ತವೆ. ಈ ಅರಣ್ಯಗಳು ಮರಮಟ್ಟಿನ ಉತ್ಪತ್ತಿಗೆ ಸೌದೆ ಉತ್ಪತ್ತಿಗೆ ಮತ್ತು ಆಡಳಿತ್ಮಾತ್ಮಕ ದೃಷ್ಟಿಯಿಂದಲೂ ಮಹತ್ವದಿವೆ. ಕುರುಚಲು ಮತ್ತು ಮುಳ್ಳಿನ ಅರಣ್ಯಗಳ ಕ್ಷೇತ್ರವು ತಾಲೂಕಿನಲ್ಲಿ ಹೆಚ್ಚಿಗೆ ಇದ್ದು.[೭೬] ಮುಖ್ಯವಾಗಿ ಕಲಘಟಗಿಯ ಪ್ರದೇಶದಲ್ಲಿ ಸಾಗುವಾನಿ, ಹೊನ್ನೆ, ನಂದಿ, ಶ್ರೀಗಂಧ ಮುಂತಾದ ಮರಗಳು ಹೇರಳವಾಗಿ ಬೆಳೆಯುತ್ತವೆ. ಇಂತಹ ಹಲವಾರು ಮರಗಳಲ್ಲಿ ಕಲಘಟಗಿಯ ಕಲಾವಿದರು ತಾಳಿಕೆ ಬಾಳಿಕೆ ದೃಷ್ಟಿಯಿಂದ ಸಾಗುವಾನಿ ಮರದ ಕಟ್ಟಿಗೆಯನ್ನೇ ಬಳಸಿ ತೊಟ್ಟಿಲು ದೇವಿಯ ಮೂರ್ತಿಶಿಲ್ಪ, ತೂಗುಯ್ಯಾಲೆ, ಟೀಪಾಯಿ, ಮಂಚ, ಕಾಮರತಿ, ಆಟಿಕೆ ಗೊಂಬೆಗಳು ಇನ್ನೂ ಮುಂತಾದ ಪೀಠೋಪಕರಣಗಳಿಗೆ ಬಳಸುತ್ತಾರೆ. ಹೀಗೆ ಬಳಸಿದ ಮರದ ತುಂಡಿನ ಮೇಲೆ ಸುಂದರ ವರ್ಣಲೇಪನ ಮಾಡುವುದು ಕಲಘಟಗಿಯ ಕಲೆಯ ವೈಶಿಷ್ಟ್ಯವಾಗಿದೆ.

*****

೭೬. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸಟಿಯರ್ ಧಾರವಾಡ ಜಿಲ್ಲೆ, ಪು. ೨೪ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫



೪೩. ಗ್ರಾಮದೇವತೆ ದುರ್ಗಮ್ಮ ದೇವಿಯ ಪ್ರಭಾವಳಿಯ ಕೆಳ ಚಿತ್ರ ಪಟ್ಟಿಕೆ



೪೪. ಗ್ರಾಮದೇವತೆ ದುರ್ಗಮ್ಮ ದೇವಿಯ ಪ್ರಭಾವಳಿಯ ಕೆಳ ಚಿತ್ರ ಪಟ್ಟಿಕೆ

ಕಲಘಟಗಿಯ ಸಂಕೀರ್ಣ ಮಾಧ್ಯಮದ ಕಲಾಕೃತಿಗಳಲ್ಲಿ ಆಟಿಕೆಯ ವಸ್ತುಗಳು ಮತ್ತು ಬೃಹತ್ತಾದ ಬಿದಿರು ಬುಟ್ಟಿಯನ್ನು ಹೆಣೆದು ಅದರ ಮೇಲೆ ಜೇಡಿಮಣ್ಣಿನ ಲೇಪನ ಕೊಟ್ಟು ನಂತರ ತೇಳುವಾದ ಬಟ್ಟೆಯನ್ನು ಹೋದಿಸಿ ನಂತರ ಜಾಲಿಯ ಅಂಟನ್ನು ನೀರಿನೊಂದಿಗೆ ಮಿಶ್ರಣ ಲೇಪಿಸಿ ಚಿತ್ರ ಬಿಡಿಸಲಾಗುತ್ತದೆ. ಇಲ್ಲಿ ದೇವಿಯ ಮುಖಗಳನ್ನು, ರಾಕ್ಷಸರ ಮುಖಗಳನ್ನು ಹಾಗೇ ಕಟ್ಟಿಗೆಯ ಪುಡಿಯಿಂದ ಚಿಕ್ಕ ಚಿಕ್ಕ ಗೊಂಬೆಗಳನ್ನು ತಯಾರಿಸಲಾಗುತ್ತದೆ. ಗೊಂಬೆಗಳ ತಯಾರಿಕೆ ಭಾರತದ ಅತ್ಯಂತ ಪುರಾತನವಾದ ಕಲೆ ನಾಗರಿಕತೆಯ ಉಗಮದಿಂದಲೂ ಅನೇಕ ಕುತೂಹಲಕಾರಿಯಾದ ಗೊಂಬೆಗಳನ್ನು ಕಾಣಬಹುದು.ಚರಿತ್ರೆಯ ಪೂರ್ವಯುಗವಾದ ಹರಪ್ಪಾ ಮೆಹೆಂಜೋದಾರೋಗಳ ಸಂಸ್ಕೃತಿಯ ಸಮಯದಲ್ಲಿ ನಗರ ನಾಗರಿಕತೆಯ ಅಸ್ತಿತ್ವವನ್ನು ಇತಿಹಾಸಕಾರರು ಸಂಶೋಧಿಸಿದ್ದಾರೆ. ಈ ಸಂಸ್ಕೃತಿಯಲ್ಲಿ ಗೊಂಬೆಗಳಿಗೆ ಒಂದು ಮಿಗಿಲಾದ ಸ್ಥಾನವಿದ್ದುದನ್ನು ಕಾಣಬಹುದು, ಹರಪ್ಪಾ ಮೆಹೆಂಜೋದಾರೊಗಳ ಸಂಶೋಧನೆಯಲ್ಲಿ ಹಾಸಿಗೆಯಲ್ಲಿ ಮಲಗಿಕೊಂಡ ಮಗುವೊಂದನ್ನು ಆರೈಸುತ್ತಿರುವ ಸ್ತ್ರೀಮೂರ್ತಿ ತುಂಬಾ ಕುತೂಹಲ ಮತ್ತು ಕರುಣಾಜನಕ ಭಾವವನ್ನು ಸ್ಫುರಿಸುತ್ತದೆ. ಒಂದು ವಿಧವಾದ ಒಳಲಂಗವನ್ನು ಹಾಕಲಾಗಿದೆ. ಒಂದು ವಿಚಿತ್ರ ಆಕಾರದ ಟೋಪಿಯನ್ನು ಆ ಮೂರ್ತಿಗೆ ಹಾಕಲಾಗಿದ್ದು ಹಾಗೇ ಆಟದ ಪದಾರ್ಥಗಳ ಸಮೂಹದಲ್ಲಿ ಪ್ರಾಣಿಗಳು ಕುತೂಕಾರಿಯಾಗಿಯೇ ಇವೆ. ತಲೆಯನ್ನು ಅತ್ತಿಂದಿತ್ತ ಅಲ್ಲಾಡಿಸಬಲ್ಲ ಗೂಳಿಗಳು ದೊರತ್ತಿವೆ. ಈ ಬಗೆಯ ಅಲ್ಲಾಡುವ ಅನೇಕ ತಲೆಗಳು ಈ ಸಂಶೋಧನೆಯಿಂದ ದೊರೆಕಿವೆ ಮಣ್ಣಿನ ಚಕ್ರಗಳು ಶಂಖಗಳು, ಬಂಡಿಗಳು, ಅತ್ಯಂತ ಪುರಾತನವಾದ ಆಟದ ವಸ್ತುಗಳು ಇವೆಲ್ಲವೂ ಆಟದ ಸಮಾನುಗಳ ಕೈಗಾರಿಕಾ ಕೇಂದ್ರವಾಗಿದ್ದ ಚಾನ್ಹುದಾರೋದಲ್ಲಿ ದೊರೆತಿವೆ.[೧೧] ಇಂತಹ ಹಲವಾರು ಹಿನ್ನೆಲೆಯಲ್ಲಿ ಬೆಳೆದು ಬಂದ ಗೊಂಬೆಯ ತಯಾರಿಕೆಯು ಇವತ್ತಿನವರೆಗೂ ಕಾಣಬಹುದಾಗಿದೆ.

ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪಗಳು ತುಂಬಾ ವೈವಿಧ್ಯಮಯವಾಗಿದ್ದು ಗಮನ ಸೆಳೆಯುತ್ತವೆ. ಈ ವೈವಿಧ್ಯಮಯ ಶಿಲ್ಪಗಳ ರಚನೆಗೆ ಬಳಸುವ ಮಾಧ್ಯಮಗಳು, ರಚನಾಕ್ರಮ, ಎಲ್ಲವೂ ವೈವಿಧ್ಯಮಯವಾಗಿರುತ್ತವೆ. ಮಣ್ಣು, ಕಟ್ಟಿಗೆ, ಕಲ್ಲು, ಲೋಹ ಮಾಧ್ಯಮ ಶಿಲ್ಪಗಳಂತೆ ಇಲ್ಲಿ ಕೇವಲ ಕೆತ್ತುವುದೋ, ಮೆತ್ತೊವುದೋ ಇಲ್ಲವೇ ಎರಕ ಹೊಯ್ಯುವುದು ಮಾತ್ರವೇ ಇರುವುದಿಲ್ಲ. ಸಂಕೀರ್ಣ ಮಾಧ್ಯಮದಲ್ಲಿ ಕೆತ್ತುವುದು, ಮೆತ್ತುವುದು ಒತ್ತಿ ರೂಪಿಸುವುದು, ಹೆಣೆಯುವುದು, ಜೋಡಿಸುವುದು ಮುಂತಾದ ಹಲವಾರು ವಿವಿಧ ರಚನಾಕ್ರಮಗಳು ಇರುತ್ತವೆ. ಅಲ್ಲದೆ ಸಂಕೀರ್ಣ ಮಾಧ್ಯಮಗಳಲ್ಲಿ ಅತ್ಯಂತ ಚಿಕ್ಕ ಪ್ರಮಾಣದ ಶಿಲ್ಪಗಳಿಂದ ಹಿಡಿದು ಅತ್ಯಂತ ದೊಡ್ಡ ಆಕಾರದ ಶಿಲ್ಪಗಳಲ್ಲೂ ರಚನೆಗೊಳ್ಳುವುದುಂಟು ಈ ಶಿಲ್ಪಗಳನ್ನು ಅಶಾಶ್ವತ ಮಾಧ್ಯಮದ ಶಿಲ್ಪಗಳೆಂದೂ ಕರೆಯಬಹುದು, ನಮ್ಮ ಜನಪದರು ಆಚರಿಸುವ ಹಬ್ಬ ಹರಿದಿನಗಳೂ ಎಷ್ಟೊಂದು ವೈವಿಧ್ಯಮಯವಾಗಿವೆಯೋ ಈ ಶಿಲ್ಪಗಳೂ ಹಾಗೇ ವೈವಿಧ್ಯಮಯವಾಗಿ ರಚನೆಗೊಂಡು ಗಮನ ಸೆಳೆಯುತ್ತವೆ.[೧೨]

---

೧೧. ಪಿ.ಆರ್.ತಿಪ್ಪೇಸ್ವಾಮಿ (ಪ್ರ.ಸಂ) : ಶಿಲ್ಪಕಲಾ ಪ್ರಪಂಚ ಪು. ೯೫ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೪
೧೨. ಡಾ.ಶಿವಾನಂದ. ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೨೫೮ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

ಹೋಳಿ ಹಬ್ಬದಲ್ಲಿ ರಚನೆಗೊಳ್ಳುವ ಕಾಮ, ಬೂದಗಾಮ, ದೀಪಾವಳಿಯಲ್ಲಿ ರಚಿಸಲ್ಪಡುವ ಸೆಗಣಿಯ ಪಾಂಡವರು, ಹೊಲದಲ್ಲಿಯ ಬೆದರುಗೊಂಬೆ, ತೊಗಲುಗೊಂಬೆ, ಹಿಟ್ಟಿನ ಗೊಂಬೆಗಳು ಅರಳೆಗೊಂಬೆ ಮತ್ತು ಬಟ್ಟೆಯ ಅಲಂಕಾರಿಕ ಶಿಲ್ಪಗಳು, ಇನ್ನೂ ಮುಂತಾದವು ಸಂಕೀರ್ಣ ಮಾಧ್ಯಮದ ಶಿಲ್ಪಗಳಾಗಿ ಗಮನ ಸೆಳೆಯುತ್ತವೆ. ಈ ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪಗಳು ಸೌಂದರ್ಯ, ಧರ್ಮ, ಹಾಗೂ ವೃತ್ತಿಯ ನೆಲೆಯಲ್ಲಿ ಬೆಳೆದು ಬಂದವುಗಳಾಗಿವೆ.[೩] ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ಕಲಘಟಗಿಯಲ್ಲಿ ಹೆಚ್ಚಾಗಿ ಬಿದಿರುಬುಟ್ಟಿಯ ಮೇಲೆ ಮನುಷ್ಯನ ರೂಪದ ಹಾಗೇ ಜೇಡಿಮಣ್ಣನ್ನು ಮೆತ್ತಿ ನಂತರ ಬಟ್ಟೆಯನ್ನು ಹೊದಿಸಿ ಆಕಾರಕೊಟ್ಟು ಚಿತ್ರಬರೆಯಲಾಗುತ್ತದೆ.

**೧. ಗಣಪತಿ**

ಮೂಲದಲ್ಲಿ ಜನಪದರ ದೈವವಾದ ಗಣಪತಿಯನ್ನು ಕ್ರಮೇಣ ಶಿಷ್ಟರು ತಮ್ಮವನನ್ನಾಗಿ ಮಾಡಿಕೊಂಡರು. ಆದರೆ ಮತ್ತೆ ಜನಪದರು ಅವನನ್ನು ತಮ್ಮವನನ್ನಾಗಿ ಮಾಡಿಕೊಂಡು ಮನೆಯಲ್ಲಿಟ್ಟುಕೊಂಡು ಪೂಜಿಸುವುದನ್ನು ಇಂದಿಗೂ ಹಳ್ಳಿಗಳಲ್ಲಿ ಕಾಣುತ್ತೇವೆ.

ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನಲ್ಲಿ ಬೆನಕನಹಳ್ಳಿ (ವಿನಾಯಕಬೆನಕ) ಎಂಬ ಊರಿದೆ. ಅವನ ಮೂರ್ತಿಯನ್ನು ಬೆಳ್ಳಿ ತಾಮ್ರದಿಂದ ತಮಗೆ ಬೇಕಾದ ಆಕಾರದಲ್ಲಿ ಮಾಡಿಸಿಕೊಳ್ಳುವುರು. ಶಿವ-ಪಾರ್ವತಿಯರ ಮಗನಾದ ಗಣಪತಿಯ ಹೆಸರನ್ನು ಗಂಡುಮಕ್ಕಳಿಗೆ ಗಣಪತಿ, ಗಣೇಶ, ವಿನಾಯಕ ಎಂದು ಇಡುವುದನ್ನು ಕಾಣುತ್ತೇವೆ.[೪] ಈ ಕಲಾಕೃತಿಯಲ್ಲಿರುವ ಗಣೇಶನು ಕಮಲದ ಹೂವಿನ ಮೇಲೆ ನಿಂತಿದ್ದು ಕಂಡುಬರುತ್ತದೆ. ಇಲ್ಲಿ ಗಣಪತಿಯ ನಾಲ್ಕು ಕೈಗಳನ್ನು ಹೊಂದಿದ್ದಾನೆ. ಮೈಬಣ್ಣವು ತಿಳಿಗುಲಾಬಿ ವರ್ಣವನ್ನು ಬಳೆಯಲಾಗಿದೆ. ಹಸಿರು ವಸ್ತ್ರ ,ಹಳದಿ ಪಂಚೆ ಆಭರಣಗಳನ್ನು ಧರಿಸಿದ್ದಾನೆ. ಕಿರೀಟಧಾರಿಯಾದ ಗಣೇಶನ ಹಿಂದೆ ಹಸಿರು ವರ್ಣದ ವೃತ್ತಾಕಾರದ ವೃತ್ತವಿದ್ದು ಮತ್ತೆ ಅದರ ಹಿಂದೆ ಬೃಹತ್ತಾದ ಕೇಸರಿ ವರ್ಣದ ವೃತ್ತವು ಇದು ಥರ್ಮೋಕೋಲ್‌ನಿಂದ ತಯಾರಿಸಿದೆ. ಕಮಲದ ಹೂ ತೆಳುವಾದ ರಟ್ಟನ್ನು ಕತ್ತರಿಸಿ ಅದಕ್ಕೆ ಕಮಲದ ರೂಪವನ್ನುಕೊಟ್ಟು ಕೆಂಪು ಬಣ್ಣ ಬಳೆಯಲಾಗಿದೆ. ಗಣಪತಿಯ ಆಧಾರಕ್ಕೆ ಮಧ್ಯದಲ್ಲಿ ಕಬ್ಬಿಣದ ಬಾರನ್ನು ಹಾಕಿರಬಹುದು. ಹಾಗೇ ಅಕ್ಕ ಪಕ್ಕದಲ್ಲಿಯ ಹಸಿರು ಎಲೆಯನ್ನು ರಟ್ಟಿನಿಂದ ರಚಿಸಿ ವರ್ಣಲೇಪನ ಮಾಡಲಾಗಿದೆ. ನೋಡುವುದಕ್ಕೆ ಈ ಕಲಾಕೃತಿಯು ತೆಳುವಾದ ಮತ್ತು ಮೃದುವಾದ ಕಮಲದ ಮೇಲೆ ಗಣೇಶ ಶಿಲ್ಪ ನಿಲ್ಲುವುದು ಸಾಧ್ಯವೇ ? ಎಂಬ ತೊಡಕು, ಗೊಂದಲ ಉಂಟುಮಾಡುತ್ತದೆ. ಹಿನ್ನೆಲೆಯಲ್ಲಿ ನೀಲಿ ಆಕಾಶ ರಚನೆಯಾಗಿದ್ದು ಕಂಡುಬರುತ್ತದೆ. ಇಲ್ಲಿ ಕಲಾವಿದನ ಕಲ್ಪನಾ ಶಕ್ತಿ, ತುಂಬಾ ಮಹತ್ವದ್ದಾಗಿದ್ದು ಕಂಡುಬರುತ್ತದೆ.

**೨. ನೃತ್ಯಗಾರ್ತಿಯರು**

ಇಲ್ಲಿ ಹೆಚ್ಚಾಗಿ ಕೆಂಪು ಮತ್ತು ಹಸಿರು ವರ್ಣದಲ್ಲಿ ರಚಿತವಾದ ನಾಲ್ಕು ಸ್ತ್ರೀಯರ ನೃತ್ಯ ಶಿಲ್ಪಗಳಿದ್ದು. ಮೈಬಣ್ಣವಾಗಿ ತೆಳುಗುಲಾಬಿ ವರ್ಣಬಳಿಯಲಾಗಿದೆ. ಕಾಮನ ಬಿಲ್ಲಿನಾಕಾರದ ಕಪ್ಪು ಬಣ್ಣದ ಹುಬ್ಬುಗಳು ರಚಿತವಾಗಿದ್ದು ಬಟ್ಟಲ ಕಣ್ಣುಗಳು ಮೂಡಿಬಂದಿವೆ. ಇಲ್ಲಿ ಎರಡು ಸ್ತ್ರೀ ಶಿಲ್ಪಗಳು ಲಂಗ, ಕುಪ್ಪಸ, ತೊಟ್ಟರೆ ಮತ್ತೆರಡು ಶಿಲ್ಪಗಳು ಸೀರೆ, ಕುಪ್ಪಸ ತೊಟ್ಟಿದ್ದಾರೆ. ಎರಡು ಶಿಲ್ಪಗಳ ಕೈಗಳು ಮುಂದಕ್ಕೆ ಚಾಚಿದ್ದು ಹಸಿರು ಸೀರೆಯ ಸ್ತ್ರೀ ಶಿಲ್ಪವು ಬಲಗೈ ಮೇಲಕ್ಕೆ ಎತ್ತಿರುವುದು ಎಡಗೈ ತೆಳುವಾದ ಸೊಂಟದ ಮೇಲೆ ಇಟ್ಟಿರುವುದು ಕಂಡುಬರುತ್ತದೆ. ಪಕ್ಕದಲ್ಲಿ ಮತ್ತೊಂದು ಶಿಲ್ಪ ಚಿಕ್ಕದಾದ ತಂಬುರಿಯನ್ನು ಎಡಗೈಯಲ್ಲಿ ಹಿಡಿದು ಬಲಗೈಯನ್ನು ಮುಂದಕ್ಕೆ ಚಾಚಿರುವ ಹಾಗೆ ಕಂಡುಬರುತ್ತದೆ. ಎರಡು ಶಿಲ್ಪಗಳು ಕೆಂಪು ಮತ್ತು ಹಸಿರು ಮರದ ಹಲಗೆಯ ಮೇಲೆ ನಿಂತರೆ, ಮತ್ತೆರಡು ಶಿಲ್ಪಗಳು ನೆಲದ ಮೇಲೆ ನಿಂತಿರುವುದಾಗಿ ಕಂಡುಬರುತ್ತದೆ. ಇಲ್ಲಿ ನಾಲ್ಕು ಶಿಲ್ಪಗಳಿಗೆ ಆಭರಣ ರಚಿಸಿದ್ದು ಕಂಡುಬರುತ್ತದೆ.

---

೧೩. ಡಾ.ಶಿವಾನಂದ. ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ ಪು. ೨೫ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೧೪. ಡಾ.ಕರೀಗೌಡ ಜೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೦೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಹೀಗೆ ಧಾರವಾಡ ಜಿಲ್ಲೆಯ ಕಲಘಟಗಿಯ ಕಲೆಯು ವಿಭಿನ್ನ ರೂಪದ ಕಲೆಯಾಗಿ ಮಕ್ಕಳಿಂದ ವೃದ್ಧರಿಗಾಗಿ ಬಳಕೆಯಾಗುವ ಕಲಾತ್ಮಕ ವಸ್ತುಗಳನ್ನು ಸಿದ್ಧಪಡಿಸುವಲ್ಲಿ ಕಲಘಟಗಿಯ ಕಲಾವಿದರ ಶ್ರಮ, ಸ್ಮರಣಿಯ ಮಾವು ಮತ್ತು ಶಿವಣ್ಣಿ ಮರದ ತುಂಡಿಗೆ ತಮಗೆ ಬೇಕಾದ ಆಕಾರ ಸೃಷ್ಟಿಸಿ ನಂತರ ಕಟ್ಟಿಗೆ ಪುಡಿಯನ್ನು ಹುಣಸೆ ಸರಿಯೊಂದಿಗೆ ಮಿಶ್ರಣ ಮಾಡಿ ಕಣ್ಣು, ಮೂಗು, ತುಟಿಗಳು, ಇತ್ಯಾದಿಗಳನ್ನು ನಿರ್ಮಿಸಿ ನಂತರ ತೆಳುವಾದ ಬಟ್ಟೆಯನ್ನು ಅಂಟಿನ ಸಹಾಯದಿಂದ ಲೇಪಿಸಿ, ಕಲಾಕೃತಿಯಾಗಿ ರೂಪಿಸುವ ಮಾಧ್ಯಮವಾಗಿದೆ. ಅವರ ಬೌದ್ಧಿಕತೆ ಅಭೂತಪೂರ್ವವಾದುದು ಎಂಬುದಕ್ಕೆ ಈ ಮೇಲಿನ ಕಲಾಕೃತಿಗಳ ವಿಶ್ಲೇಷಣೆಯೇ ಸಾಕ್ಷಿ.

**೩. ಕಾಮರತಿ ಶಿಲ್ಪ**

ಭಾರತದಲ್ಲಿ ಆಚರಿಸುವ ಪುರುಷ ಪ್ರಧಾನ ಹಬ್ಬಗಳಲ್ಲಿ ಇದು ಒಂದೇ ಹಬ್ಬವೆಂದು ಹೇಳಲಾಗುತ್ತದೆ. ಹರನೇತ್ರಾಗ್ನಿಯಿಂದ ಬೆಂದ ಕಾಮನು ಹರಿಭಟ್ಟ ಅನ್ನಪೂರ್ಣೆ ಎಂಬ ಬ್ರಾಹ್ಮಣ ದಂಪತಿಗಳ ಮಗನಾಗಿ ಹುಟ್ಟಿದ. ರತಿ ಸಹಗಮನ ಮಾಡಿ ಹೊಲೆಯನೊಬ್ಬನ ಮಗಳಾಗಿ ಹುಟ್ಟಿದಳು ಅವರಿಬ್ಬರು ಪರಸ್ಪರ ಕಾಮಿಸಿ ಸತ್ತು ಚಿತೆಯಲ್ಲಿ ಬಂದಾಗಿ ಬೆಂದು ಸ್ವ ಸ್ವರೂಪವ ಪಡೆದರು. ಅದನ್ನೇ ಕಾಮನ ಹಬ್ಬವೆಂದು ಆಚರಿಸುತ್ತಾರೆ.[೫] ಇಲ್ಲಿ ಕಾಮನ ಹಬ್ಬಕ್ಕೆಂದು ರಚಿತವಾದ ಕಾಮರತಿ ಶಿಲ್ಪವು ಮೈಬಣ್ಣವಾಗಿ ಹಳದಿಬಣ್ಣವನ್ನು ಬಳೆಯಲಾಗಿದೆ. ಮುಖವು ದುಂಡಾಗಿದ್ದು ಬಾಗಿದ ಹುಬ್ಬುಗಳು ಕಾಮನ ಬಿಲ್ಲಿನ ಹಾಗೆ ಒಡಮೂಡಿದೆ. ಚೂಪಾದ ಮೂಗಿನ ಕೆಳಭಾಗದಲ್ಲಿ ತೆಳವಾದ ಕಪ್ಪು ಮೀಸೆಯೂ ಇದ್ದು ಹಣೆಯನಾಮವಾಗಿ ಕೆಂಪನ್ನು ಬಳಸಿದ್ದು ಕೈಕಾಲು, ಕೊರಳು ಮುಂತಾದವುಗಳಲ್ಲಿ ಆಭರಣ ಬಂಗಾರದ ಬಣ್ಣ ಬಳಸಲಾಗಿದೆ. ರತಿಯ ಶಿಲ್ಪದಲ್ಲಿ ಎಲ್ಲ ಆಭರಣಗಳಿದ್ದು ಹಣೆಯ ಮೇಲ್ಭಾಗ ಅಂದರೆ ತಲೆಯಲ್ಲಿ ಬಂಗಾರದ ಪದಕವು ಮೂಡಿಬಂದಿದೆ. ಕುಪ್ಪಸ ಮತ್ತು ಒಳಉಡುಪು ಕಂದುಗೆಂಪು, ಮತ್ತು ಹಸಿರು ವರ್ಣದಲ್ಲಿ ರಚಿಸಲಾಗಿದೆ. ಎರಡು ಶಿಲ್ಪಗಳು ಕೈಕಾಲುಗಳನ್ನು ಡೊಂಕಿಸಿ ಕುಳಿತಿರುವ ಶಿಲ್ಪವಾಗಿದೆ. ಕುಪ್ಪಸದಲ್ಲಿ ಕಪ್ಪು ವರ್ಣದ ರೇಖೆ ಮೂಡಿದರೆ ಕಾಮನ ಎದೆಯ ಭಾಗದಲ್ಲಿ ಬಂಗಾರ ವರ್ಣದ ರೇಖೆಗಳು ಮೂಡಿರುದಾಗಿ ಕಂಡುಬರುತ್ತದೆ. ಕೈಕಾಲು ಬೆರಳುಗಳಲ್ಲಿ ಉಗುರುಗಳಿಗೆ ಸೂಕ್ಷ್ಮವಾಗಿ ಕೆಂಪುಬಣ್ಣದಿಂದ ಹಚ್ಚಲಾದ ವರ್ಣ ಸೋಗಸಾಗಿ ಮೂಡಿಬಂದಿದೆ. ತೆಳುಹಸಿರು ದಟ್ಟಹಸಿರು ವರ್ಣಗಳ ಹಿನ್ನೆಲೆಯನ್ನು ಕಾಣಬಹುದು.

**೪. ಮಹಿಳೆ ಮುಖಶಿಲ್ಪ**

ಈ ಮುಖಶಿಲ್ಪದಲ್ಲಿ ಹೆಚ್ಚಾಗಿ ಹಳದಿಯನ್ನು ಬಳಸಿದ್ದು ಕಂಡುಬರುತ್ತದೆ. ಅಲ್ಲದೆ ಆಭರಣಗಳು ತಲೆ, ಕಿವಿ, ಮೂಗು, ಕೋರಳಪಟ್ಟಿ ಹಲವಾರು ಬಣ್ಣಗಳಿಂದ ವಡಮೂಡಿವೆ. ಹಣೆಯಲ್ಲಿ ಬಾಗಿದ ಕಪ್ಪು ಹುಬ್ಬು ಮೂಡಿದ್ದು ಮಧ್ಯದಲ್ಲಿ ಕುಂಕುಮಬೊಟ್ಟನ್ನು ಚಿತ್ರಿಸಲಾಗಿದೆ. ನೋಡುವುದಕ್ಕೆ ಇದು ಹಲವಾರು ಆಭರಣಧಾರಿಯಾದ್ದರಿಂದ ಇದು ನೃತ್ಯ ಮಹಿಳೆಯ ಮುಖ ಶಿಲ್ಪ ಇರಬಹುದು. ಉಬ್ಬಿದ ತುಟಿಗಳಿಗೆ ಸುಂದರವಾದ ಕೆಂಪು ಬಣ್ಣದಿಂದ ರಚಿಸಿದ್ದು ಗದ್ದಕ್ಕೆ ಮತ್ತು ಕನ್ನೆಗೆ ಕಪ್ಪು ವರ್ಣದ ಚುಕ್ಕೆಯನ್ನು ಸೃಷ್ಟಿಸಲಾಗಿದೆ. ಕಣ್ಣುಗಳ ಕೆಳ ಮತ್ತು ಮೇಲ್ಭಾಗದಲ್ಲಿ ಸೂಕ್ಷ್ಮವಾದ ರೇಖೆ ಎಳೆಯಲಾಗಿದೆ. ನೃತ್ಯ ಮುಖಶಿಲ್ಪದ ಹಾಗೆ ಕಾಣುವ ಇದು ನಾಶವಾಗುವ ಹಂತ ತಲುಪಿದೆ.

**೫. ಭೂತಪ್ಪ**

ತುಳುನಾಡಿನ ಒಂದು ವಿಶಿಷ್ಟ ದೈವಾರಾಧನೆ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲೆಯಲ್ಲಿ ಭೂತವಿಲ್ಲದ ತಾಣವೇ ಇಲ್ಲ ಎನ್ನಲಾಗಿದೆ. ಭೂತವನ್ನು ಸತ್ಯದ ಪ್ರತ್ಯಕ್ಷ ರೂಪವೆಂದು ಆರಾಧಿಸಲಾಗುತ್ತದೆ. ಪಂಪಭಾರತ, ವಡ್ಡಾರಾಧನೆ, ಧರ್ಮಾಮೃತ, ಮುಂತಾದ ಕೃತಿಗಳಲ್ಲಿ ಈ ಆರಾಧನೆಯ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಕೆ,ಚನ್ನಪ್ಪ ಗೌಡರು ಬರೆದಂತೆ ಭೂತಗಳ ಮೇಲೆ ಜನರು ಇಟ್ಟಿರುವ ನಂಬಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ನಂಬಿಕೆಯ ಹಿಂದೆ ಒಂದು ಬಗೆಯ ಭಯಪಿರುವುದು ಕಂಡುಬರುತ್ತದೆ. ಆರಾಧನೆಯು ನಿರಂತರವಾಗಿ ಸಾಗಿ

೦೫. ತ.ಸು.ಶಾಮರಾಯ : ಶಿವಶರಣ ಕಥಾರತ್ನಕೋಶ ಪು. ೮೦ ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು ೧೯೬೭

ಬರಲು ಜನರ ನಂಬಿಕೆಯ ಜೊತೆಗೆ ಈ ಭಯವು ಒಂದು ಮುಖ್ಯ ಕಾರಣವಾಗಿದೆ.[೬] ಇಲ್ಲಿ ರಚನೆಯಾದ ಶಿಲ್ಪವು ಭೂತಪ್ಪವಾಗಿದ್ದು ಅಗಲವಾದ ಬಟ್ಟಲ ಕಣ್ಣುಗಳು ನೋಡುವುದಕ್ಕೆ ಭಯವುಂಟು ಮಾಡುತ್ತದೆ. ಮುಖಕ್ಕೆ ಕೆಂಪು ಬಣ್ಣ ಬಳಕೆಯಾಗಿದ್ದು ಕಂಡುಬಂದು ಬಾಗಿದ ಹುಬ್ಬಿಗೆ ಕೆಂಪು ವರ್ಣದಿಂದ ರಚಿಸಲಾಗಿದೆ. ಹೊರ ರೇಖೆಯಾಗಿ ಹಳದಿ ವರ್ಣ ಉಪಯೋಗಿಸಲಾಗಿದೆ. ನೀಳಾದ ಮೂಗಿಗೆ ಹಳದಿ ವರ್ಣದ ರೇಖೆ, ಕಪ್ಪು ವರ್ಣದ ತುಟಿಗಳ ಮಧ್ಯ ಹಲ್ಲುಗಳನ್ನು ಚಿತ್ರಿಸಲಾಗಿದೆ. ಹಣೆಯನಾಮವಾಗಿ ಹಳದಿ, ಬಿಳಿ, ಕಪ್ಪು ವರ್ಣದ ರೇಖೆ ಮತ್ತು ಚುಕ್ಕೆಗಳನ್ನು ರಚಿಸಲಾಗಿದೆ. ಕಣ್ಣಿನ ಕೆಳ ಮತ್ತು ಮೇಲ್ಭಾಗ ಹಳದಿ ರೇಖೆ ಕಂಡುಬರುತ್ತದೆ. ಮುಖದಲ್ಲಿ ಬಿಳಿ ವರ್ಣಹೂಗಳನ್ನು ಅಲ್ಲಲ್ಲಿ ಚಿತ್ರಿಸಲಾಗಿದೆ. ಗದ್ದದ ಭಾಗಕ್ಕೆ ಕಪ್ಪು ವರ್ಣಬಳಿದು ಹೊರರೇಖೆಯಾಗಿ ಹಳದಿ ಉಪಯೋಗಿಸಲಾಗಿದೆ. ಕತ್ತಿನವರೆಗೆ ಮಾತ್ರ ರಚಿತವಾಗಿರುವ ಈ ಮುಖ ಶಿಲ್ಪವು ಕಿವಿಯೋಲೆ ಹೊಂದಿದ್ದು ತೆಲೆಭಾಗವಾಗಿ ಕಪ್ಪನ್ನು ರಚಿಸಿದ್ದಾರೆ. ಮಧ್ಯದಲ್ಲಿ ನಕ್ಷಾವಿನ್ಯಾಸ ಕಂಡುಬಂದು ಇದು ಬಿಳಿ ವರ್ಣದಿಂದ ಕೂಡಿದೆ.

### ೬. ಕಾಮನ ಮುಖಶಿಲ್ಪ

ದೇವತೆಗಳು ತಾರಕನ ಭಯಕ್ಕಂಜಿ, ತಪಸ್ಸುಮಾಡುತ್ತಿರುವ ಶಿವನು ಪಾರ್ವತಿಯೊಡನೆ ಕೂಡುವಂತೆ ಮಾಡಲು ಕಾಮನಿಗೆ ಆಜ್ಞಾಪಿಸಿದರು. ಆತನು ಹಾಗೆ ಮಾಡಲು ಯತ್ನಿಸಿ ಶಿವನ ಉರಿಗಣ್ಣಿಗೆ ತುತ್ತಾದನು. ಆನಂತರ ಶಿವನು ರತಿಯ ಪ್ರಾರ್ಥನೆಯಂತೆ ಕಾಮನಿಗೆ ಜೀವದಾನಮಾಡಿ, ತಾನು ಪಾರ್ವತಿಯನ್ನು ವಿವಾಹವಾದನು. ಕಾಮನ ಹಬ್ಬದಲ್ಲಿ ವಿಶೇಷವಾಗಿ ಪೂಜೆಗೊಳ್ಳುವ ಕಾಮನ ಶಿಲ್ಪವಾಗಿದೆ. ಮುಖಕ್ಕೆ ಕೆಂಪು ಬಣ್ಣಬಳಿದು ನಂತರ ಹಳದಿ, ಬಿಳಿ, ಕಪ್ಪು ವರ್ಣದಿಂದ ವಿನ್ಯಾಸಗಳನ್ನು ಸೂಕ್ಷ್ಮವಾಗಿ ಚಿತ್ರಿಸಲಾಗಿದೆ. ಹಣೆ ನಾಮವಾಗಿ ಬಿಳಿವರ್ಣದ ರೇಖೆಗಳು ಬಾಗಿದ ಹುಬ್ಬು ಅದಕ್ಕೆ ಹೊರ ರೇಖೆಯಾಗಿ ಹಳದಿ, ಬಿಳಿ, ಮೇಲ್ಬಾಗದಲ್ಲಿ ಬಿಳಿವರ್ಣದ ಚುಕ್ಕೆಗಳನ್ನು ರಚಿಸಿದ್ದಾರೆ. ಅಗಲವಾದ ಕಣ್ಣುಗಳು ಗಿಳಿಯಾಕಾರ ಬಾಗಿದ ಮೂಗು ಕೆಳಗೆ ಮೀಸೆಯೂ ಎಲೆಬಳ್ಳಿಯ ಹಾಗೆ ಮೂಡಿದೆ. ತುಂಬಾ ಚಿಕ್ಕ ತುಟಿ ಕಪ್ಪು ವರ್ಣದ ಗಡ್ಡ ಕಿವಿಯಲ್ಲಿ ಹೂವಿನ ವಿನ್ಯಾಸ ತೆಲೆಭಾಗಕ್ಕೆ ಕಪ್ಪು ಬಳಿದು ವಿನ್ಯಾಸಗಳು ಮೂಡಿವೆ. ಕತ್ತಿನಭಾಗದಲ್ಲಿ ರೇಖೆಗಳು ಚುಕ್ಕೆಗಳು ಮೂಡಿಬಂದಿವೆ. ತೆಲೆಯ ಮಧ್ಯದಲ್ಲಿ ಮರದ ತುಂಡನ್ನು ಸಿಕ್ಕಿಸಿರುವುದು ಕಂಡುಬರುತ್ತದೆ.

ಈ ರೀತಿ ಹಲವಾರು ಅ ಶಾಶ್ವತ ವಸ್ತುಗಳಾದ ರಟ್ಟು, ಮಣ್ಣು, ಅರಿವೆ, ಅರಳೆ, ತರ್ಮಾಕೂಲ್, ಪೇಪರ, ಬಿದಿರು, ತೆಳುವಾದ ಮರದಹಲಗೆ, ಮುಂತಾದ ವಸ್ತುಗಳನ್ನು ಬಳಸಿಕೊಂಡು ಕಲಘಟಗಿಯ ಕಲಾವಿದರು ಸಂಕೀರ್ಣ ಮಾಧ್ಯಮದಲ್ಲಿ ಕಲಾಕೃತಿಗಳನ್ನು ತಯಾರಿಸಿರುವುದು ಕಂಡು ಬರುತ್ತದೆ.

*****

೦೬. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೦೫ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಕಲಾಸೃಷ್ಟಿ ಮತ್ತು ಕಲಾನುಭವದಲ್ಲಿ ತನ್ನೊಳಗಿನ ಒತ್ತಡದ ಪ್ರವೃತ್ತಿಯಿಂದ ಸಕ್ರಿಯವಾಗಿ ತೊಡಗಿಸಿಕೊಳ್ಳುವುದರ ಫಲವಾಗಿ ಆನಂದವನ್ನು ಪಡೆಯುವುದೇ ಕಲಾವಿದನೊಬ್ಬನ ಮುಖ್ಯ ಉದ್ದೇಶ. ಆದರೆ ಇತಿಹಾಸಪೂರ್ವಕಾಲದ ಹಲವು ಹಂತಗಳ ಕಲಾ ಸೃಷ್ಟಿಯ ಉದ್ದೇಶಗಳಿಂದಾರಂಭಿಸಿ ಇಂದು ಹಲವಾರು ಉದ್ದೇಶಗಳಿಂದ ಸೃಷ್ಟಿಸುತ್ತಿರುವವರ ಜೊತೆಜೊತೆಗೇ ಕೊಳ್ಳುವರೊಂದಿಗೆ ರಾಜಿ ಮಾಡಿಕೊಂಡು ಸೃಷ್ಟಿಸುತ್ತಿರುವ ಕಲಾವಿದರನ್ನು ನೋಡುತ್ತಿದ್ದೇವೆ. ವೃತ್ತಿನಿರತ ಕುಶಲಿಗಳಿಂದ ಸೃಷ್ಟಿಯಾಗುತ್ತಿದ್ದ ನಮ್ಮ ಕಲೆ ಸಂಪ್ರದಾಯವನ್ನೇ ಅವಲಂಭಿಸಿದ್ದು, ಒಬ್ಬರಿಂದ ಮತ್ತೊಬ್ಬರಿಗೆ ಹರಿದುಬಂದದ್ದು, ಇಲ್ಲಿ ಒಂದು ಜನಾಂಗದ ಮಾನಸಿಕ ,ದೈಹಿಕ, ಸಾತ್ವಿಕ, ಚೈತನ್ಯ ಹಾಗೂ ರುಚಿಗಳು ಸುತ್ತಲಿನ ವಾತಾವರಣದಿಂದ ಸಹಜವಾಗಿಯೇ ಪ್ರಭಾವಿಸಲ್ಪಡುವಂತವು ಈ ಕಾರಣದಿಂದ ಸಹಜವಾಗಿಯೇ ಜಾಗತಿಕ ಕಲಾಇತಿಹಾಸದಲ್ಲಿ ವೈವಿಧ್ಯಮಯ ಶೈಲಿಯ-ಹಾದಿಯ ಅಭಿವ್ಯಕ್ತಿಗಳನ್ನು ನಾವು ಕಾಣುವುದು ಸಾಧ್ಯವಾಗಿದೆ.[೧]

೧೫–೧೬ ನೆಯ ಶತಮಾನಗಳ ವಿಜಯನಗರ ಅರಸರ ವೈಭವದ ದಿನಗಳಲ್ಲಿ ಬಂದಿದ್ದ ವಿದೇಶಿ ಪೇಯಿಸ್(paes)ನ ವಿವರಣೆಗಳಿಂದ ಕೃಷ್ಣದೇವರಾಯನ ರಾಣಿಯರ ಅಂತಃಪುರದಲ್ಲಿ ವಿದೇಶಗಳ ಜನರ ಜೀವನ ಬಯಸಿದ್ದ ಹಲವು ಚಿತ್ರಗಳಿದ್ದ ಬಗ್ಗೆ ತಿಳಿದುಬರುತ್ತದೆ. ಮೊಗಲರ ಆಳ್ವಿಕೆಯಲ್ಲಿ ಪರ್ಶಿಯನ್ ಚಿತ್ರಕಲೆಯ ಪ್ರಭಾವ ನಮ್ಮ ಮೀನಿಯೇಚರ್ ಚಿತ್ರಕಲೆಯ ಮೇಲೆ ಆಗಿದೆ. ಅನಂತರದ ಈಸ್ಟ ಇಂಡಿಯಾ ಕಂಪನಿ ಕಾಲದಲ್ಲಿ ಅವರ ಕಲಾವಿದರ ಪ್ರಭಾವ ನಮ್ಮವರ ಮೇಲೆ ಆಳುವ ಅರಸರ, ಜನರ ದಿನನಿತ್ಯದ ಜೀವನ ಹಿಂದಿಗಿಂತಲೂ ವಿಶಿಷ್ಟವಾಗಿ ಚಿತ್ರಿತಗೊಂಡಿದೆ.

೧೮೫೦ ರ ದಶಕದಲ್ಲಿ ರವಿವರ್ಮನು ಪಶ್ಚಿಮದ ಅಕಾಡೆಮಿಕ್ ಶೈಲಿಯಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಚಿತ್ರಿಸಲಾರಂಭಿಸಿದನು.[೨] ೧೮೫೦ ೫೭ರ ಅವಧಿಯಲ್ಲಿ ನಮ್ಮಲ್ಲಿ ಬ್ರಿಟೀಷರಿಂದ ಆರಂಭಿಸಲ್ಪಟ್ಟ ಕಲಾಶಾಲೆಗಳು ವಿಕ್ಟೋರಿಯನ್ ಶೈಲಿಯಲ್ಲಿ ಕಲಿಸುವಂತ ಪರಿಪಾಠ ಹೊಂದಿದ್ದವು.[೩] ಅಂತೆಯೇ ಧಾರವಾಡ ಜಿಲ್ಲೆಯು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಕಲಘಟಗಿಯ ಕಲೆಗೆ ಬ್ರಿಟೀಷ ಪ್ರಭಾವ ಬಿದ್ದಿರಬಹುದು ಆ ನಂತರ ಕಾಲಕ್ರಮೇಣ ಬದಲಾವಣೆಗೊಂಡಂತೆ ಶೈಲಿಯಲ್ಲಿ ಬದಲಾವಣೆ ಆಗಿರಬಹುದು, ಬ್ರಿಟೀಷರ ೩೦೦ ವರ್ಷಗಳ ಆಳ್ವಿಕೆಯ ಕಾಲದಲ್ಲಿ ನಮ್ಮ ಕಲಾವಿದರು ಯುರೋಪಿಯನ್ ಕಲೆಯ ಅಕೆಡೆಮಿಕ್ ರಿಯಲಿಸಂ ,ಇಂಪ್ರೇಷನಿಸಂ ಹಾಗೂ ಎಕ್ಸಪ್ರೇಷನಿಸಂ ಪರಿಚಯ ಪಡೆದಿದ್ದರು ಉದಾ:ಎಮ್.ಎಫ್.ಹುಸೇನರು ಒಬ್ಬರು.[೪] ಹೇಗೆ ಸುತ್ತಲಿನ ಬೆಳಕಿಗೆ ಹೊಸತನಕ್ಕೆ ಅಲೆಗಳ ರಭಸಕ್ಕೆ ನಾವೂ ಸದಾ ಜಾಗೃತರಾಗಿ ಕಣ್ತೆರೆದು ಕುಳಿತಿರಬೇಕು ನಿಜ ಅವುಗಳನ್ನು

---

೦೧. ಕೆ.ವಿ.ಸುಬ್ರಹ್ಮಣ್ಯಂ : ಕಲಾಸಂವೇದನೆಯ ಒಳನೋಟಗಳು ಪು. ೪೭ ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೭
೦೨. -ಅದೇ- ಪು. ೪೮
೦೩. -ಅದೇ- ಪು. ೪೮
೦೪. -ಅದೇ- ಪು. ೪೯

ದಕ್ಕಿಸಿಕೊಳ್ಳುವಾಗ ನಮ್ಮ ನೆಲದ ಬೇರುಗಳು ಸಡಿಲವಾಗದಂತೆ ನೋಡಿಕೊಳ್ಳಬೇಕಷ್ಟೇ ನಮ್ಮದರಲ್ಲಿ ನಾವೇ ಇಲ್ಲದಿದ್ದರೆ ಹೇಗೆ ? ಇಂದಿನ ಕರ್ನಾಟಕದಲ್ಲಿ ನಮ್ಮ ಸಂಪ್ರದಾಯ ಆಚಾರ ವಿಚಾರ ಧಾರ್ಮಿಕ ಸಂಸ್ಕೃತಿಯ ಹಿನ್ನಲೆಯಲ್ಲಿ ಕರಕುಶಲ ಕಲೆಯ ಬೆಳವಣಿಗೆಯನ್ನು ಕಾಣುತ್ತವೆ.

ಹೀಗೆ ಹಲವಾರು ಶೈಲಿಯಲ್ಲಿ ಬೆಳೆದುಬಂದ ಕಲೆಯು ಇಂದು ವ್ಯಾಪಾರ ದೃಷ್ಟಿಯಿಂದ ಬದಲಾವಣೆಯಾಗುತ್ತಿರುವ ಕಾಲಕ್ಕನುಗುಣವಾಗಿ ಹೊಸ ಹೊಸ ಪೀಠೋಪಕರಣಗಳು ಮಾರುಕಟ್ಟೆಯಲ್ಲಿ ಲಭ್ಯವಿರುವುದರಿಂದ ಹಿಂದಿನ ಮಾದರಿಯಲ್ಲಿಯೇ ರಚಿತವಾದ ಪೀಠೋಪಕರಗಳನ್ನು ಇಂದೂ ಕೇಳುವರು ಸಂಖ್ಯೆಯು ಕಡಿಮೆಯಾದಾಗ ಕಲಾವಿದರು ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಕಂಡುಕೊಂಡು ತಮ್ಮ ಕಲಾಕೃತಿಯಲ್ಲಿಯೂ ಹಲವಾರು ಬದಲಾವಣೆಯನ್ನು ಮಾಡಿರುವುದು ಸತ್ಯವಾಗಿದೆ. ಮೂರು ತಲೆಮಾರಿನಿಂದ ತೊಟ್ಟಿಲಿನಷ್ಟೇ ತಯಾರಿಸುತ್ತಾ ಬಂದ ಈ ಕಲಾವಿದರು ಇಂದು ಇದೇ ಮಾದರಿಯಲ್ಲಿ ಸೋಪಾ, ಟೀಪಾಯಿ, ಕುರ್ಚಿ, ತೂಗುಮಂಚ, ಮುಂತಾದವುಗಳನ್ನು ತಯಾರಿಸುವುದು ಕಂಡುಬರುತ್ತದೆ. ಹೀಗೆ ಧಾರವಾಡ ಜಿಲ್ಲೆಯಲ್ಲಿ ಆಳಿದ ಎಲ್ಲಾ ರಾಜರ ಪ್ರಭಾವ ಮತ್ತು ಪ್ರೇರಣೆ ಇದ್ದರೂ ಸಹ ಇಂದೂ ಸುತ್ತಲಿನ ಪರಿಸರ ಸಾಮಾಜಿಕ ಜೀವನ, ರೀತಿನೀತಿಗಳು ಧಾರ್ಮಿಕ ಹಿನ್ನೆಲೆ ಸಂಪ್ರದಾಯ ಇತ್ಯಾದಿಗಳು ಕಲಾಕೃತಿಯಲ್ಲಿ ಕಂಡುಬರುತ್ತವೆ.

ಇಂದಿನ ಕಲಘಟಗಿಯ ಕಲಾವಿದರು ಪರಂಪರಾಗತವಾಗಿ ಬಂದ ಕಲಘಟಗಿಯ ಶೈಲಿಯ ರಚನಾಕ್ರಮವನ್ನು ಅನುಸರಿಸುತ್ತಿರುವುದರ ಜೊತೆಗೆ ಬದಲಾಗುತ್ತಿರುವ ಕಾಲ ಜನರ ಅಭಿರುಚಿಗಳಿಗೆ ತಕ್ಕಂತೆ ವಸ್ತು ಮತ್ತು ರೂಪಗಳನ್ನು ಬದಲಾಯಿಸಿಕೊಂಡಿದ್ದಾರೆ. ಅಷ್ಟೇ ಇಂದಿನ ಚಿತ್ರಗಾರರು ಹಲವಾರು ಹೊಸ ರೂಪಗಳನ್ನು ವಿನ್ಯಾಸಗಳನ್ನು ತಮ್ಮ ರಚನೆಗಳಲ್ಲಿ ಅಳವಡಿಸಿಕೊಂಡಿದ್ದಾರೆ ಉತ್ತರ ಕರ್ನಾಟಕದ ಜನಪದ ಕಲೆಯ ಸೊಬಗನ್ನು ಮೈಗೂಡಿಸಿಕೊಂಡಿರುವುದನ್ನು ಕಾಣಬಹುದು. ಕಲಘಟಗಿಯ ಕಲಾವಿದರು ಮೂಲತಃ ಪರಂಪರೆಯ ಶೈಲಿಯಲ್ಲಿ ತರಬೇತಿ ಹೊಂದಿ ಕುಶಲರಾಗಿರುವುದು ವಾಸ್ತವ ಆದರೆ ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ವ್ಯಾಪಾರಿ ಮನೋಭಾವ ಬೆಳೆಸಿಕೊಂಡು ಪರಂಪರೆಯ ಶೈಲಿಗೆ ವಾಣಿಜ್ಯ ರೂಪಕೊಟ್ಟಿರುವುದು ವಾಸ್ತವ ಸಂಗತಿಯಾಗಿದೆ. ಹೀಗೆ ಕಲಘಟಗಿಯ ಚಿತ್ರಶೈಲಿ ಎಷ್ಟೇ ಪ್ರಭಾವ ಪ್ರೇರಣೆಗಳಿಗೆ ಒಳಗಾಗಿದ್ದರೂ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದೆ.

ರಚನೆಯ ಶೈಲಿಯಲ್ಲಿ ಹಲವಾರು ರಾಜಮಹಾರಾಜರ ಪ್ರಭಾವ ಮತ್ತು ಪ್ರೇರಣೆಗೆ ಒಳಗಾಗಿರಬಹುದು ಕರ್ನಾಟಕವನ್ನು ಆಳಿದ ಎಲ್ಲ ಅರಸರೂ ಒಂದಲ್ಲಾ ಒಂದು ಕಾಲಕ್ಕೆ ಈ ತಾಲೂಕಿನ ಮೇಲೆ ತಮ್ಮ ಅಧಿಪತ್ಯವನ್ನು ಹೊಂದಿದ್ದರು. ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರ್ಯರು, ಹೊಯ್ಸಳರು, ಸೇವುಣರು, ವಿಜಯನಗರದ ಅರಸರು, ಆದಿಲ್‌ಶಾಹಿಗಳು, ಹೈದರ್–ಟಿಪ್ಪು–ಮರಾಠರು, ಅಲ್ಲದೇ ಸವಣೂರಿನ ನವಾಬರು, ಕಿತ್ತೂರಿನ ದೇಸಾಯಿಯವರ ಆಳ್ವಿಕೆಗೆ ಈ ಭಾಗ ಒಳಪಟ್ಟಿತ್ತು.[೫] ಇದರಲ್ಲಿ ಹಲವಾರು ರಾಜಮಹಾರಾಜರು ಸ್ವತಃ ಕಲಾವಿದರಿಗೆ ಆದ ಕಾರಣ ಕಲಾವಿದರಿಗೆ ಪ್ರೋತ್ಸಾಹ ದೊರಕಿರಬಹುದು. ಹಾಗೇ ಶೈಲಿ, ತಂತ್ರ, ಪ್ರಭಾವ ಪ್ರೇರಣೆಗೆ ಅಂದಿನ ಕಾಲದಲ್ಲಿ ಈ ಕಲಘಟಗಿಯ ಕಲಾವಿದರು ಒಳಗಾಗಿರಬಹುದು.

ಆದರೆ ಯಾವುದೇ ಅರಸುಗಳು ಈ ಪ್ರದೇಶದಲ್ಲಿ ಬಹಳ ಕಾಲದವರೆಗೆ ಆಳದೆ ಇರುವುದರಿಂದ ಕಲಘಟಗಿಯ ಕಲೆಯ ಶೈಲಿಯಲ್ಲಿ ಯಾವುದೆ ರೀತಿಯ ಶೈಲಿಗಳು ಕಂಡುಬರುವದಿಲ್ಲ. ಈ ಎಲ್ಲಾ ಅರಸರುಗಳಲ್ಲಿ ಹೆಚ್ಚು ಕಾಲ ಆಳ್ವಿಕೆ ಮಾಡಿದವರು ಮರಾಠರು ಇವರ ಅವಧಿಯಲ್ಲಿ ನೂರಕ್ಕೆ ನೂರರಷ್ಟು ಮರಾಠಿಯಲ್ಲಿ ಮಾತನಾಡುವುದು, ವಾಣಿಜ್ಯ, ವ್ಯಾಪಾರ, ಶಾಲಾಶಿಕ್ಷಣ ಮೊಡಿಯಲ್ಲಿ ಬರೆಯುವುದು ಇತ್ಯಾದಿಗಳು. ಅಲ್ಲದೆ 'ಧಾರವಾಡ ವೃತ್ತ' ವೆಂಬ ಮರಾಠಿ ಪತ್ರಿಕೆ ಧಾರವಾಡದ ಮೊದಲ ಪತ್ರಿಕೆ 'ಭಾವಾ' ಎಂಬುದು ಇನ್ನೊಂದು ಆನಂತರ 'ಚಂದ್ರೋದಯ' ಇದು (೧೮೭೭) ಜಿಲ್ಲೆಯ ಮೊದಲ ಕನ್ನಡ ಪತ್ರಿಕೆ[೬] ಈ ಎಲ್ಲಾ ಹಿನ್ನೆಲೆಯಲ್ಲಿ ಅಂದಿನ ದಿನಮಾನಗಳಲ್ಲಿ ಚಿತ್ರಕಲೆಯಲ್ಲಿಯೂ ಸಹ ಮರಾಠರ ಪ್ರಭಾವವಿದ್ದಿರಬಹುದು. ಎಂದು ಉಹಿಸಲಾಗಿದೆ.

೨೫. ಎಂ.ಜಿ.ಪಾಟೀಲ್ : ಹುಬ್ಬಳ್ಳಿ ತಾಲೂಕು ದರ್ಶನ ಪು. ೮ ಐ.ಬಿ.ಎಚ್ ಪ್ರಕಾಶನ ಬೆಂಗಳೂರು ೧೯೮೬

ಕರ್ನಾಟಕದಲ್ಲಿ ಮರಾಠಿಗರು ಬಹುಹಿಂದಿನಿಂದಲೂ ಬಂದು ನೆಲೆಸಿದ್ದರೂ ಅವರನ್ನು ಆರೇರು ಎಂದು ಕರೆಯುತ್ತಿದ್ದರು. ೧೭೫೩ ರಲ್ಲಿ ಪೇಶ್ವೆಯು ಧಾರವಾಡ ಗೆದ್ದಮೇಲೆ ಈ ಸಂಪರ್ಕ ಬಲವಾಯಿತು. ಮರಾಠರ ನಂತರ ಬಂದ ಬ್ರಿಟೀಷರ ಕಾಲದಲ್ಲಿ ಕೆಲವು ತುಂಡರಸರು ಮರಾಠರೇ ಆಗಿದ್ದು ಮರಾಠರಿಗೆ ಹಾಗೂ ಭಾಷೆಗೆ, ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು.[೬] ಅಂತೆಯೇ ಕರಕುಶಲ ಕಲೆಗೆ ಪ್ರೋತ್ಸಾಹ ನೀಡಿರಬಹುದು. ಇಲ್ಲಿ ನಾಟಕ, ರಂಗಭೂಮಿ, ಜಾನಪದ, ಇನ್ನೂ ಇತ್ಯಾದಿಗಳು ಅಲ್ಲದೆ ಆಡಳಿತವಾಗಿಯೂ ಮರಾಠಿಯಲ್ಲಿ ನೆಡೆಯುತ್ತಿದ್ದವು. ಈ ಎಲ್ಲ ವಿಚಾರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಚಿತ್ರಕಲೆಯಲ್ಲಿಯೂ ಮರಾಠರ ಪ್ರಭಾವ ಮತ್ತು ಪ್ರೇರಣೆ, ಶೈಲಿ ಅಂದಿನ ದಿನಮಾನಗಳಲ್ಲಿ ಇದ್ದಿರಬಹುದು.

ಬ್ರಿಟೀಷರು ೧೬೩೮ ರಲ್ಲಿ ಈಗಿನ ಉತ್ತರ ಕನ್ನಡದ ಕಡವಾಡ (ಕಾರವಾರ ಬಳಿ ಕಾಳೀನದಿ ದಂಡೆಯಲ್ಲಿ) ದಲ್ಲಿ ತಮ್ಮ ಮಳಿಗೆ ಸ್ಥಾಪಿಸಿ ಒಡನಾಡಿನ ೫೦.೦೦೦ ಮಗ್ಗಗಳಿಂದ ಬಟ್ಟೆ ಉತ್ಪಾದನೆ ಮಾಡಿಸಿ ಖರೀದಿಸುವ ಒಪ್ಪಂದ ಮಾಡಿಕೊಂಡಿದ್ದರೆಂದು ತಿಳಿಯುತ್ತದೆ. ಇದಕ್ಕಾಗಿ ಹುಬ್ಬಳ್ಳಿಯಲ್ಲಿ ಬ್ರಿಟೀಷರು ಒಂದು ಮಳಿಗೆ ತೆರೆದಿದ್ದರೂ ಇಲ್ಲಿ ಮರಗೆಲಸ, ಕುಂಬಾರಿಕೆ, ಇವೆಲ್ಲ ಉದ್ಯೋಗಗಳಿದ್ದವು ಇವುಗಳಿಗೆ ಗಾಣದೆರ ಮಗ್ಗದೆರೆ ಮುಂತಾದ ತೆರಿಗೆಗಳಿದ್ದವು.[೭] ಈ ಬ್ರಿಟೀಷರ ಕಾಲಾವಧಿಯಲ್ಲಿ ಕಲಘಟಗಿಯ ತೊಟ್ಟಿಲು, ಸೋಪಾ, ಕುರ್ಚಿ, ಟೀಪಾಯಿ, ಇತ್ಯಾದಿ ಕುಸುರಿ ಕೆತ್ತನೆಯ ವಸ್ತುಗಳು ಈ ಮಾರಾಟ ಮಳಿಗೆಯಲ್ಲಿ ಮಾರಾಟವಾಗಿರಬಹುದು. ಎಂದು ಊಹಿಸಲಾಗಿದೆ.

ಇನ್ನೊಂದು ಅಂಶವೆಂದರೆ ಈಗಾಗಲೆ ಕಾಲಕಾಲಕ್ಕೆ ರಚಿತವಾಗಿ ಇಂದಿಗೂ ಉಳಿದು ಬಂದಿರುವ ಚಿತ್ರಗಳ ಸಾಂಸ್ಕೃತಿಕ ಅಧ್ಯಯನ. ಇದನ್ನೆ ಒಂದು ಪ್ರದೇಶಕ್ಕೆ ಒಂದು ಕಾಲಕ್ಕೆ ಅನ್ವಯಿಸಿ ಅಭ್ಯಸಿಸಿದರೆ ಆ ಪ್ರದೇಶದ ಕಾಲದ ಜನರು ಬದುಕಿದ ರೀತಿ ನೀತಿಗಳು ಅವರ ನಡುವಳಿಕೆ ಇತ್ಯಾದಿಗಳು ಸ್ವಾರಸ್ಯಕರವಾದ ಸಂಗತಿಗಳಾಗಿ ತಿಳಿದುಬರುತ್ತವೆ. ಒಂದು ಜನಾಂಗ ಬದುಕಿ ಬಾಳಿದ ರೀತಿ ತನ್ನ ಬದುಕಿಗೆ ಸೌಂದರ್ಯ ತರುವ ಬದುಕನ್ನು ಹಸನುಗೊಳಿಸಿಕೊಳ್ಳಲು ಕೈಗೊಳ್ಳುವ ಯಾವುದೇ ವಿಷಯವಾದರೂ ಅದು ಅಲ್ಲಿಯ ಸಂಸ್ಕೃತಿಯ ಒಂದಂಶವಾಗಿರುತ್ತದೆ.[೯] ಇಂದು ಕಲಘಟಗಿಯ ಜನಪದ ಕಲೆಯಲ್ಲಿ ಕಾಣಬಹುದಾಗಿದೆ.

ಆಭರಣಗಳು ಮೊದಮೊದಲು ಚಿತ್ರ, ಶಿಲ್ಪಗಳಲ್ಲಿ ತೀರ ಸರಳವಾಗಿದ್ದರೂ ಮುಂದಿನ ಚಾಳುಕ್ಯ ಹಾಗೂ ಹೊಯ್ಸಳ ಶಿಲ್ಪಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈವಿಧ್ಯವಾಗಿ ಕಾಣಿಸಿಕೊಳ್ಳುತ್ತವೆ. ಮುಂದಿನ ತಂಜಾವೂರು ಹಾಗೂ ಮೈಸೂರು ಶೈಲಿಯ ಚಿತ್ರಗಳಲ್ಲಿ ಆಭರಣಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿವೆ. ಭಾರತೀಯ ಚಿತ್ರಕಲೆಯಲ್ಲಿ ಮೂಗಿಗೆ ಹಾಕಿಕೊಳ್ಳುವ 'ನಾಸಾಭರಣ' ೧೬ ನೇ ಶತಮಾನದ ನಂತರ ಸ್ಪಷ್ಟವಾಗಿ ಕಂಡುಬರುತ್ತದೆ.[೧೦] ಇಲ್ಲಿಯೂ ಆಭರಣಗಳು ಹೆಚ್ಚಾಗಿ ಕಂಡುಬಂದರು ಸಹ ಈ ಕಲಘಟಗಿಯ ಕಲೆಯು ಹಲವಾರು ಪ್ರಭಾವ ಪ್ರೇರೆಣೆಗೆ ಒಳಗಾದರು ಸಹ ಇಂದು ಕಲಘಟಗಿಯ ಶೈಲಿಯಲ್ಲಿಯ ಕಲಾಕೃತಿಗಳನ್ನು ಕಾಣಬಹುದಾಗಿದೆ.

ವಿಜಯನಗರ ಮತ್ತು ಪೋರ್ಚುಗೀಸರ ಒಂದು ವ್ಯಾಪಾರ ಒಪ್ಪಂದದಲ್ಲಿ ಹುಬ್ಬಳಿಯನ್ನು 'ಒಬೇಲಿ' ಎಂದು ಕರೆಯಲಾಗಿದ್ದು,[೧೧] ಕಲ್ಲುಪ್ಪು, ಕಬ್ಬಿಣ, ಹಸ್ತಿ ದಂತ, ಗಂಧದ ಕೆತ್ತನೆಯ ವಸ್ತುಗಳು ಗೋವಾಕ್ಕೆ ರಪ್ತಾಗುತಿತ್ತು. ವಿಜಯನಗರದ ಅರಸರ ಮೂಲಕ ನೆಡೆಯುವ ವ್ಯಾಪಾರ ಅಂದುಕೊಂಡತೆ[೧೨] ಇಲ್ಲಿ ವಿಜಯನಗರ ಶೈಲಿಯ ಪ್ರಭಾವವು ಕಲಾಕೃತಿಗಳಲ್ಲಿ ಕಂಡಬರುವುದು. ಅಂತೆಯೇ ಮೊಗಲರ ಕಾಲದಲ್ಲಿ ಆದಿಲ್‌ಶಾಹಿ ಇನ್ನೂ ಮುಂತಾದವರ ಕಾಲದಲ್ಲಿ ಅವರ ಆಡಳಿತದ ಅವಧಿಗೆ ಅನುಸಾರವಾಗಿ ಪ್ರಭಾವ, ಪ್ರೇರೆಣೆ, ಶೈಲಿಯಲ್ಲಿ

---

೦೬. ಸೂರ್ಯನಾಥ. ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸಟಿಯರ್ ಧಾರವಾಡ ಜಿಲ್ಲೆ, ಪು. ೧೧೫ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೦೭. -ಅದೇ- ಪು. ೭೪೨

೦೮. -ಅದೇ- ಪು. ೩೩೨

೦೯. ಆರ್.ಎ.ಶಾಂತರಾಜ : ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ ಪು. ೧೧ ಪ್ರಭಾ ಪ್ರಿಂಟರ್ಸ್ ಬೆಂಗಳೂರು ೧೯೯೫

೧೦. -ಅದೇ- ಪು. ೧೨

೧೧. ಎಂ.ಬಿ.ಪಾಟೀಲ್ : ಹುಬ್ಬಳ್ಳಿ ತಾಲೂಕು ದರ್ಶನ ಪು. ೧೦ ಐ.ಬಿ.ಎಚ್ ಪ್ರಕಾಶನ ಬೆಂಗಳೂರು ೧೯೮೬

೧೨. -ಅದೇ- ಪು. ೪೦

ಬದಲಾವಣೆ ಕಂಡುಬಂದರು ಇಂದು ಈ ಕಲಘಟಗಿಯ ಕಲೆಯಲ್ಲಿ ಯಾವುದೇ ರೀತಿಯ ಶೈಲಿಯು ಕಂಡುಬರುವದಿಲ್ಲ. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ವ್ಯಾಪಾರ ಮನೋಭಾವ ಬೆಳೆಸಿಕೊಂಡು ಬದಲಾಗುತ್ತಿರುವ ಕಾಲ ಜನರ ಅಭಿರುಚಿಗಳಿಗೆ ತಕ್ಕಂತೆ ವಸ್ತು ಮತ್ತು ರೂಪಕಗಳನ್ನು ಬದಲಾಯಿಸಿಕೊಂಡಿದ್ದಾರೆ. ಅಂತೆಯೇ ವಂಶ ಪಾರಂಪಾರಿಕವಾಗಿ ಬಂದ ಕಲಘಟಗಿಯ ಶೈಲಿಯನ್ನೆ ಮುಂದೆವರೆಸಿರುವುದು ಕಂಡುಬರುತ್ತದೆ.

ಶಿಲೆಯಲ್ಲಿ ಆಕಾರವನ್ನು ಕಂಡರಿಸುವಾಗ, ಮಾಡುವುದಕ್ಕಿಂತ ಬಿಡಿಸುವುದು, ಕಡೆಯುವುದು ಮುಖ್ಯವಾಗಿರುತ್ತದೆ. ಶಿಲ್ಪಿಯು ಶಿಲೆಯಲ್ಲಿ ಆಕಾರವೊಂದನ್ನು ಕಂಡು ಆ ಆಕಾರವನ್ನು ಸೆರೆಯಿಂದ ಬಿಡಿಸುವನು ಅಂದರೆ ಅನಗತ್ಯವಾದ ಭಾಗಗಳನ್ನು ತಗೆದು ಹಾಕಿದರೆ ಶಿಲ್ಪಕೃತಿ ಆಯಿತು ಎಂದರ್ಥ ಕಲೆಯ ಇತಿಹಾಸವನ್ನು ಅವಲೋಕಿಸಿದಾಗ "ಶೈಲಿ ಪ್ರಮುಖ ಪಾತ್ರವಹಿಸುತ್ತದೆ" ಶಿಲ್ಪಿಯ ಆಂತರಿಕ ಭಾವಾವೇಶ ಹಾಗೂ ಆ ಕಾಲದ ಆ ಪ್ರಾಂತ್ಯದ ಪ್ರವೃತ್ತಿಯನ್ನು ಸಹ ಇದರಿಂದ ಗುರ್ತಿಸಬಹುದಾಗಿದೆ.[೧೩] ಹಾಗೆನೇ ಕಲಘಟಗಿಯ ಚಿತ್ರಕಲೆಗೆ ಅನ್ವಯಿಸಿ ನೋಡುವುದಾದರೆ ಜನರ ಬೇಡಿಕೆಯನುಸಾರವಾಗಿ ಚಿತ್ರಗಳು ಬದಲಾವಣೆ ಕಂಡುಬಂದಿರುದು ಸತ್ಯವಾಗಿದೆ. ಆದರೂ ಮೂಲದಿಂದ ರಚಿಸುತ್ತಾ ಬಂದ ರಾಮಾಯಣ, ಮಹಾಭಾರತ, ನಿಸರ್ಗಚಿತ್ರ, ಗೋಪಾಲಕೃಷ್ಣ, ಲಕ್ಷ್ಮೀ, ಸರಸ್ವತಿ, ನಂದಿ, ಗಣಪತಿ, ಇನ್ನೂ ಮುಂತಾದವುಗಳು ಉಳಿದುಕೊಂಡು ಬಂದಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಇಂದು ಕಲಘಟಗಿಯಲ್ಲಿ ತಯಾರಾಗುವ ಅನೇಕಾನೇಕ ಪೀಠೋಪಕರಣಗಳೂ ದೇವಿಯ ವಿವಿಧ ಮೂರ್ತಿಶಿಲ್ಪಗಳು ಯಾವುದೇ ರೀತಿಯ ಅಂದರೆ ಬೇರ್‍ಯಾವ ಶೈಲಿಯಲ್ಲಿಯ ಪ್ರಭಾವ ಪ್ರೇರಣೆಯಿಂದ ರಚಿತವಾಗಿಲ್ಲವಾಗಿದೆ. ಈ ಕಲಾವಿದರು ಇವರದೇಯಾದ ಶೈಲಿಯಲ್ಲಿ ರಚಿಸುವುದು ಕಂಡುಬರುತ್ತದೆ. ಇಂದು ಜನರ ಅಭಿರುಚಿಗಳಿಗೆ ತಕ್ಕಂತೆ ಚಿತ್ರರಚಿಸುವ ಕಲಾವಿದರಾಗಿ ರೂಪಗೊಂಡಿದ್ದಾರೆ ಅಂತೆಯೆ ಇವರಲ್ಲಿ ಜಲವರ್ಣ, ಅರಗಿನಬಣ್ಣ, ಆಯಿಲ್‌ಪೇಂಟ್ ಮುಂತಾದವುಗಳನ್ನು ಬಳಸುವುದರೊಂದಿಗೆ ಹೆಸರುವಾಸಿಯಾಗಿದ್ದಾರೆ. ಇವರ ಕಲಾಕೃತಿಯಲ್ಲಿ ಎಂಬೋಜಿಂಗ್ ಬೇಕಾದ ಸ್ಥಳದಲ್ಲಿ ಮರವನ್ನು ಉಬ್ಬುಗೆತ್ತನೆ ಬಿಡುವುದೇ ಇವರ ತಂತ್ರವಾಗಿದೆ. ನಂತರ ಉಬ್ಬುಗೆತ್ತನೆಯ ಮೇಲೆ ಬೇಕಾದ ವರ್ಣ ಲೇಪನ ಮಾಡುವುದಾಗಿದೆ.

ಕಲಘಟಗಿಯ ಕಲಾವಿದರಿಗೆ ಹಿಂದಿನ ಪ್ರಭಾವ ಮತ್ತು ಪ್ರೇರಣೆಗಳು ಇದ್ದರೂ ಸಹ ಇಂದು ಸ್ಪರ್ಧಾತ್ಮಕ ಜಗತ್ತಿನಲ್ಲಿ ಕಾಲಕ್ಕೆ ತಕ್ಕ ಹಾಗೆಯೇ ಬದಲಾವಣೆಗಳು ಕಂಡಿರಬಹುದು. ಇಂದು ಹೊಸ ಹೊಸ ವಿನ್ಯಾಸಗಳು, ಮಾರ್ಕೆಟ್‌ನಲ್ಲಿ ಬರುವ ಪ್ಲಾಸ್ಟಿಕ್ ಉಪಕರಣಗಳು ಭರಾಟೆಗೆ ಬಿದ್ದರೂ ಅಂತಹ ಹೊಸ ವಿಚಾರಗಳನ್ನು ತಿಳಿದುಕೊಂಡು ಈ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಬದಲಾವಣೆ ಮಾಡಿರುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಯಾವುದೇ ಶೈಲಿಯು ಪ್ರಮುಖವಾಗಿರುವುದಿಲ್ಲ, ಆದರೂ ಕಲಘಟಗಿಯ ಶೈಲಿಯಂದೆ ಕರೆದರೆ ತಪ್ಪಾಗಲಾರದು. ಇಂದು ಈ ಕಲಾವಿದರಿಗೆ ಪ್ರಭಾವ ಮತ್ತು ಪ್ರೇರಣೆ ಬೀರುವುದು ಮಾರ್ಕೆಟ್‌ನಲ್ಲಿ ಬರುವ ಹೊಸ ಮಾದರಿಯ ವಸ್ತುಗಳೇ ಆಗಿವೆ ಆದರೂ ವಸ್ತುಗಳನ್ನು ಬದಲಾವಣೆಯ ಜೊತೆಗೆ ಚಿತ್ರಗಳ ವಿಷಯದಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಕಾಣುತ್ತಾ ಇರುತ್ತವೆ. ಧರ್ಮಕ್ಕೆ ಸಂಬಂಧಪಟ್ಟಂತಹ ಚಿತ್ರಗಳು ರಚನೆಯಾಗುತ್ತಾ ಇರುವುದನ್ನು ಕಾಣಬಹುದು, ನಮ್ಮ ಸಂಸ್ಕೃತಿ, ಸಂಪ್ರದಾಯ, ಆಚರಣೆ, ಧಾರ್ಮಿಕ ವಿಚಾರ ಹಿನ್ನೆಲೆಯಲ್ಲಿ ಅಲ್ಲದೇ ನಿಸರ್ಗಚಿತ್ರಣ ಮುಂತಾದವು ಕಂಡುಬರುತ್ತವೆ.

ತೊಟ್ಟಿಲು ರಚನೆಯೊಂದಿಗೆ ಅದೇ ಮಾದರಿಯ ಸೋಪಾ, ಟೀಪಾಯಿ, ಕುರ್ಚಿ, ತೂಗುಮಂಚ, ಪಲ್ಲಕ್ಕಿ, ಪಾಲಕಿ ಇನ್ನೂ ಮುಂತಾದವುಗಳಲ್ಲದೆ ದೇವಾನುದೇವತೆಗಳು ಗ್ರಾಮದೇವತೆಯ ಮೂರ್ತಿಶಿಲ್ಪಗಳು, ಗಣಪತಿ, ಮಣ್ಣೆತ್ತು, ಗೌರಿ, ಕೃಷ್ಣ, ಬಲರಾಮ, ನಾರದ, ನಾಗರಪಂಚಮಿಯ ನಾಗಪ್ಪ ದೇವರು ಇನ್ನೂ ಮುಂತಾದವು ರಚನೆಯಾಗುತ್ತಾ ಇರುತ್ತವೆ.

ಈ ಕಲಾವಿದರು ಮಲೆನಾಡು ಪ್ರದೇಶದಲ್ಲಿ ಬೆಳೆದಿರುವುದರಿಂದ ಈ ಕಲಾವಿದರಿಗೆ ಹೆಚ್ಚು ಹಸಿರು ಹಸಿರು, ನದಿಬೆಟ್ಟಗುಡ್ಡಗಳು, ವಿವಿಧ ಕಾಡುಪ್ರಾಣಿಗಳು ಕಲಾವಿದರ ಮನಸ್ಸಿನಮೇಲೆ ಬಾರೀ ಪ್ರಭಾವ ಬೀರಿವೆ. ಹಾಗಾಗಿ ಈ ಕಲಾವಿದರು ರಚಿಸುವ ಚಿತ್ರಗಳಲ್ಲಿ ನದಿಬೆಟ್ಟಗಳು, ನಿಸರ್ಗ ಚಿತ್ರಗಳು ಕಾಡುಪ್ರಾಣಿಗಳು ಹೆಚ್ಚು

೧೩. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೨೨೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಕಂಡುಬರುತ್ತವೆ. ಇವುಗಳಲ್ಲದೇ ಗ್ರಾಮದೇವತೆಯ ಶಿಲ್ಪಗಳ ರಚನೆಯಲ್ಲಿ ದೇವಿಯ ಮೇಲಿರುವ ನಂಬಿಕೆ, ಆಚರಣೆ, ಸಂಪ್ರದಾಯ, ಧಾರ್ಮಿಕ ಹಿನ್ನೆಲೆಯ ಕುರಿತು ದೇವಿಯು ನಮ್ಮನ್ನೂ ಕಾಪಾಡುತ್ತಾಳೇ ಎಂಬ ನಂಬಿಕೆಯಿಂದ ದೇವಿಯ ಮೂರ್ತಿಶಿಲ್ಪವನ್ನು ರಚಿಸುತ್ತಾರೆ. ಅಲ್ಲದೇ ಹಿಂದಿನಿಂದಲೂ ಬಂದ ಮೂರ್ತಿ ಕೆತ್ತನೆಯ ಸಂಪ್ರದಾಯದೊಂದಿಗೆ ಬೆಳೆದುಬಂದಿದೆ. ದೇವಿಯ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳೂ ಮೂಡಿಬಂದಿವೆ. ಈ ಚಿತ್ರಗಳನ್ನು ಚಿಕ್ಕ ಚಿಕ್ಕದಾಗಿ ರಚಿಸಿ ದೇವಿಯನ್ನು ದೊಡ್ಡವಳೆಂದು ತೋರಿಸುವುದಕ್ಕೆ ಈ ರೀತಿಯಾಗಿ ಚಿತ್ರಿಸಿರಬಹುದು ಅಲ್ಲದೇ ಸೇವಕಿ, ಸೈನಿಕರು, ಮುಂತಾದ ಸಣ್ಣ ಗೊಂಬೆಗಳನ್ನು ದೇವಿಯ ಅಕ್ಕ ಪಕ್ಕದಲ್ಲಿ ನಿಲ್ಲಿಸಿರುತ್ತಾರೆ. ಇಲ್ಲಿ ರಚಿತವಾದ ಮೂರ್ತಿಶಿಲ್ಪ, ದಶಾವತಾರ, ಗೊಂಬೆಗಳು ಇತ್ಯಾದಿಗಳಲ್ಲಿ ಇವರದೆಯಾದ ಶೈಲಿಯನ್ನು ಕಾಣಬಹುದು. ಹಾಗೇ ದುರ್ಗಮ್ಮ ದೇವತೆಯ ರಚನೆಯೂ ಆಗಿದೆ.

ಒಂದು ಚಿತ್ರ ರಚಿಸಬೇಕಾದರೆ ಅದಕ್ಕೆ ಬೇಕಾದ ಮೇಲ್ಮೆಯನ್ನು ತಯಾರಿಸಿಕೊಳ್ಳವುದು ರೂಢಿ ಹಾಗೆ ಮಾಡದಿದ್ದರೆ ಚಿತ್ರರಚನೆಯ ಗುಣಮಟ್ಟ ನಿರ್ವಹಣೆ ಮಾಡಲಾಗದು ಹಾಕಿದ ಬಣ್ಣಗಳು ಸರಿಯಾಗಿ ಕೂಡುವುದಿಲ್ಲ ಅಂದರೆ ಆ ಚಿತ್ರವು ಹಾಳಾಗಬಹುದು. ಉದಾ: ಅಜಂತಾ, ಭಾಗ್, ಎಲ್ಲೊರಾ, ಸಿತ್ತನಿವಾಸಲ್, ಬದಾಮಿಯ ಗುಹೆಗಳಲ್ಲಿರುವ ಚಿತ್ರಗಳು ಇದಕ್ಕೆ ಸಾಕ್ಷಿ ಅಜಂತಾದ ೯. ೧೨. ಮತ್ತು ೧೭ನೆಯ ಗುಹೆಗಳಲ್ಲಿರುವ ಚಿತ್ರಗಳನ್ನು ಕ್ರಿ.ಪೂ. ಮೊದಲನೆಯ ಶತಮಾನದಲ್ಲಿ ರಚಿಸಿದ್ದಿರಬಹುದೆಂದು ಊಹಿಸಲಾಗಿದೆ. ಅಂದರೆ ಈ ಶತಮಾನಕ್ಕೆ ಸರಿಯಾಗಿ ಎರಡು ಸಾವಿರ ವರ್ಷಗಳಷ್ಟು ಹಳೆಯದಾದ ಆ ಚಿತ್ರಗಳು ಇಂದಿಗೂ ಬಹುಪಾಲು ಹಾಗೆ ಇವೆ. ಇತರ ಹಲವಾರು ಗುಹೆಗಳಲ್ಲಿ[೧೪] ನಾಶವಾಗಿದ್ದು ಕಂಡುಬರುತ್ತದೆ. ವಿಜಯನಗರ ಕಾಲದ ಲೇಪಾಕ್ಷಿ, ಹಂಪಿಯ ಪಂಪಾಪತಿ ದೇವಸ್ಥಾನದಲ್ಲಿ ರಚಿಸಿದ ಚಿತ್ರಗಳು ಕೂಡಾ ಇದೇ ತಾಂತ್ರಿಕ ಮೂಲದ ಮೇಲೆ ರಚಿಸಿದವು ಇಂದಿಗೂ ಚೆನ್ನಾಗಿಯೇ ಇವೆ. ಇವೆಲ್ಲ 'ಫ್ರೆಸ್ಕೋ' ಮಾಧ್ಯಮದಲ್ಲಿ ರಚಿಸಿದವುಗಳಾಗಿವೆ. ಅವುಗಳಿಗೆ ಉಪಯೋಗಿಸಿದ ಬಣ್ಣಗಳೆಲ್ಲ ನೈಸರ್ಗಿಕವಾದವು ಪ್ರಕೃತಿಯಲ್ಲಿ ಸಿಗುವ ವಿವಿಧ ಬಣ್ಣದ ಕಲ್ಲುಗಳು ಎಲೆ, ಹೂಗಳನ್ನು ಉಪಯೋಗಿಸಿ ಬಣ್ಣ ತಯಾರಿಸುತ್ತಿದ್ದರು. ಇವುಗಳ ಮಿಶ್ರಣದಿಂದ ಬಣ್ಣಗಳನ್ನು ಹಲವಾರು ಕಡೆ ಉಪಯೋಗಿಸಿದ್ದಾರೆ. ಇವುಗಳಲ್ಲಿ ಮುಖ್ಯವಾಗಿ ಅಂದು ರಚಿಸುತ್ತಿದ್ದ ಸಹನಾಮ ( ಪರ್ಶಿಯನ್ ದೇಶದ ದಂತಕಥೆಯ) ಚಿತ್ರಣಕ್ಕೆ ಈ ಬಣ್ಣಗಳನ್ನು ಉಪಯೋಗಿಸುತ್ತಿದ್ದರು ಬಹುಶಃ ಇವೇ ಬಣ್ಣಗಳೂ ದಕ್ಷಿಣ ರಾಜ್ಯಗಳಿಗೂ ಆಮದಾಗಿರಲು ಸಾಧ್ಯ ಆ ನಂತರ ೧೫ನೆಯ ಶತಮಾನದಲ್ಲಿ ಭಾರತದಲ್ಲಿ ರಚಿತವಾದ ಭಾರತೀಯ ಕಥಾ ವಸ್ತುವಿನ ಚಿತ್ರಗಳಿಗೆ ಬಹುತೇಕ ಆಮದಾದ ಬಣ್ಣಗಳನ್ನೇ ಉಪಯೋಗಿಸುತ್ತಿದ್ದರು. ಬಹುಶಃ ಕಲಘಟಗಿಯ ಶೈಲಿಯಲ್ಲಿ ಇದೇ ತೆರನಾದ ಬಣ್ಣಗಳ ಉಪಯೋಗ ಆಗಿರಲೂಬಹುದು ಪ್ರಸ್ತುತ ಕಲಘಟಗಿಯ ಶೈಲಿಯ ಚಿತ್ರರಚನೆ ಕೂಡಾ ಇದೇ ವಿಧಾನಕ್ಕೆ ಸೇರುತ್ತದೆ. ಇವರು ಚಿತ್ರ ರಚಿಸುವುದು ಮರದ ಹಲಗೆ ಮೇಲೆಯಾದರು ಹಂಪೆಯ ಅಥವಾ ಲೇಪಾಕ್ಷಿಯ ಅನುಕರಣಾತ್ಮಕ ಶೈಲಿಯನ್ನು ಗಮನಿಸಬಹುದು ಅಂದರೆ ಭಿತ್ತಿಚಿತ್ರ ಶೈಲಿಯನ್ನು ಹಲಗೆ ಚಿತ್ರಣಕ್ಕೆ ಅಳವಡಿಸಿಕೊಳ್ಳಲಾಗಿದೆ.[೧೫] ಇಲ್ಲಿ ರಚಿತವಾದ ಕಲಾಕೃತಿಗಳು ತೊಟ್ಟಿಲು, ಸೋಫಾ, ಟೀಪಾಯಿ, ತೂಗುಮಂಚ, ಕುರ್ಚಿ, ಆಟಿಕೆ ಗೊಂಬೆಗಳು ಇತ್ಯಾದಿಗಳಾಗಿವೆ. ಅಲ್ಲದೇ ದೇವಿಯ ಮೂರ್ತಿಶಿಲ್ಪ ಮುಂತಾದವುಗಳಲ್ಲಿ ನಕ್ಷಾವಿನ್ಯಾಸಗಳು ಕಂಡುಬರುತ್ತವೆ. ಈ ನಕ್ಷಾವಿನ್ಯಾಸಗಳು ಧಾರವಾಡ ಜಿಲ್ಲೆಯ ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿ ರಚಿತವಾದ ಹೂಬಳ್ಳಿಯ ನಕ್ಷಾವಿನ್ಯಾಸವನ್ನು ಹೋಲುತ್ತವೆ. ಅಲ್ಲದೇ ಶಿವ, ಪಾರ್ವತಿ, ಲಕ್ಷ್ಮೀ, ಸರಸ್ವತಿ, ಗಣಪತಿ, ಸೀತಾರಾಮ, ಲಕ್ಷ್ಮಣ, ಆಂಜನೇಯ, ಗರುಡ, ವಿಷ್ಣು, ಮಠದ ಸ್ವಾಮಿಗಳು, . ಮಹಿಷಾಸುರಮರ್ದಿನಿ ಮುಂತಾದ ಚಿತ್ರಗಳು ಕಲಘಟಗಿಯ ಕಲೆಯಲ್ಲಿಯೂ ಸಹ ಕಾಣಬಹುದು.

ಬಾಗಲಕೋಟೆ ಜಿಲ್ಲೆಯ ಗುಳೇದಗುಡ್ಡದ ಹೊಸಮನಿಗೌಡರ ಮನೆಯಲ್ಲಿ ರಚಿತವಾದ ಭಿತ್ತಿಚಿತ್ರಗಳು ಕಮಾನು ಮತ್ತು ಗಿಡಗಳಲ್ಲಿ ಹೊರಪಟ್ಟಿಕೆಯಲ್ಲಿ ರಚಿತವಾದ ಹೂಬಳ್ಳಿಯ ನಕ್ಷಾವಿನ್ಯಾಸಗಳನ್ನೇ ಕಲಘಟಗಿಯ ಶೈಲಿಯಲ್ಲಿ ಕಾಣಬರುತ್ತವೆ. ಹಾಗೆ ವಿನ್ಯಾಸಗಳು ಮತ್ತು ಗಿಡಗಳಲ್ಲಿ ಚಿಕ್ಕ ಚಿಕ್ಕ ಕೆಂಪು ಹೂಗಳು ಸಾಂಪ್ರದಾಯಿಕ ಶೈಲಿಯಾಕಾರ ಕಾಣಬರುತ್ತವೆ. ತೆಳುವಾದ ರೇಖೆಗಳು ಹೆಚ್ಚಾಗಿ ಕಂಡುಬರುತ್ತವೆ. ಗದಗ ಜಿಲ್ಲೆಯ ನರಗುಂದಲ್ಲಿ

---

೧೪. ರವಿ ನಾಯಕ್ : ಕಿನ್ನಾಳ ಕಲೆ ಪು. ೫೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬

೧೫. -ಅದೇ- ಪು. ೫೨

ಬಾಬಾಸಾಹೇಬನ ಅರಮನೆಯಲ್ಲಿ ರಚಿತವಾದ ವಸ್ತು ವಿಷಯಗಳು ಕಲಘಟಗಿಯ ಕಲೆಯಲ್ಲಿಯೂ ಕಂಡುಬರುತ್ತವೆ. ವಿಷ್ಣುವಿನ ದಶಾವತಾರ, ಕೃಷ್ಣ, ರಾಧೆಯರೊಂದಿಗೆ ಇರುವುದು ಕಂಡುಬರುತ್ತದೆ. ಬ್ರಹ್ಮ ,ಇಂದ್ರ ,ರಾಮಾಯಣ, ರಾಮಸೀತೆಯರ ಕಲ್ಯಾಣ, ರಾಮಲಕ್ಷ್ಮಣರು ಇಲ್ಲಿ ರಚಿತವಾದ ವಸ್ತು ವಿಷಯಗಳು ಒಂದೇಯಾದರೂ ಶೈಲಿಮಾತ್ರ ಕಲಘಟಗಿಯೆಂದೆ ಹೇಳಬಹುದು.

ನರಗುಂದದ ಸಮೀಪವಿರುವ ನವಲಗುಂದದ ವಿರಕ್ತಮಠದಲ್ಲಿ ಕ್ರಿ.ಶ. ೧೮ನೇಯ ಶತಮಾನದ ಚಿತ್ರಗಳಿದ್ದು ಇಲ್ಲಿ ಕೇವಲ ಹೂಬಳ್ಳಿಯ ನಕ್ಷೆಗಳು ಅಲಂಕಾರಿಕ ವಿನ್ಯಾಸಗಳು ರಚನೆಯಾಗಿವೆ. ಇವು ಜಂತಿಯ ಮೇಲೆ ಅಂದರೆ ಕಟ್ಟಿಗೆಯ ಮೇಲೆ ರಚನೆಯಾಗಿದ್ದು ಕಲಘಟಗಿಯಲ್ಲಿಯೂ ಸಹ ನಕ್ಷಾವಿನ್ಯಾಸಗಳು, ವ್ಯಕ್ತಿ ಚಿತ್ರಗಳು ಮರಮಾಧ್ಯಮದ ಮೇಲೆ ರಚನೆಯಾಗಿವೆ. ಅಮ್ಮಿನಭಾವಿಯಲ್ಲಿಯ ಚಿತ್ರಗಳು ಮರ ಮಾಧ್ಯಮದಲ್ಲಿಯ ರಚನೆಯನ್ನು ಕಲಘಟಗಿಯ ಕಲೆಯಲ್ಲಿಯೂ ಕಾಣಬಹುದು.

ಇವುಗಳಲ್ಲದೆ ಬುಟ್ಟಿಯಮೇಲೆ ಸೇಡಿಯ ಲೇಪನಮಾಡಿ ನಂತರ ತೆಳುವಾದ ಬಿಳಿಬಟ್ಟೆಯನ್ನು ಲೇಪಿಸಿ ನಂತರ ಅಂಟನ್ನು ಲೇಪಿಸಿ ಮೇಲ್ಮೈಯಲ್ಲಿ ಬಿಳಿದಾದ ಪ್ರೈಮರ್ ಲೇಪನಮಾಡಿ ಕಣ್ಣು ,ಮೂಗು ಉಬ್ಬಿದ ತುಟಿಗಳಿಗೆ ಕಟ್ಟಿಗೆಯ ಪುಡಿಯನ್ನು.ಹುಣಸೆ ಸರಿಯಲ್ಲಿ ಕಲಿಸಿ ಆಕಾರ ಕೊಟ್ಟು ರೂಪಿಸುತ್ತಾರೆ ನಂತರ ವರ್ಣಲೇಪನ ಮಾಡುತ್ತಾರೆ. ಇವು ಕಾಮನ ಮೂರ್ತಿಶಿಲ್ಪಗಳಲ್ಲಿ ಬಳಕೆಯಾಗುತ್ತವೆ. ಬಣ್ಣಗಳ ಬಳಕೆಯಲ್ಲಿ ಈ ಕಲಾವಿದರು ಸ್ವತಃ ತಾವೇ ತಯಾರಿಸಿದ ಅರಗಿನ ಬಣ್ಣವನ್ನು ಬಳಸುವುದರ ಜೊತೆಗೆ ತವರದಬಣ್ಣ ತಂತ್ರವೂ ತುಂಬಾ ವೈಶಿಷ್ಟ್ಯತೆಯಿಂದ ಕೂಡಿದೆ. ದೇವಿಯ ವಿವಿಧ ಭಾಗಗಳಲ್ಲಿ ಬಳಸುವ ಬಣ್ಣವಾಗಿದೆ. ಮೊದಲು ತವರವನ್ನು ಲೇಪಿಸಿ ನಂತರ ಇದು ತವರದ ವರ್ಣ ಬರುತ್ತದೆ. ಇದರ ಮೇಲೆ ಒಪ್ಪದ ಕಲ್ಲಿನಿಂದ ತಿಕ್ಕಿ ಬೆಳ್ಳಿಯ ವರ್ಣ ಪಡೆಯುತ್ತಾರೆ. ಹಾಗೇ ಬಂಗಾರ ವರ್ಣ ಬಳಸುವ ಸ್ಥಳದಲ್ಲಿ ಇದೇ ಮಾದರಿಯನ್ನು ಅನುಸರಿಸಿ ಕೇಸರಿ ಬಣ್ಣದ ಪುಡಿಯನ್ನು ಫ್ರೆಂಚ್‌ಪಾಲಿಶ್‌ನಲ್ಲಿ ಮಿಶ್ರಣಮಾಡಿ ಬಳಸುವುದರಿಂದ ಬಂಗಾರ ವರ್ಣ ಪಡೆಯುತ್ತಾರೆ. ಹೀಗೆ ವಿವಿಧ ತಂತ್ರ ಬಳಸಿ ವರ್ಣ ಪಡೆಯುತ್ತಾರೆ. ಹಾಗೇ ಜಲವರ್ಣ ಮಾಧ್ಯಮದಲ್ಲಿ ಕಲಾಕೃತಿ ರಚಿಸಿ ರೋಗಂಧ ಎಣ್ಣೆಯನ್ನು ಲೇಪಿಸುತ್ತಾರೆ ಇದರಿಂದ ಬಣ್ಣವು ಬಹಳ ಕಾಲದವರೆಗೆ ಮಾಸದೆ ಹಾಗೇ ಉಳಿಯುತ್ತದೆ.

ಹೀಗೆ ಕಲಘಟಗಿಯ ಕಲೆಯೂ ಎಷ್ಟೇ ಪ್ರಭಾವ ಪ್ರೇರಣೆಗೆ ಒಳಗಾದರೂ ಇಂದಿನ ದಿನಮಾನಕ್ಕೆ ತಕ್ಕಂತೆ ಇಂದಿನ ಪ್ರಭಾವ, ರೀತಿ ನೀತಿ, ಪರಿಸರ, ಸಂಸ್ಕೃತಿಯನ್ನು ಬಿಂಬಿಸುವಂತಹ ಅಂಶಗಳನ್ನು ಇವರದೇ ಆದ ಶೈಲಿಯಲ್ಲಿ ರಚಿಸಿರುವದು ಕಂಡುಬರುತ್ತದೆ. ಹೀಗೆ ಇಲ್ಲಿಯ ಕಲಾವಿದರಿಗೆ ಇಂದು ಮಾರ್ಕೆಟ್‌ನಲ್ಲಿ ಬರುವ ಹೊಸ ಹೊಸ ಮಾದರಿಯ ಪೀಠೋಪಕರಣಗಳು ಇಂದು ಹೆಚ್ಚು ಹೆಚ್ಚಾಗಿ ಬೇಡಿಕೆಯಲ್ಲಿದ್ದು ಅಂತಹ ಹೊಸ ಬಗೆಯ ಶೈಲಿಯ ತಂತ್ರಗಾರಿಕೆಯನ್ನು ಇಲ್ಲಿಯ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಅವಶ್ಯವಾಗಿ ಬಳಸಿಕೊಂಡು ಇಂದಿನ ದಿನಮಾನಕ್ಕೆ ತಕ್ಕಂತೆ ಪೀಠೋಕರಣಗಳನ್ನು ರೂಪಿಸುತ್ತಾರೆ. ಇವರಿಗೆ ಮಾರ್ಕೆಟ್ ಪ್ರಭಾವ ಹೆಚ್ಚಾಗಿ ಬಿದ್ದಿರುವುದಲ್ಲದೆ ಸುತ್ತ ಮುತ್ತಲಿನ ನಿಸರ್ಗದ ಪ್ರಭಾವವು ಪ್ರೇರಣೆ ಹೆಚ್ಚಾಗಿ ಕಂಡುಬರುತ್ತದೆ.

*****

ಯಾವುದೇ ಪ್ರದೇಶದ ಸಂಸ್ಕೃತಿಯಾಗಲಿ ಅದು ಪರಂಪರೆಯ ಹೊಸ ನೆಲೆಗಳನ್ನು ಪಡೆದುಕೊಳ್ಳುತ್ತಲೆ ಸಂಸ್ಕೃತಿಯ ವಿವಿಧ ಅಭಿವ್ಯಕ್ತಿಗಳನ್ನು ಶ್ರೀಮಂತಗೊಳಿಸುತ್ತದೆ. ಕರಕುಶಲ ಕಲೆಗಳಂತಹ ಮಾಧ್ಯಮಗಳು ಆಯಾಕಾಲದ ಜನಸಮುದಾಯದ ಪುರಾವೆಗಳಾಗಿ ಅಳಿದುಳಿದು ಬಂದಿವೆ. ಜನಪದರ ಆಚರಣೆಯಲ್ಲಿ ಇರುವ ಈ ಕರಕುಶಲ ಶಿಲ್ಪಗಳಿಗೆ ತಮ್ಮದೇ ಆದ ನಂಬಿಕೆ ರೂಪ, ಅರ್ಥವಂತಿಕೆ ಕಲ್ಪನೆಗಳ ಶಿಷ್ಟಾಚಾರವಿದ್ದು ಒಂದು ರೀತಿಯಲ್ಲಿ ಪರಂಪರೆಯ ಕೊಂಡಿಗಳಾಗಿ ಕೊಡುಗೆಗಳಾಗಿ ಅವು ಬೆಳೆದು ಬಂದಿವೆ.[೧] ಇಂತಹ ಹಲವಾರು ವಿಚಾರಗಳ ಹಿನ್ನೆಲೆಯಲ್ಲಿ ಕಲಘಟಗಿಯ ಕಲೆಯು ಸಹ ಇದೇ ಎಂದು ಹೇಳಬಹುದು.

ಅಂತೆಯೇ ಭಾರತದಲ್ಲಿ ಜಾನಪದ ಕಲೆ ಹಾಗೂ ಕುಶಲಕಲೆ ಜನಜೀವನದ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ನಮ್ಮ ಮನೆಗಳಲ್ಲಿ ನಿತ್ಯ ಬಳಸುವ ಸಾಮಗ್ರಿಗಳು, ಹಬ್ಬ ಹರಿದಿನಗಳಲ್ಲಿ, ಸಡಗರದಿಂದ ನಡೆಯುವ ಉತ್ಸವ, ಹಾಗೂ ವಿಧಿ-ವಿಧಾನಗಳಲ್ಲಿ ಬಳಸುವ ವಿಶೇಷ ವಸ್ತುಗಳು ನಮ್ಮ ಜನರ ಕರಕುಶಲ ಕಲೆಯ ಅಭಿವ್ಯಕ್ತಿಯ ಮಾಧ್ಯಮಗಳಾಗಿ ನೂರಾರು ಸಾವಿರಾರು ವರ್ಷಗಳಿಂದ ಸಂಸ್ಕೃತಿ, ಸಂಪ್ರದಾಯದ ಬೆಳವಣಿಗೆಯ ಜೊತೆಗೆ ಬೆಳೆದು ಬಂದದ್ದನ್ನು ನಾವು ಗಮನಿಸಬೇಕಾಗಿದೆ. ನಿತ್ಯ ಬಳಕೆಯ ತೊಟ್ಟಿಲು, ಸೋಪಾ, ಟೀಪಾಯಿ, ತೂಗುಮಂಚ, ಕುರ್ಚಿ, ಆಟಿಕೆ ಗೊಂಬೆಗಳು ಇನ್ನೂ ಮುಂತಾದವುಗಳನ್ನು ಅನೇಕ ಆಕಾರಗಳನ್ನು ಕಂಡಿದ್ದರೂ ಅವು ಪ್ರಾಯೋಗಿಕ ಸುಂದರ ರೂಪಗಳನ್ನು ಪಡೆದಿವೆ ಧಾರ್ಮಿಕ ಭಾವನೆಯೇ ಪ್ರಮುಖವಾಗಿದೆ.[೨] ಅಲ್ಲದೆ ಮನೆಯ ಸೌಂದರ್ಯ ದೃಷ್ಟಿಯಿಂದಲೂ ಹೋಸ ರೂಪ ಪಡೆದುಕೊಂಡು ಬೆಳೆದು ಐತಿಹಾಸಿಕ ಪೌರಾಣಿಕ ಚಿತ್ರಗಳು ಮೂಡಿವೆ.

ಕಲಘಟಗಿಯ ಪಟ್ಟಣದಲ್ಲಿ ಚಿತ್ರಗಾರ (ಜಿನಗಾರ) ಒಂದು ಓಣಿಯೇ ಇದೆ. ಹಾಗೇ ಬಡಿಗೇರ ಕುಟುಂಬಗಳಿದ್ದು, ಇವರು ಸುಮಾರು ಮೂರು-ನಾಲ್ಕು ತಲೆಮಾರುಗಳಿಂದ ತೊಟ್ಟಿಲು ರಚನೆ, ಗ್ರಾಮದೇವತೆ, ಉಯ್ಯಾಲೆ, ಸೋಪಾ, ಇನ್ನೂ ಮುಂತಾದವುಗಳನ್ನು ರಚನೆಮಾಡುತ್ತಾ ಬಂದಿದ್ದಾರೆ. ಅಪ್ಪಟ ಜನಪದ ಕಲೆಯಾದ ಕಲಘಟಗಿಯ ಕಲೆಯನ್ನು ಮುಂದುವರಿಸಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಚಿತ್ರಗಾರರ ಬಗ್ಗೆ ಒಂದು ಜನಪದ ಗೀತೆ ಹೀಗೆ.

*ತುಂಬಿ ಸೂಸಲಿ ಚಿತ್ರದ ಪಟವೆ*
*ಪಾಂಚಾಳರ ನಿಂಗೋಜಿ ಜೀನಗಾರ ನಾಗೋಜಿ*
*ಚಿತ್ರಬರೆದಾರ ಶಿವಲಿಂಗ ನಂದಿ ಶಿವಹರನೇ ಬಲ್ಲ ಚಿತ್ರಗಾರಣ್ಣ ॥*
*ತುಂಬಿ ಸೂಸಲಿ ಚಿತ್ರದ ಪಟವೆ*

---

೦೧. ಡಾ.ಎಸ್.ಸಿ.ಪಾಟೀಲ : ಆಚರಣೆಯಲ್ಲಿ ಜನಪದ ವಾಸ್ತುಶಿಲ್ಪಗಳು ಪು. ೨೬ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೬
೦೨. ಶಂಕರ.ಪಾಟೀಲ : ಚಿತ್ರಕಲಾ ಚಿಂತನೆ ಪು. ೩ ಪ್ರಗತಿ ಪ್ರಾಕಾಶನ ದಾವಣಗೆರೆ ೧೯೯೫

*ಹಂಪಿಯ ಗುಡಿಯಾಗ ಕೇಂಪೇಳು ಬಣ್ಣ ಬಳಿದು*
*ಸಂಪ ಮಾಮರಕ ಗಿಣಿಬರೆದ ಶಿವಹರನೆ ಬಲ್ಲ*
*ಚಿತ್ರಗಾರಣ್ಣ ತುಂಬಿ ಸೂಸಲಿ ಚಿತ್ರದ ಪಟವು ॥*

ಎಂದು ಹಳ್ಳಿಗರು ಪೂರ್ವಕಾಲದ ಸುಪ್ರಸಿದ್ಧ ಚಿತ್ರಕಾರ ಪಾಂಚಾಳ ಲಿಂಗೋಜನನ್ನು ಜಿನಗಾರ ನಾಗೋಜನನ್ನು ಹಾಡಿ ಅವರ ಹೆಸರುಗಳನ್ನು ಈ ಪದ್ಯದ ಮೂಲಕ ಉಳಿಸಿ ಕನ್ನಡ ಜನಾಂಗಕ್ಕೆ ಮಹದುಪಕಾರ ಮಾಡಿದ್ದಾರೆ.[೩]

ಕಲಘಟಗಿಯಲ್ಲಿ ತಯಾರಿಸಿದ ತೊಟ್ಟಿಲು, ಹಾಗೂ ದೇವಿಯ ಮೂರ್ತಿಶಿಲ್ಪ, ಇವುಗಳಲ್ಲದೆ ವಿವಿಧ ಪೀಠೋಪಕರಣಗಳು ಕಲಘಟಗಿಯ ಕಲೆಯೆಂದೇ ಹೆಸರು ಪಡೆದಿವೆ. ಈ ಜನಪದ ಕಲೆಯನ್ನು ಮರಾಠಾ ಜನಾಂಗಕ್ಕೆ ಸೇರಿದ ಸಾವುಕಾರರು, ಚಿತ್ರಗಾರರು, ಬಣ್ಣಗಾರರು, ಅಲ್ಲದೇ ಬಡಿಗೇರ ಸಮುದಾಯಗಳು ಸುಮಾರು ಮೂರು ನಾಲ್ಕು ತಲೆಮಾರುಗಳಿಂದ ರಚನೆಮಾಡುತ್ತಾ ಬಂದಿದ್ದಾರೆ. ಇಂತಹ ಕುಟುಂಬ ವರ್ಗದವರನ್ನು ಚಿತ್ರಗಾರರು, ಜಿನಗಾರರು ಎಂದೇ ಕರೆಯುತ್ತಾರೆ. ಆಂದ್ರ ಪ್ರದೇಶದ ಅನಂತಪುರ, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಕೊಟ್ಟೂರು, ಇಟಗಿ, ಹರಪನಹಳ್ಳಿ, ಕನಕಗಿರಿ, ಗೋಕಾಕ, ಕಿನ್ನಾಳ, ತಾಳಿಕೋಟೆ, ಮುತ್ತಗಿ ಇನ್ನೂ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಕಲಘಟಗಿಯ ಪಟ್ಟಣವಂತೂ ತೊಟ್ಟಿಲು ತಯಾರಿಕೆಯ ಪ್ರಮುಖ ಕೇಂದ್ರವೆನಿಸಿದೆ. ಇಲ್ಲಿಯ ಚಿತ್ರಗಾರರು ಹಾಗೂ ಬಡಿಗೇರ ಸಮುದಾಯಗಳು ಗತಕಾಲದಿಂದ ಬಂದಂತಹ ಕಲೆಯನ್ನು ಬೆಳೆಸುವುದರೊಂದಿಗೆ ಅವರ ಬದುಕಿನ ಒಂದು ಭಾಗವಾಗಿ ಇಂದಿಗೂ ಉಳಿದು ಬಂದಿದೆ.

ಕೈಗಾರಿಕೆಯ ಕ್ರಾಂತಿಯ ಪರಿಣಾಮದಿಂದ ಹಲವು ಕಾಯಿದೆ ಕಟ್ಟಳೆ ನಿರ್ಬಂಧಗಳಿಂದ ಮತ್ತು ಆಧುನಿಕ ತಂತ್ರಜ್ಞಾನ ಪ್ರಭಾವದಿಂದ ಸಾಂಪ್ರದಾಯಿಕ ಕರಕುಶಲ ಕಲೆಗಳ ಮೇಲೆ ಭಾರಿ ಪೆಟ್ಟುಬಿದ್ದಿತ್ತು. ಇದರಿಂದ ಕುಶಲಕರ್ಮಿಗಳು ತತ್ತರಿಸಿ ಹೋದರು. ೧೮ಮತ್ತು ೧೯ನೇಯ ಶತಮಾನಗಳಲ್ಲಿ ನಗರಕೇಂದ್ರಿತ ಕೈಗಾರಿಕೆಗಳು ಯಂತ್ರಗಳಿಂದ ಉತ್ಪಾದಿಸಿದ ವಸ್ತುಗಳು ಹಳ್ಳಿಗಳ ಕಡೆಗೆ ಹರಿಯತೊಡಗಿದಂತೆ ಆ ಕ್ಷಣದಿಂದಲೇ ಹಳ್ಳಿಗಳಲ್ಲಿದ್ದು ಸಾಂಪ್ರದಾಯಿಕ ಕುಶಲಕರ್ಮಿಗಳ ಅದರ ಗಾಢ ಪರಿಣಾಮಗಳನ್ನು ಅನುಭವಿಸಬೇಕಾಯಿತು. ಕುಶಲಕರ್ಮಿಗಳು ತಮ್ಮ ಕೈಗಳಿಂದ ಸಿದ್ದಪಡಿಸಿ ಮಾರಾಟ ಮಾಡುವ ವಸ್ತುಗಳಿಗಿಂತ ಕೈಗಾರಿಕೆಗಳು ಉತ್ಪಾದಿಸುವ ವಸ್ತುಗಳ ಬೆಲೆ ಕಡಿಮೆ ಇದ್ದುದರಿಂದ ಗ್ರಾಹಕರುಕೊಳ್ಳುತ್ತಾರೆ. ಇಂದಿನ ಕಾಲದಲ್ಲಿ ಕೈಗಾರಿಕೆಗಳು ಉತ್ಪಾದಿಸುವ ವಸ್ತುಗಳಿಗಿಂತ ಕುಶಲಕರ್ಮಿಗಳು ತಯಾರಿಸುವ ವಸ್ತುಗಳ ಬೆಲೆ ಅಧಿಕವಾದರು ಗ್ರಾಹಕರು ಕೊಳ್ಳುತ್ತಾರೆ. ಇದಕ್ಕೆ ಬಹುಮುಖ್ಯ ಕಾರಣ ಕರಕುಶಲ ಕಲೆಗಳಲ್ಲಿ ವ್ಯಕ್ತವಾಗುವ ಸೌಂದರ್ಯ ವಿನ್ಯಾಸ, ಬಣ್ಣ, ಕೌಶಲ್ಯ, ಮತ್ತು ಜನಪದ ಮತ್ತು ಸಾಂಪ್ರದಾಯಿಕ ಪ್ರಜ್ಞೆ ಮುಂತಾದ ಮೌಲ್ಯಗಳು ಹಾಗೂ ಗುಣಗಳು,[೪] ಕಲಘಟಗಿಯ ಕಲಾವಿದರಲ್ಲಿ ಕಂಡುಬರುತ್ತದೆ. ಈ ಕಲಾವಿದರ ಕಲಾಕೃತಿಗಳಲ್ಲಿ ಕಂಡುಬರುವ ಮೂಲವರ್ಣಗಳು ನೋಡುಗರನ್ನು ಮಂತ್ರ ಮುಗ್ಧಗೊಳಿಸುತ್ತವೆ. ಅತ್ಯಾಕರ್ಷಣೆಯ ವಿವಿಧ ಪೀಠೋಪಕರಣಗಳೂ ಮನೆಯ ಅಂದ ಚಂದಕ್ಕೆ ಆಧುನಿಕ ಯುಗದ ಮಾದರಿಯಲ್ಲಿಯೇ ನಿರ್ಮಿಸುತ್ತಾರೆ.

ಕಲಘಟಗಿಯ ಕಲಾವಿದರು ಬದಲಾಗುತ್ತಿರುವ ಕಾಲಗಳಿಗೆ ಅನುಗುಣವಾಗಿ ಅಥವಾ ಜನರ ಅಭಿರುಚಿಗೆ ತಕ್ಕಂತೆ ವಿವಿಧ ಮಾರ್ಪಾಟುಗಳನ್ನು ಮಾಡಿರುವುದು ಕಂಡುಬರುತ್ತದೆ. ಸುಮಾರು ೩೦೦ ವರ್ಷಗಳಿಂದ ರಚನೆಯಾಗುತ್ತಾ ಬಂದ ತೊಟ್ಟಿಲು ಕಾಲಕಾಲಕ್ಕೆ ಬದಲಾವಣೆ ಕಾಣುತ್ತಾ ಬಂದಿದೆಯಲ್ಲದೇ ಇದರಲ್ಲಿಯ ಚಿತ್ರಗಳ ವಿಷಯಗಳು ಬದಲಾವಣೆ ಕಂಡಿವೆ. ಇಂದಿನ ಪ್ರಸ್ತುತ ಕಾಲಮಾನದಲ್ಲಿ ಹೆಚ್ಚು ಬೇಡಿಕೆ ಇರುವ ಕಬ್ಬಿಣದ ತೊಟ್ಟಿಲು, ಪ್ಲಾಸ್ಟಿಕ್, ಕುರ್ಚಿ, ಟೀಪಾಯಿ, ಸೋಫಾ ಇನ್ನೂ ಮುಂತಾದ ಉಪಕರಣಗಳ ಭರಾಟೆಯಲ್ಲಿ ಕಟ್ಟಿಗೆಯ ವಸ್ತುಗಳನ್ನು ಕೇಳುವರಾರು? ವೈಜ್ಞಾನಿಕವಾಗಿ ಅಭಿವೃದ್ಧಿ ಹೊಂದಿದವರಂತೂ ಹಳೇಯ ವಸ್ತುಗಳನ್ನು ಕೇಳುವುದೇ ಇಲ್ಲ ಹೊಸ ಹೊಸ ಉಪಕರಣಗಳು ಹಳೆಯದೆಲ್ಲವನ್ನು ಬದಿಗೊತ್ತಿ ಬಿಡುತ್ತಿವೆ. ಆದರೆ ಕಲಘಟಗಿಯ

೦೩. ರವಿ ನಾಯಕ್ : ಕಿನ್ನಾಳ ಕಲೆ ಪು. ೫೪ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬
೦೪. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೪೮ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ತೊಟ್ಟಿಲಿಗೆ ಮಾತ್ರ ನವನಾಗರಿಕತೆಯ ಪಿಡುಗು ಹಿಡಿದಿಲ್ಲ, ಕಾರಣ ಸಸ್ಯಮೂಲ, ಖನಿಜಮೂಲ ಇತ್ಯಾದಿಗಳಿಂದ ತಯಾರಿಸಿದ ಅರಗಿನ ಬಣ್ಣ ನೋಡುಗರಿಗೆ ಮನಃ ತಟ್ಟುವ ವರ್ಣವಾಗಿದೆ. ಸುಮಾರು ೧೦೦ ವರ್ಷಗಳ ಬಾಳಿಕೆ ವರ್ಣವಾಗಿ ಹೆಸರು ಪಡೆದಿದೆ.

ಮೊದಲು ತೊಟ್ಟಿಲು, ಪಲ್ಲಕ್ಕಿ ಇತ್ಯಾದಿಗಳನ್ನಷ್ಟೇ ತಯಾರಿಸುತ್ತಿದ್ದ ಇಲ್ಲಿಯ ಕಲಾವಿದರು ಈಗ ಸೋಪಾ, ದೀವಾನ್ ಕಾಟ್, ಟೀಪಾಯಿ, ತೂಗುಮಂಚ ಮೊದಲಾದ ಆಧುನಿಕ ಪೀಠೋಪಕರಣಗಳನ್ನು ತಯಾರಿಸುತ್ತಿದ್ದಾರೆ. ಇಲ್ಲಿ ಕಾಲಕ್ಕೆ ತಕ್ಕಂತೆ ವಸ್ತುಗಳ ತಯಾರಿಕೆ ಬದಲಾಗಿದೆ ಅಷ್ಟೇ[೫]

ಕಲಘಟಗಿಯ ಪಟ್ಟಣದಲ್ಲಿ ಸುಮಾರು ೧೫ ಕುಟುಂಬಗಳು ತೊಟ್ಟಿಲು ತಯಾರಿಕೆಯ ವೃತ್ತಿಯನ್ನೇ ಅವಲಂಭಿಸಿದವುಗಳಾಗಿವೆ. ಇಂದು ಕೇವಲ ಏಳು ಕುಟುಂಬಗಳು ಮಾತ್ರ ಉಳಿದುಕೊಂಡಿವೆ. ಇದಕ್ಕೆ ಕಾರಣ ಸಾಗುವಾನಿ ಕಟ್ಟಿಗೆ ಹಾಗೂ ಅರಗಿನ ಬೆಲೆ ಏರಿಕೆಯಿಂದ ತತ್ತರಿಸಿದ ಕಲಾವಿದರು ಕೆಲವರು ವೃತ್ತಿಯನ್ನು ಬದಲಿಸಿಕೊಂಡರು. ಇನ್ನೂ ಕೆಲವರು ಊರುಬಿಟ್ಟು ಹೋದರು. ಮತ್ತೆ ಕೆಲವರು ಇಲ್ಲಿಯೇ ಉಳಿದುಕೊಂಡು ಪರಂಪರೆಯನ್ನು ಮುದುವರೆಸಿದರು, ಅಲ್ಲದೆ ಆಧುನಿಕ ಯುಗದ ಮತ್ತು ತಾಂತ್ರಿಕ ಕೈಗಾರಿಕರಣದಿಂದ ಕಲಘಟಗಿಯ ಕಲೆಯ ಮೇಲೆ ಬಹಳಷ್ಟು ಪರಿಣಾಮ ಬೀರಿದೆ ಏಕೆಂದರೆ ಸಿದ್ಧಗೊಂಡ ತೊಟ್ಟಿಲು, ಗೊಂಬೆ, ಇನ್ನಿತರ ಪೀಠೋಪಕರಣಗಳು ಕಡಿಮೆ ಬೆಲೆಗೆ ದೊರಕುವಾಗ ಈ ಅಪ್ಪಟ ಜನಪದ ಕಲೆಗೆ ಬೇಡಿಕೆ ಕಡಿಮೆಯಾಗಿರುವುದನ್ನು ಕಾಣುತ್ತೆವೆ. ಆದರೂ ಸಹ ಕಲಘಟಗಿಯ ತೊಟ್ಟಿಲುಗಳ ಹೆಸರು ಬಿದ್ದಿಲ್ಲ ಹಲವಾರು ಶ್ರೀಮಂತರು ತಮ್ಮ ಮನೆಯ ಅಂದಚಂದಕ್ಕಾಗಿ ಶೋಭಿಸುವ ತೊಟ್ಟಿಲು, ಸೋಪಾ, ಟೀಪಾಯಿ, ಕುರ್ಚಿ, ಮುಂತಾದವುಗಳನ್ನು ಖರೀದಿಸುತ್ತಾರೆ. ಕಲಘಟಗಿಯ ಕಲಾವಿದರ ಜೀವನ ಇವತ್ತಿಗೂ ತೊಟ್ಟಿಲು ಮಾರಾಟ ಮಾಡಿಯೇ ಬದುಕುದಾಗಿದೆ. ಆದರೂ ದೇಶ ವಿದೇಶಿದವರು ಈ ಕಲೆಯ ಶ್ರೇಷ್ಠತೆಯನ್ನು ಒಪ್ಪಕೊಂಡಿರುವುದೂ ಸತ್ಯವಾಗಿದೆ. ಈ ಕಲಾವಿದರಿಗೆ ಯಾವುದೇ ರೀತಿಯ ರಾಜ್ಯಮಟ್ಟದ ಪ್ರಶಸ್ತಿಗಳು ಲಭಿಸಿಲ್ಲವಾದರು ಹಲವಾರು ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ ಜಿಲ್ಲಾ ಮಟ್ಟದಲ್ಲಿ, ತಾಲೂಕು ಮಟ್ಟದಲ್ಲಿ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಈ ಕಲಾವಿದರ ಹಿನ್ನೆಲೆ ಜೀವನ ಪರಿಚಯ ಇಲ್ಲಿದೆ.

**ಕಲಘಟಗಿಯ ಸಾವುಕಾರ್ ಕಲಾವಿದರ ಹಿನ್ನೆಲೆ**

ಮರಾಠರು ಮೂಲತಃ ಮಹಾರಾಷ್ಟ್ರದಿಂದ ವಲಸೆ ಬಂದಿರುವದಾಗಿ ಕಂಡುಬರುತ್ತದೆ. ಎರಡನೆಯ ಹಿಂದುಳಿದ ವರ್ಷಗಳ ಆಯೋಗದ ಪ್ರಕಾರ ಜಿಲ್ಲೆಯಲ್ಲಿ ೧೯೭೪ರಲ್ಲಿ ಇವರ ಸಂಖ್ಯೆಯು ೧.೮೯,೦೨೬. ಎಂದು ಅಂದಾಜು ಮಾಡಲಾಗಿದೆ. ಇವರು ಮಾಂಸಾಹಾರಿಗಳಾಗಿದ್ದರು ಬಹುತೇಕ ಬ್ರಾಹ್ಮಣ ವಿಧಿ ಆಚರಣೆಗಳನ್ನು ಅನುಸರಿಸುವ ಅಂದರೆ ಇವರಲ್ಲಿ ಜನಿವಾರ ಹಾಕುವ ಸಂಪ್ರದಾಯ ಹುಟ್ಟಿದಾಗ ಹಾಗೂ ಸತ್ತಾಗ ಮೈಲಿಗೆ ಹಾಗೂ ಇತರ ಧಾರ್ಮಿಕ ಸಾಂಪ್ರದಾಯಗಳನ್ನು ಆಚರಿಸುವುದು ಪದ್ಧತಿಯಾಗಿದೆ. ಇವರಲ್ಲಿ ಜಾಧವ್,ಪವಾರ್, ಶಿಂದೆ, ಭೋಸ್ಲೆ, ಮುಂತಾದ ಮನೆತನದ ಹೆಸರುಗಳಿವೆ. ಇವರು ಕನ್ನಡ ಹಾಗೂ ಮರಾಠಿಯನ್ನು ಮಾತನಾಡುವರು ಮದುವೆ ಮುಂತಾದ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣ ಪೂರೋಹಿತರು ಬಂದು ನಡೆಸಿಕೊಡುತ್ತಾರೆ. ಇವರು ಯಲ್ಲಮ್ಮ, ವಿಠೋಬ, ಮಾರುತಿ, ಅಂಭಾಭವಾನಿ, ಖಂಡೋಬಾ, ಜಗದಂಬಾ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ, ಹಾಗೂ ಸೌದತ್ತಿ, ಪಂಡರಪುರ, ಧರ್ಮಗಳ ಮೊದಲಾದ ಯಾತ್ರಾಸ್ಥಳಕ್ಕೆ ಹೋಗುವ ಪದ್ಧತಿಯುಂಟು ಇವರಲ್ಲಿ ಶವವನ್ನು ಸುಡುತ್ತಾರೆ. ಕೃಷಿಕರು ಸೈನಿಕರು ಆಗಿದ್ದ ಇವರು ಈಗ ವ್ಯಾಪಾರ ಹಾಗೂ ಇತರ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ್ದಾರೆ.[೬] ಈ ಮಾತು ಅರ್ಥಪೂರ್ಣವಾಗಿದೆ. ಕಲಘಟಗಿಯಲ್ಲಿ ತಯಾರಾಗುವ ತೊಟ್ಟಿಲು ಸೋಪಾ, ತೂಗುಮಂಚ, ದೇವಿಯ ಮೂರ್ತಿಶಿಲ್ಪ ಅಟಿಕೆ ಗೊಂಬೆಗಳು ಇನ್ನೂ ಇತ್ಯಾದಿಗಳು ಮರಾಠ ಜನಾಂಗದವರು ತಯಾರಿಸುವುದು ಕಂಡುಬರುತ್ತದೆ. ಹಾಗೇ ಬಡಿಗೇರ ಕುಟುಂಬಗಳು ಈ ಕರಕುಶಲ ಕಲೆಯಲ್ಲಿ ತೊಡಗಿದ್ದಾರೆ. ಇವರು ಸಹ ತೊಟ್ಟಿಲು ದೇವಿಯಮೂರ್ತಿಶಿಲ್ಪ ಇತ್ಯಾದಿಗಳನ್ನು ರೂಪಿಸುವುದನ್ನು ಕಾಣಬಹುದು.

---

೦೫. ಶ್ರೀದೇಪಿ. ಇಟಗಿ : ಸಂಯುಕ್ತ ಕರ್ನಾಟಕ ಕಾಮನಬಿಲ್ಲು "ತೊಟ್ಟಿಲು ತಯಾರಿ ತಂಬಾ ಕಷ್ಟಾರಿ" ಪು. ೧ ೨೦೦೬

೦೬. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸಟಿಯರ್ ಧಾರವಾಡ ಜಿಲ್ಲೆ, ಪು. ೨೨೩ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

ಬಿಜಾಪುರ ಸುಲ್ತಾನರ ಕಾಲದಲ್ಲಿ ಅವರ ಸೈನ್ಯದಲ್ಲಿದ್ದ ಮರಾಠಿಗರ ವಲಸೆ ದಕ್ಷಿಣದ ಕಡೆಗೆ ಹೆಚ್ಚಿಗೆ ಬರಲಾರಂಭಿಸಿತು ಪುಣೆ ಮುಂತಾದ ಕಡೆಯ ಮರಾಠಿ ಜನರು ದಕ್ಷಿಣ ಪ್ರಾಂತ್ಯಗಳನ್ನು ಗೆಲ್ಲುವಾಗ ಸೈನ್ಯದೊಂದಿಗೆ ಬಂದವರು ಅನೇಕರು ಮರಳಿ ಹೋಗಲಿಲ್ಲ. ಅನುಕೂಲವಾದ ಸ್ಥಳಗಳಲ್ಲಿ ನೆಲೆ ನಿಂತರೂ ಅಲ್ಲದೇ ಸ್ಥಳೀಯರೊಂದಿಗೆ ಬೆರೆತು ಅಲ್ಲಿನ ಸಾಂಸ್ಕೃತಿಕ ಜೀವನದೊಂದಿಗೆ ತಮ್ಮನ್ನು ಬೆರಸಿಕೊಂಡರು.[೭] ಅಲ್ಲದೇ ಕಲಘಟಗಿಯ ಕಲಾವಿದರಾದ ಮರಾಠ ಜನಾಂಗದರವರು ಸಹ ಕಲಘಟಗಿಯಿಂದ ನೈಋತ್ಯಕ್ಕೆ ಯಲ್ಲಾಪುರ ರಸ್ತೆಯಲ್ಲಿ ೧೦.ಕಿಮೀ ದೂರದಲ್ಲಿರುವ 'ಸಾತುಸಹೀದ್' ಎಂಬ ಸ್ಥಳ ಏಳು ಮಂದಿ ಶಹೀದ್ (ಹುತಾತ್ಮ) ರ ಸಮಾಧಿಗಳಿಂದ ಪ್ರಸಿದ್ಧವಾಗಿದೆ. ಸುಮಾರು ೩೫೦ ವರ್ಷಗಳ ಹಿಂದೆ ವಿಜಾಪುರದ ಸೂಫಿಸಂತ ಹಾಶಿಮ್‌ಪೀರನ ಅನುಯಾಯಿಗಳೂ ಅವಳದ ಹಿಂಡಸಗೇರಿಯ ನಿವಾಸಿಗಳು ಆದ ಏಳುಮಂದಿ (ಸಹೋದರರು) ಮಹಮದ ಆದಿಲ್‌ಷಾನಿಂದ ಸನ್ನತ್ತಿ ಪಡೆದು ಅಲ್ಲಿಗೆ ಬಂದು ಕಾಡುಕಡಿದು ನೆಲೆನಿಲ್ಲುವ ಯತ್ನದಲ್ಲಿ ಪ್ರಾಣತ್ಯಾಗ ಮಾಡಿ ಹುತಾತ್ಮರಾದರಂತೆ ಬಹುಶಃ ಇದು ಸೇನಾ ಪಾಳಯವಾಗಿದ್ದು[೮] ಇವರ ಸೇನಾ ಪಾಳ್ಯಯದೊಂದಿಗೆ ಈ ಮೇಲೆ ಹೇಳಿದ ಮರಾಠ ಜನಾಂಗವು ಇದ್ದಿರಬಹುದು ಎಂದು ಊಹಿಸಲಾಗಿದೆ.

ಈ ಪ್ರದೇಶದಲ್ಲಿ ಅರಣ್ಯ ತುಂಬಿದ್ದರಿಂದ ಇಲ್ಲಿ ಸಾಗುವಾನಿ ಶ್ರೀಗಂಧ ಹೊನ್ನೆ, ಬೀಟೆ, ಮಾವು ಇತ್ಯಾದಿ ಮರಗಳು ದೊರೆಯುವದರಿಂದ ಈ ಮರಾಠ ಕಲಾವಿದರಿಗೆ ಅನುಕೂಲವಾಗಿರಬಹುದು. ಕ್ರಿ.ಶ. ೧೬೫೦-೬೦ ರ ಸುಮಾರಿಗೆ ಹುಬ್ಬಳ್ಳಿಯಲ್ಲಿ ತಯಾರಾದ ಮಸ್ಲಿನ್‌ಬಟ್ಟೆ ಕಾರವಾರ ಬಂದರಿನ ಮೂಲಕ ಪರದೇಶಿಗಳಿಗೆ ದೊಡ್ಡ ಪ್ರಮಾಣದಲ್ಲಿ ರಪ್ತು ಆಗುತ್ತಿತ್ತು. ಇಲ್ಲಿ ಬೆಳೆಯುವ ಹತ್ತಿ ದೊಡ್ಡ ಪ್ರಮಾಣದಿಂದ ಕುಮುಟಾ ಬಂದರಿನ ಮೂಲಕ ಪರದೇಶಗಳಿಗೆ ಹೋಗುತಿತ್ತು ಕಾರವಾರದ ಇಂಗ್ಲೀಷ ಕಂಪನಿಗೆ ಇಲ್ಲಿಂದ ವಸ್ತುಗಳನ್ನು ಸಂಗ್ರಹಿಸಲಾಗಿತ್ತು ಮಧ್ಯಕಾಲದಲ್ಲಿ ಹುಬ್ಬಳ್ಳಿಯಿಂದ ಗೋವಾಗೆ ಹಸ್ತಿದಂತ, ಗಂಧದ ಕೆತ್ತನೆಯ ವಸ್ತುಗಳು ರಪ್ತಾಗುತ್ತಿದ್ದರೆ.[೯] ಅದರಲ್ಲಿ ಕಲಘಟಗಿಯ ಕಲಾವಿದರ ವಸ್ತುಗಳು ಇದ್ದಿರಬಹುದು ಎಂದು ಊಹಿಸಲಾಗಿದೆ. ಇಂತಹ ಹಲವಾರು ವಿಚಾರಗಳ ಹಿನ್ನೆಲೆಯಲ್ಲಿ ಈ ಕಲಾವಿದರು ಇಲ್ಲಿ ನೆಲೆಸಿರಬಹುದಾಗಿದೆ.

ಡಾ.ಬಿ.ಕೆ.ಹಿರೇಮಠರವರ "ನಿಜದ ನೆಲೆ" ಗ್ರಂಥದಲ್ಲಿ ಉಲ್ಲೇಖಿಸಿರುವ ಹಾಗೆ ಮರಾಠರು ದೆಹಲಿಯವರಾಗಿದ್ದರು ಮೊಗಲರ ದಾಳಿಯಿಂದ ಹಲವಾರು ಪ್ರದೇಶಗಳನ್ನು ಸುತ್ತಿ ಕೊನೆಗೆ ಕಲಘಟಗಿಯ ಪಟ್ಟಣಕ್ಕೆ ಶಾಶ್ವತ ನೆಲೆಯೂರಿರುವದು ತಿಳಿದುಬರುತ್ತದೆ. ಅಲ್ಲದೆ ಈ ಕಲಾವಿದರ ಪರಿಚಯ ಈ ಕೆಳಗಿನಂತಿದೆ.

ಕಲಘಟಗಿಯ ನಗರದ ಹೃದಯ ಭಾಗದಲ್ಲಿರುವ ರಸ್ತೆಬದಿಗೆ ಹೊಂದಿಕೊಂಡು ಸಣ್ಣ ಮಳಿಗೆಯೊಂದರಲ್ಲಿ ಕರಕುಶಲಕಲೆಯಲ್ಲಿ ನಿರತರಾಗಿರುವ ಸಾವುಕಾರ್ ಮನೆತನದ ಕಲಾಕಾರರು ಕಾಣುತ್ತಾರೆ. ಮೊದಲು ಏಳೆಂಟು ಮನೆತನದವರು ಈ ಚಿತ್ರಕಲೆಯಲ್ಲಿ ತೊಡಗಿಕೊಂಡಿದ್ದರು ಈಗ ಎರಡು ಮನೆತನದವರು ಮಾತ್ರ ಮೂರುನಾಲ್ಕು ತಲೆಮಾರುಗಳಿಂದ ಇದನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈ ಸಾವುಕಾರ ಮನೆತನದವರು ಮೂಲತಃ ಉತ್ತರ ಭಾರತದವರು ದೆಹಲಿ ಇವರ ಪೂರ್ವಜರ ನೆಲೆಯಾಗಿತ್ತೆಂದು ತಿಳಿದು ಬರುತ್ತದೆ. ಮೊಗಲರ ದಾಳಿಯಿಂದ ನಿರಾಶ್ರಿತರಾಗಿ ಜಯಪುರಕ್ಕೆ ಬಂದರಂತೆ ಅಲ್ಲಿಂದ ಕೊಲ್ಲಾಪುರ, ಬೆಳಗಾವ್‌ಗಳಲ್ಲಿ ಹಲವು ವರ್ಷ ವಾಸವಾಗಿದ್ದರು ಧಾರವಾಡ ಜಿಲ್ಲೆ ಹುಲಿಕೊಪ್ಪ ಗ್ರಾಮಕ್ಕೆ ಬಂದು ನೆಲೆಸಿದರಂತೆ ಅಲ್ಲಿಂದ ಈಗ ಕಲಘಟಗಿಗೆ ಬಂದು ಶಾಶ್ವತ ನೆಲೆ ಕಂಡುಕೊಂಡಿರುದಾಗಿ ಹೇಳುತ್ತಾರೆ. ಈಗ ಮೂರನಾಲ್ಕು ತಲೆಮಾರುಗಳಿಂದ ಕಟ್ಟಿಗೆ ಕರಕುಶಲಕಲೆಯಲ್ಲಿ ನಿಪುಣರಾಗಿರುವ ಈ ಕಲಾವಿದರ ಪೂರ್ವಜರು ಅರಿವೆ ಅಂಗಡಿಯಲ್ಲಿ ಕೆಲಸಕ್ಕೆ ಇದ್ದರಂತೆ ಇವರು ಮೂಲತಃ ಮರಾಠಿಗರಾದರೂ ಮಾತೃಭಾಷೆಯಾಗಿ ಕನ್ನಡವನ್ನು ಬಳಸುತ್ತಿದ್ದಾರೆ.[೧೦] ಈ ಮಾತು ಇಂದಿಗೂ ಅನ್ವಯಿಸುತ್ತದೆ.

---

೦೭. ಸೂರ್ಯನಾಥ.ಯು.ಕಾಮತ್ : ಕರ್ನಾಟಕ ರಾಜ್ಯ ಗ್ಯಾಸಟಿಯರ್ ಧಾರವಾಡ ಜಿಲ್ಲೆ, ಪು.೭೫೨ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

೦೮. -ಅದೇ- ಪು. ೯೦೫

೦೯. ಎಂ.ಬಿ.ಪಾಟೀಲ್ : ಹುಬ್ಬಳ್ಳಿ ತಾಲೂಕು ದರ್ಶನ ಪು. ೪೦ ಐ.ಬಿ.ಎಚ್ ಪ್ರಕಾಶನ ಬೆಂಗಳೂರು ೧೯೮೬

೧೦. ಡಾ. ಬಿ.ಕೆ. ಹಿರೇಮಠ ( ಸಂ ) ನಿಜದ ನೆಲೆ ಪು. ೧೫೩ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

ಕಲಘಟಗಿಯ ಚಿತ್ರಗಾರರ ಓಣಿಯಲ್ಲಿರುವ ಘೀರಾಜೆ, ಸಾವುಕಾರ್ ಕುಟುಂಬವು ತೊಟ್ಟಿಲು ತಯಾರಿಕೆಯು ಮೂಲ ವೃತ್ತಿಯಾಗಿತ್ತು. ಕಾರಣ ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಹೆಣ್ಣುಮಕ್ಕಳು ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕೆಂಬ ಸಂಪ್ರದಾಯ ಈ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಹೀಗೆ ಹೆರಿಗೆಯಾಗಿ ಗಂಡನ ಮನೆಗೆ ಹೋಗುವಾಗ ಬಣ್ಣದ ತೊಟ್ಟಿಲೊಂದನ್ನು ಉಡುಗೊರೆಯಾಗಿ ಕೊಡುವ ಪದ್ಧತಿಯಿದೆ ಈ ಕಾರಣಕ್ಕಾಗಿ ಬಣ್ಣದ ತೊಟ್ಟಿಲಿಗೆ ಸಹಜವಾಗಿ ಬೇಡಿಕೆಯಿದೆ. ಇಂಥ ತೊಟ್ಟಿಲುಗಳನ್ನು ಸಿದ್ಧಗೊಳಿಸುವ ಈ ಕಲೆಯನ್ನು ಸಹಜವಾಗಿ ಇಲ್ಲಿಯ ಕಲಾವಿದರು ವಂಶಪಾರಂಪರ್ಯವಾಗಿ ಉಳಿಸಿಕೊಂಡು ಬಂದಿದ್ದಾರೆ. ಒಂದು ಬಣ್ಣದ ತೊಟ್ಟಿಲು ಸಿದ್ಧವಾಗಬೇಕಾದರೆ ಅದು ಹಲವು ಹಂತಗಳನ್ನು ದಾಟಿ ಬರಬೇಕಾಗುತ್ತದೆ.

ಘೀರಾಜೆ ತ. ಸಾವುಕಾರ ಕಲಾವಿದರು ತೊಟ್ಟಿಲು ರಚನೆಯ ಜೊತೆಗೆ ಪರದೆ ಬರೆಯುವುದು ನಾಟಕದಲ್ಲಿ ಪ್ರಮುಖ ಪಾತ್ರ ಮಾಡುವ ಪ್ರತಿಭಾವಂತ ಕಲಾವಿದ ಆಗಿದ್ದು ಆ ಸಮಯದಲ್ಲಿ ಕಲಘಟಗಿಯ ಮಲ್ಲಿಕಾರ್ಜುನ ನಾಟ್ಯಸಂಘದಲ್ಲಿ ಹಲವಾರು ಸ್ನೇಹಿತರೊಂದಿಗೆ ಹಲವಾರು ನಾಟಕಗಳನ್ನು ಆಡಿದ ವ್ಯಕ್ತಿ ಘೀರಾಜೆ .ತ. ಸಾವುಕಾರರಿಗೆ ತಲುಪುತ್ತದೆ. ಇವರು ಆಡಿದ ನಾಟಕಗಳು ಕಾರವಾರ, ಹುಬ್ಬಳ್ಳಿ, ಅಂಕೋಲಾ, ಸವಣೂರು, ಮುಂತಾದ ಪ್ರದೇಶಗಳಲ್ಲಿ ಪ್ರದರ್ಶನಗೊಂಡಿವೆ. ಇವರ ಜನಪ್ರಿಯ ಗಳಿಸಿದ ನಾಟಕಗಳಲ್ಲಿ ಬಿ.ಎ. ನಾಟಕವೆಂದು ಪ್ರಸಿದ್ಧಿ ಪಡೆದಿದೆ. ಎರಡನೆದಾಗಿ ಗರಡು ಮೆಚ್ಚಿದ ಸದಾಶಿವ ಮೂರನೇಯದಾಗಿ ಹಲಗೇರಿಯ ಜೆಟ್ಟೆಪ್ಪನ ಕಥೆ, ಇಂತಹ ಹಲವಾರು ನಾಟಕಗಳಲ್ಲಿ ಪಾತ್ರಮಾಡಿದ ಕಲಾವಿದ ಘೀರಾಜೆಯವರು ತೊಟ್ಟಿಲು ತಯಾರಿಕೆಯಲ್ಲಿಯೂ ಅಷ್ಟೇ ಪ್ರತಿಭಾವಂತರು ಆಗಿದ್ದರು.

**ದಿ. ಘೀರಾಜೆ ತಮ್ಮಣ್ಣ ಸಾವುಕಾರ**

ಘೀರಾಜೆ ಸಾವುಕಾರ ಅವರು ಕಲಘಟಗಿಯ ಕಲೆಯ ಬೆಳವಣಿಗೆಗೆ ಪ್ರಮುಖ ಪಾತ್ರರಾದವರು ಇವರ ಕಾಲದಲ್ಲಿ ಹಲವಾರು ಕಲಾಕೃತಿಗಳನ್ನು ರಚಿಸುವದರೊಂದಿಗೆ ಉನ್ನತ ಮಟ್ಟದ ಕಲಾವಿದನಾಗಿ ಬೆಳೆದರು ತುಂಬಾ ಸೂಕ್ಷ್ಮ ರೇಖಾವಿನ್ಯಾಸದಿಂದ ಕೂಡಿದ ಚಿತ್ರಗಳು ಮತ್ತು ಒಂದೇ ಪ್ರಕಾರದ ತೂಗುತೊಟ್ಟಿಲು ಅಂದಿನ ಕಾಲದಲ್ಲಿ ಹೆಚ್ಚು ಬಳಕೆಯಲ್ಲಿತ್ತು. ಸಾಮಾನ್ಯವಾಗಿ ತೊಟ್ಟಿಲಿನ ಮೇಲೆ ರಾಮಾಯಣ ಮಹಾಭಾರತ, ಹರಿಕಥೆ ನಿಸರ್ಗಚಿತ್ರಣ ಮುಂತಾದವುಗಳು ಕಂಡುಬರುತ್ತವೆ. ಅಲ್ಲದೇ ಇವರ ಮಕ್ಕಳು ತಯಾರಿಸಿದ ತೊಟ್ಟಿಲಿನ ಚಿತ್ರಕ್ಕೂ ಇವರ ಚಿತ್ರದ ರೇಖಾವಿನ್ಯಾಸಕ್ಕೂ ತುಂಬಾ ಬದಲಾವಣೆ ಕಂಡುಬರುತ್ತದೆ. ಈ ಕಲಾವಿದ ಗಾಡದಿಂದ ತಯಾರಿಸಿದ ತೊಟ್ಟಿಲುಗಳಲ್ಲಿ ಬದಲಾವಣೆ ಕಂಡುಬರುತ್ತದೆ. ಇಲ್ಲಿ ಅಂದಿನ ದಿನಮಾನಕ್ಕೆ ತಕ್ಕಂತೆ ತೊಟ್ಟಿಲಿನ ಮೇಲೆ ಚಿತ್ರಗಳ ರೇಖೆಗಳನ್ನು ಸೂಕ್ಷ್ಮವಾಗಿದ್ದು ಕಂಡುಬರುತ್ತದೆ. ಇದಕ್ಕೆ ಮುಖ್ಯಕಾರಣ ಕಲಾವಿದರ ತಾಳ್ಮೆ ಸ್ವತಃ ತಾವೇ ತಯಾರಿಸಿದ ಕುಂಚಗಳೆ ಇದ್ದಿರಬಹುದು ಆದರೆ ಈ ಕಲಾವಿದನಿಗೆ ಯಾವದೇ ಪ್ರಶಸ್ತಿ ಪುರಸ್ಕಾರಗಳು ದೊರೆತ್ತಿಲ್ಲವಾದರೂ ಪೂರ್ವಜರಿಂದ ಬಂದ ಕಲೆಯನ್ನು ಬೆಳಿಸಿದ್ದಾನೆ. ಈ ಕಲಾವಿದ ಮಲ್ಲಿಕಾರ್ಜುನ ನಾಟ್ಯಸಂಘದಲ್ಲಿ ಮುಖ್ಯಪಾತ್ರಧಾರಿಯಾಗಿ ಮತ್ತು ನಾಟಕ ಪರದೆ ಬರೆಯುತ್ತಿದ್ದ ಹಾಗೆಯೇ ಮಕ್ಕಳಿಗೂ ತೊಟ್ಟಿಲು ತಯಾರಿಕೆಯ ಧಾರೆಯರೆದರು. ಘೀರಾಜೆಯವರ ಹಿರಿಯ ಮಗನಾದ ಗಂಗಾಧರ, ಲಕ್ಷ್ಮಣ, ಶಿವಾಜಿಯವರು ತಂದೆಯಂತೆ ಪ್ರತಿಭಾವಂತ ಕಲಾವಿದರಾದರು ಇವರ ತಂದೆಯ ಮರಣಾನಂತರದಿಂದ ಇವತ್ತಿನ ದಿನಮಾನಗಳಲ್ಲಿಯೂ ಅವಿಭಕ್ತ ಕುಟುಂಬದವರಾಗಿದ್ದಾರೆ. ಈ ಕಲಾವಿದರು ಮೂಲತಃ ಮರಾಠರಾದರು ಮಾತೃಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ಮೂರುಜನಅಣ್ಣ ತಮ್ಮಂದಿರು ಇಂದಿಗೂ ಈ ಕಲೆಯ ಬೆಳವಣಿಗೆಗೆ ಶ್ರಮೀಸುತ್ತಿದ್ದಾರೆ.

**ಗಂಗಾಧರ ಘೀ. ಸಾವುಕಾರ**

ಘೀರಾಜೆ. ಸಾವುಕಾರರ ಹಿರಿಯ ಮಗನಾದ ಗಂಗಾಧರವರು ತಂದೆಯಂತೆ ತೊಟ್ಟಿಲು ರಚನೆಯಲ್ಲಿ ಶ್ರೇಷ್ಠವಾದ ಕಲಾಪಿದನಾಗಿದ್ದಾನೆ. ಈ ಕಲಾವಿದನು ಚಿಕ್ಕ ವಯಸ್ಸಿನಲ್ಲಿಯೇ ತೊಟ್ಟಿಲೂ ತಯಾರಿಕೆಯಲ್ಲಿ ಆಸಕ್ತಿ ತೋರೆದು ಈ ಕಾಲಮಾನದಲ್ಲಿ ಈ ಕಲೆಯ ಬೆಳವಣಿಗೆಗೆ ಪ್ರಮುಖ ಪಾತ್ರರಾದರು ಹಾಗೇ ತಮ್ಮಂದಿರಾದ

ಲಕ್ಷ್ಮಣ ಶಿವಾಜಿಯು ಸಹ ತೊಟ್ಟಿಲು ತಯಾರಿಕೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಗಂಗಾಧರ ಅವರ ಬಾಲ್ಯ ಶಿಕ್ಷಣ ಕೇವಲ ಮೂರನೇಯ ಕ್ಲಾಸ್. ತಂದೆಯ ನಂತರ ಇಡೀ ಕುಟುಂಬದ ಜವಾಬ್ದಾರಿಯನ್ನು ಇವರೇ ಹೊತ್ತರು ಅಂದಿನ ದಿನಮಾನಗಳಲ್ಲಿ ಕುಟುಂಬ ನಡೆಸುವುದೆ ಕಷ್ಟವಾಗಿರುತ್ತಿತ್ತು. ಇಂತಹ ಸಂದರ್ಭಗಳಲ್ಲಿ ತೊಟ್ಟಿಲುಗಳನ್ನು ತಯಾರಿಸಿ ಪ್ರತಿದಿನವು ತೊಟ್ಟಿಲನ್ನು ಹೊತ್ತು ಹಳ್ಳಿ ಪಟ್ಟಣಗಳಿಗೆ ತಿರುಗುತ್ತಾ ಮಾರಾಟಮಾಡಿ ಬಂದ ಹಣದಿಂದಲೆ ಕುಟುಂಬ ನಡೆಸುವುದರೊಂದಿಗೆ ತಮ್ಮಂದಿರಾದ ಲಕ್ಷ್ಮಣ, ಶಿವಾಜಿಯವರಿಗೆ ಶಾಲಾ ಶಿಕ್ಷಣಕ್ಕೆ ಆಧಾರವಾಯಿತು ಈ ಹಣದಿಂದ ಲಕ್ಷ್ಮಣ ಅವರ ಶಿಕ್ಷಣ ಬಿ.ಎ. ಪದವಿ ಪಡೆದು ನೌಕರಿ ಮಾಡುತ್ತಾ ತಮ್ಮ ಕುಲಕಸುಬನ್ನು ನಡೆಸಿಕೊಂಡು ಬಂದರು. ಹಾಗೆಯೇ ಶಿವಾಜಿಯು ಬಿ.ಎಸ್ಸಿ ಪದವಿಧರಾಗಿ ಖಾಸಗಿ ಕಂಪನಿಯಲ್ಲಿ ನೌಕರಿಮಾಡುತ್ತಲೇ ತಮ್ಮ ಪಾಲಿನ ತೊಟ್ಟಿಲು ಕೆಲಸವನ್ನು ಅಚ್ಚುಕಟ್ಟಾಗಿ ಪೂರೈಸುತ್ತಾರೆ. ಇದಲ್ಲದೆ ಮನೆತನಕ್ಕೆ ಬಂದ ಸೊಸೆಯಂದಿರಿಗೆ, ಮಕ್ಕಳಿಗೆ ಬರುವ ಪೀಳಿಗೆಗೆ ಎಲ್ಲರಿಗೂ ತಮ್ಮ ಕುಲಕಸುಬಿನ ಮೇಲೆ ತುಂಬಾ ಹೆಮ್ಮೆಯಿಂದ ಹಲವಾರು ಕೆಲಸಗಳಲ್ಲಿ ಬಣ್ಣ ತಯಾರಿಕೆ ,ಇತ್ಯಾದಿಗಳಲ್ಲಿ ಇಡೀ ಕುಟುಂಬವೇ ಪಾಲ್ಗೊಳ್ಳುತ್ತದೆ. ಮುಖ್ಯವಾಗಿ ಪೂರ್ವಜರಿಂದ ಬಂದ ಈ ಕಲೆಯು ಮೂಲ ಬಣ್ಣದೊಂದಿಗೆ ಪ್ರಸ್ತುತ ಕಾಲದಲ್ಲಿಯೂ ನೋಡಬಹುದಾಗಿದೆ.

ಇವರ ತಂದೆಯವರ ಕಾಲದಲ್ಲಿ ತೊಟ್ಟಿಲು ಬೇಕಾದವರಿಗೆ ತೊಟ್ಟಿಲು ತಯಾರಿಸಿ ಅವರ ಇರುವ ಸ್ಥಳಗಳಿಗೆ ಊರುಗಳಿಗೆ ಹೋಗಿ ಕೊಟ್ಟು ಬರುತ್ತಿದ್ದರು ಆ ಸಮಯದಲ್ಲಿ ಈ ಕಲಾವಿದರಿಗೆ ಅಕ್ಕಿ, ಜೋಳ, ಗೋಧಿ ಮುಂತಾದ ಪದಾರ್ಥಗಳನ್ನು ಕೊಟ್ಟು ೨ ರೂಪಾಯಿಯೊಂದಿಗೆ ಕಳುಹಿಸುತ್ತಿದ್ದರು ಅಲ್ಲದೇ ಗೋಡೆಯ ಮೇಲೆ ಚಿತ್ರ ಬರೆಯುವುದು ಬ್ಯಾನರ್ ಬರೆಯುವುದು ಅನಿವಾರ್ಯವಾಯಿತು. ನಂತರದ ದಿನಮಾನಗಳಲ್ಲಿ ಈ ಕಲಾವಿದರು ಇದರಿಂದ ಸೂಕ್ಷ್ಮಚಿತ್ರಣ ಜೀವತುಂಬುವ ರೇಖೆಯನ್ನು ಕಲೆಯುವುದು ಸಾಧ್ಯವಿಲ್ಲ ಎಂದುಕೊಂಡು ತೊಟ್ಟಿಲು ತಯಾರಿಕೆಯನ್ನೇ ಮುಂದುವರೆಸಿದರು ಅದರಿಂದಲೆ ಹೆಸರುಗಳಿಸಿದರು. ಹಾಗೇ ಸ್ಥಳೀಯ ಮಲಪ್ರಭಾ ಗ್ರಾಮೀಣ ಬ್ಯಾಂಕ್ನಿಂದ ಆರ್ಥಿಕ ಸಹಾಯ ಪಡೆದರು. ಆದರೆ ಈ ಕಲಾವಿದರಿಗೆ ಕಲೆಗಾಗಿಯೇ ಇರುವ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಯಾವುದೇ ಪ್ರೋತ್ಸಾಹ, ಸಹಾಯ ದೊರೆತಿಲ್ಲದ ವಿಷಯ ದುಃಖಕರವಾಗಿದೆ. ಆದರೆ ಮುಂದಿನ ದಿನಮಾನಗಳಲ್ಲಿಯಾದರು ಲಲಿತಕಲಾ ಅಕಾಡೆಮಿಯು ಈ ಕಲಾವಿದರ ಕಡೆ ಗಮನಹರಿಸಿ ಪ್ರೋತ್ಸಾಹಿಸಿದರೆ ಈ ಕಲೆಯನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆಸುವುದರೊಂದಿಗೆ ಕಲಾವಿದರಿಗೂ ಗೌರವ ದೊರಕಿದಂತಾಗುತ್ತದೆ. ಇದು ಇಡೀ ಕಲಘಟಗಿಯ ಕಲಾವಿದರ ಪರಿಸ್ಥಿತಿಯಾಗಿದೆ.

ಆದರೆ ವಾರ್ತಾ ಇಲಾಖೆಯಿಂದ ಇವರ ಕಲೆಗೆ ಪ್ರಚಾರ ಸಿಕ್ಕಿದೆ ಹೊರತು ಯಾರು ಕಲಾವಿದರ ಜೀವನ ಕುರಿತು ಯೋಚಿಸಿಲ್ಲ. ಸಂಘ ಸಂಸ್ಥೆಗಳು ಕರಕುಶಲ ಮಂಡಳಿಯವರು ಲಲಿತಕಲಾ ಅಕಾಡೆಮಿಯವರು ಕಲಘಟಗಿಯ ಕಡೆಗೆ ಗಮನ ಹರಿಸಿಲ್ಲ ಅನ್ನಿಸುತ್ತದೆ. ಆದರೂ ಈ ಕಲಾವಿದರಿಗೆ ಸಮಾಜದಲ್ಲಿ ಇವರ ಕಲೆಗೆ ಮೆಚ್ಚಿದ ಹಲವಾರು ಹಿರಿಯ ಗಣ್ಯರು, ಮಂತ್ರಿಗಳು, ಚಿತ್ರನಟರು, ಅಧಿಕಾರಿಗಳು ಇನ್ನು ಮುಂತಾದವರು ಈ ಕಲಾವಿದರಿಗೆ ಕೊಡುವ ಗೌರವಗಳು ಮಾತ್ರ ಸತ್ಯವಾಗಿದೆ. ನಶಿಸಿ ಹೋಗುವಂತಹ ಕಲೆಯನ್ನು ಜೀವನದ ಒಂದು ಭಾಗವಾಗಿ ಇಂದಿಗೂ ಬೆಳೆಸುತ್ತಾ ಬಂದಿರುವ ಉತ್ಸಾಹಿ ಕಲಾವಿದರಾಗಿದ್ದಾರೆ.

**ಶೋಭಾ. ಸಿದ್ದಪ್ಪಾ ಸಾವುಕಾರ**

ಕಲಘಟಗಿಯ ಕಲಾವಿದರಲ್ಲಿ ಪ್ರತಿಭಾವಂತ ಚಿತ್ರಕಲಾವಿದೆ. ತೊಟ್ಟಿಲು ತಯಾರಕರ ಪಟ್ಟಿಯಲ್ಲಿರುವ ದಿ. ಸಿದ್ದಪ್ಪ ,ತಮ್ಮಣ್ಣ ಸಾವುಕಾರರ ಮಕ್ಕಳಾದ ಬಾಲಾಜಿ. ಸಾವುಕಾರ. ಶೋಭಾ ಸಾವುಕಾರ. ಅವರು ತೊಟ್ಟಿಲು ರಚನೆಯ ಪ್ರಮುಖ ವ್ಯಾಪಾರವಾಗಿತ್ತು. ತಂದೆಯ ನಂತರ ಈ ಕುಲಕಸುಬನ್ನು ಮಕ್ಕಳಾದ ಬಾಲಾಜಿಯವರು ಮುಂದುವರೆಸಿದರು ಕೆಲವು ವರ್ಷಾಂತರಗಳು ಕಳೆದ ಮೇಲೆ ಅನಾರೋಗ್ಯದಿಂದ ತೀರಿಹೋದ ಕಲಾವಿದರಾಗಿದ್ದಾರೆ. ಈ ಕಲೆಯನ್ನು ಬೆಳಸುವ ನಿಟ್ಟಿನಲ್ಲಿ ಹಲವಾರು ವರ್ಷಗಳಿಂದ ಶೋಭಾ ಸಾವುಕಾರ ಅವರು ಒಬ್ಬರೆ ಇರುವುದರಿಂದ ತೊಟ್ಟಿಲು ತಯಾರಿಕೆ ನಿಂತೂ ಹೋಗಿದೆ. ಆದರೂ ಶೋಭಾ ಅವರು ಗಣೇಶನ ಚತುರ್ಥಿಯಂದು ಮನೆಯಲ್ಲಿಯೇ ಹಲವಾರು ಮಣ್ಣಿನ ಮೂರ್ತಿಗಳನ್ನು ತಯಾರಿಸುತ್ತಿರುವುದು ಇಂದಿಗೂ ಸಹ ಕಾಣಬಹುದಾಗಿದೆ. ಶೋಭಾ ಕಲಾವಿದೆಯರ ತಂದೆಯಿಂದ ಕಲಿತ ಬಾಲಾಜಿ ಉತ್ತಮ ಕಲಾವಿದನು ಆಗಿದ್ದು, ೧೯೮೯ರಲ್ಲಿ ಕರ್ನಾಟಕ

ಲಲಿತಕಲಾ ಅಕಾಡೆಮಿಯು ಏರ್ಪಡಿಸಿದ ಸಾಂಪ್ರದಾಯಿಕ ಚಿತ್ರಕಲಾ ಶಿಬಿರದಲ್ಲಿ ಭಾಗವಹಿಸಿದ್ದರು ಇದು ಹುಬ್ಬಳ್ಳಿಯ ಡಾ. ಮಿಣಜಿಗಿಯವರ ಆರ್ಟ ಗ್ಯಾಲರಿಯಲ್ಲಿ ( ಇಂದಿರಾ ಗಾಜಿನ ) ಯಲ್ಲಿ ನಡೆದ ಶಿಬಿರವಾಗಿತ್ತು.

ಶೋಭಾ ಕಲಾವಿದೆ ಅವರು ತೊಟ್ಟಿಲು ತಯಾರಿಕೆನಿಂತರೂ ಗಣೇಶ, ನಾಗರಪಂಚಮಿಯ ನಾಗಪ್ಪ ದೇವರು, ಕಾಮನ ಮೂರ್ತಿಶಿಲ್ಪ, ಗೌರಿ ಶಿಲ್ಪ ,ಆನೆಗಳು, ಲಿಂಗು, ಮೂಷಿಕ, ಮಣ್ಣೆತ್ತು ಮುಂತಾದ ಕಲಾಕೃತಿಗಳನ್ನು ರಚಿಸುತ್ತಾರೆ. ಈ ಕಲಾವಿದೆಯರಿಗೆ ಯಾವುದೇ ರೀತಿಯಿಂದ ಅಕಾಡೆಮಿಯ ಸಹಾಯ ದೊರೆತಿಲ್ಲವಾದರು ಇನ್ನೂ ಮುಂದೆಯಾದರೂ ಕರಕುಶಲ ಮಂಡಳಿಯವರು ಕಲಘಟಗಿಯ ಕಲೆಯ ಕಡೆಗೆ ಗಮನ ಹರಿಸುವುದು ಹೆಚ್ಚು ಸೂಕ್ತವಾಗಿದೆ.

**ಕಲಘಟಗಿಯ ಬಡಿಗೇರ ಕಲಾವಿದರ ಹಿನ್ನೆಲೆ**

ವಿಶ್ವಕರ್ಮ ಇವರ ಕೈಕಸುಬನ್ನು ಮಾಡುವ ಒಂದು ಜಾತಿ ಇವರು ತಮ್ಮ ಪರಂಪರಾಗತ ಕೌಶ್ಯಲಕ್ಕೆ ಪ್ರಸಿದ್ಧರಾಗಿದ್ದಾರೆ. ವಿಶ್ವಕರ್ಮ ಜಾತಿಯ ಜನರನ್ನು ಪಾಂಚಾಳರೆಂದು ಕರೆಯುತ್ತಾರೆ. ಇವರಲ್ಲಿ ಚಿನ್ನ, ಬೆಳ್ಳಿ, ಕೆಲಸ ಮಾಡುವ ಅಕ್ಕಸಾಲಿಗಳು, ಕಂಚು, ಹಿತ್ತಾಳೆ, ಕೆಲಸ ಮಾಡುವ ಕಂಚಗಾರರು ಕಬ್ಬಿಣದ ಕೆಲಸ ಮಾಡುವರು ಕಮ್ಮಾರರು ಮರದ ಕೆಲಸಮಾಡುವರು ಬಡಗೇರರೂ ಮತ್ತು ಶಿಲ್ಪ ಕೆಲಸ ಮಾಡುವವರು ಶಿಲ್ಪಿಗಳೆಂದೂ ಕರೆಯುತ್ತಾರೆ. ಕರ್ನಾಟಕದ ಎರಡನೇಯ ಹಿಂದುಳಿದ ವರ್ಗಗಳ ಆಯೋಗದ ಪ್ರಕಾರ ಜಿಲ್ಲೆಯಲ್ಲಿ ೧೯೮೮ರಲ್ಲಿ ಇವರ ಸಂಖ್ಯೆಯು ೫೬.೩೮೮. ಎಂದು ಅಂದಾಜು ಮಾಡಲಾಗಿತ್ತು. ವಿಶ್ವಬ್ರಹ್ಮನ ಐದು ಮುಖಗಳಿಂದ ಹುಟ್ಟಿದ ಮನು, ಮಯ, ತ್ವಷ್ಟ, ಶಿಲ್ಪಿ ಮತ್ತು ವಿಶ್ವಜ್ಞ ಋಷಿಗಳ ಮಕ್ಕಳಾದ ಸನಕ, ಸನಂದನ, ಆಹಬೂವನ, ಪ್ರಾತ್ನಸ ಮತ್ತು ಸುಪರ್ಣರು ಪಾಂಚಾಲರ ಗೋತ್ರದವರೆಂದು ಇವರಿಂದ ಮುಂದೆ ೧೨೫ ಗೋತ್ರಗಳು ಹುಟ್ಟಿದವುವೆಂದು ಹೇಳುತ್ತಾರೆ. ಇವರಲ್ಲಿ ಸಗೋತ್ರದಲ್ಲಿ ವಿವಾಹ ಸಂಬಂಧ ಮಾಡುವ ಸಂಪ್ರದಾಯವಿಲ್ಲ ಇವರ ಕುಲದೇವತೆ ಕಾಳಿಕಾದೇವಿ ಇವರು ಅಮವಾಸ್ಯೆಯ ದಿನ ತಮ್ಮ ಔದ್ಯೋಗಿಕ ಉಪಕರಣಗಳನ್ನು ಪೂಜಿಸಿ ನಂತರ ಅಂದಿನ ಕೆಲಸಕ್ಕೆ ಬಿಡುವು ಕೊಡುತ್ತಾರೆ.

ಇವರಲ್ಲಿ ಪೂರೋಹಿತ ವರ್ಗವಿದೆ. ಇವರಲ್ಲಿ ಉಪನಯನ ಪದ್ಧತಿಯಿದೆ ವಿಧವಾ ವಿವಾಹ ಮತ್ತು ವಿವಾಹ ವಿಚ್ಚೇದನಗಳು ಆಚರಣೆಯಲ್ಲಿ ಇವರು ಕನ್ನಡ ಭಾಷಿಕರು ಹಾಗೂ ಸಸ್ಯಹಾರಿಗಳು, ಇವರು ಹುಟ್ಟು-ಸಾವು ಮೊದಲಾದ ಸಂದರ್ಭಗಳಲ್ಲಿ ಮೈಲಿಗೆ ಆಚರಿಸುತ್ತಾರೆ, ಮೃತರಿಗೆ ಅಗ್ನಿಸಂಸ್ಕಾರ ಮಾಡುತ್ತಾರೆ. ಗುಲ್ಬರ್ಗಾ ಜಿಲ್ಲೆಯ ತಿಂಥಿಣೆ ಮೌನೇಶ್ವರ, ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಲಿಂಗನ ಬಂಡೆಯ ವರವಿ ಮೌನೇಶ್ವರ, ಬೆಳಗಾವಿ ಜಿಲ್ಲೆಯ ಶಿರಸಂಗಿ ಕಾಳಿಕಾಂಬಾ ಮೊದಲಾದವು ಇವರ ಪ್ರಮುಖ ಯಾತ್ರಾ ಸ್ಥಳಗಳಾಗಿವೆ. ನವಲಗುಂದದಲ್ಲಿರುವ ಜಗದ್ಗುರು ಅಜಾತ ನಾಗಲಿಂಗ ಮಹಾಸ್ವಾಮಿ ಮಠವು ಜಿಲ್ಲೆಯಲ್ಲಿ ಇವರ ಹೆಸರಾಂತ ಮಠವಾಗಿದೆ.[೧೧] ಕಲಘಟಗಿಯ ತೊಟ್ಟಿಲು, ದೇವಿಯ ಮೂರ್ತಿಶಿಲ್ಪ ಕಲಾವಿದರು ಬಡಿಗೇರರು ಆಗಿದ್ದಾರೆ. ಈ ಬಡಿಗೇರ ಸಮುದಾಯಗಳು ಹಲವಾರು ತಲೆಮಾರುಗಳಿಂದ ಈ ಕರಕುಶಲ ಕಲೆಯಲ್ಲಿ ಪ್ರಸಿದ್ಧಿ ಪಡೆದಿರುತ್ತಾರೆ. ಇಲ್ಲಿಯ ಮುಖ್ಯ ಕಲಾವಿದರಾದ ಚನ್ನಬಸಪ್ಪ, ಬಡಿಗೇರ, ಗಂಗಾಧರ ಬಡಿಗೇರ, ಮಲ್ಲೇಶಪ್ಪ ಬಡಿಗೇರ, ಶ್ರೀಪಾದ ಬಡಿಗೇರ, ಅಶೋಕ ಬಡಿಗೇರ, ಶಿರಸಪ್ಪಾ ಬಡಿಗೇರ, ಮಾನಪ್ಪ ಬಡಿಗೇರ, ಮುಂತಾದ ಕಲಾವಿದರಾಗಿದ್ದಾರೆ. ಈ ಕಲಾವಿದರುಗಳಿಗೆ ಸ್ಥಳೀಯವಾಗಿ ದೊರಕುವ ಸಾಗುವಾನಿ, ಹೊನ್ನಿ, ಬೀಟೆ, ಶ್ರೀಗಂಧ, ಮಾವು, ಮುಂತಾದವುಗಳಾಗಿವೆ. ಈ ಕಲಾವಿದರ ತಲೆಮಾರುಗಳಿಂದ ಬಂದ ಈ ಮೂರ್ತಿ ಶಿಲ್ಪಕಲೆಯನ್ನು, ತೊಟ್ಟಿಲು ತಯಾರಿಕೆಯನ್ನು ಮುಂದುವರೆಸುತ್ತಿದ್ದಾರೆ.

ಹಾಗೇ ಈ ಕಲಾವಿದರು ನಾಟಕ ಪರದೆ ಬರೆಯುವುದು ಗಣೇಶ ಚತುರ್ಥಿಯಂದು ಗಣೇಶನ ಶಿಲ್ಪ, ಇತ್ಯಾದಿಗಳನ್ನು ರಚಿಸುವುದು ಕಂಡುಬರುತ್ತದೆ. ಈ ಕಲಾವಿದರ ಕುರಿತು ಪರಿಚಯ ಈ ಕಳಗಿನಂತೆ ನೋಡಬಹುದಾಗಿದೆ.

---

೧೧. ಸೂರ್ಯನಾಥ. ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಸಟಿಯರ್ ಧಾರವಾಡ ಜಿಲ್ಲೆ, ಪು. ೨೨೭ ಮೆ॥ ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು ೧೯೯೫

**ಮಲ್ಲೇಶಪ್ಪ ಗಂಗಾಧರ ಬಡಿಗೇರ**

ಕಲಘಟಗಿಯ ತೊಟ್ಟಿಲು ತಯಾರಿಕೆಯಲ್ಲಿ ಹಲವಾರು ಕುಟುಂಬಗಳಿದ್ದು ಅದರಲ್ಲಿ ಮಲೇಶಪ್ಪ, ಗ, ಬಡಿಗೇರ ಕಲಾವಿದರು ಒಬ್ಬರು ಈ ಕಲಾವಿದರ ಇಂದಿನ ಪ್ರಸ್ತುತ ಸ್ಥಿತಿಯು ತೊಟ್ಟಿಲು ವ್ಯಾಪಾರವೇ ಮುಖ್ಯವಾಗಿದೆ. ಆಧುನಿಕ ಯುಗದಲ್ಲಿ ಜೀವನ ಸಾಗಿಸುವುದೇ ಕಷ್ಟವಾಗಿದೆ. ಪೂರ್ವಜರಿಂದ ಬಂದ ಈ ಕಲೆಯನ್ನು ಮುಂದುವರೆಸಿದ ಕಲಾವಿದ ಇಂದು ಮೂಲವರ್ಣಗಳನ್ನು ಬಳಸುವುದು ಬಿಟ್ಟು ಮಾರ್ಕೆಟ್‌ನಲ್ಲಿ ಸಿಗುವ ಸಿದ್ಧ ಮಾಧ್ಯಗಳಾದ ಎನಾಮಲ್ ಪೇಂಟನ್ನು ಬಳಸುತ್ತಾನೆ. ಇದಕ್ಕೆ ಕಾರಣ ಹೆಚ್ಚಿನ ಬಂಡವಾಳ ಹಾಕಿ ಸಾಗುವಾನಿ ಕಟ್ಟಿಗೆ ಖರೀದಿಸುವುದು, ಹಾಗೂ ಅರಗು ದುಬಾರಿಯ ಬೆಲೆಯೇ ಕಾರಣವಾಗಿದೆ. ಆದರೂ ದೇವಿಯಮೂರ್ತಿ, ಕಾಮನಶಿಲ್ಪ, ತೊಟ್ಟಿಲು, ಆಟಿಕೆಯ ವಸ್ತುಗಳನ್ನು ಆಯಿಲ್ ಪೇಂಟನಿಂದಲೆ ತಯಾರಿಸುವಂತಹ ಪರಿಸ್ಥಿತಿ ಬಂದಿದೆ. ಈ ಕಲಾವಿದರಿಗೆ ಸರಕಾರದಿಂದ ಪ್ರೋತ್ಸಾಹ ಸಿಗಬೇಕಾಗಿರುವುದು  ಅವಶ್ಯವಾಗಿದೆ. ಇಲ್ಲವಾದರೆ ಮುಂದಿನ ದಿನಮಾನಗಳಲ್ಲಿ ಈ ಕಲೆಯು ನಶಿಸಿಹೋಗಲಿಕ್ಕೆ ಅನುಮಾನವಿಲ್ಲ.

**ಶ್ರೀಪಾದ ಗಂಗಾಧರ ಬಡಿಗೇರ**

ಈ ಕಲಾವಿದರು ಸಹಿತ ಮೊದಲು ಅರಗಿನ ಬಣ್ಣದಿಂದ ತಯಾರಿಸುತ್ತಿದ್ದ ತೊಟ್ಟಿಲು, ಮೂರ್ತಿಶಿಲ್ಪಗಳು, ಇತ್ಯಾದಿಗಳು ಇಂದು ಮಾರ್ಕೆಟನಲ್ಲಿ ಸಿಗುವ ಸಿದ್ಧವರ್ಣಗಳಿಂದ ಅಂದರೆ ಎನಾಮಲ್ ಪೇಂಟನ್ನು ಬಳಸುವ ಪರಿಸ್ಥಿತಿಗೆ ಬಂದಿದ್ದಾರೆ. ಹಾಗೇ ದೇವಾಲಯದಲ್ಲಿ ಗೋಡೆಗೆ ದೇವಿಯ ವಿವಿಧ ಅವತಾರಗಳನ್ನು ಬರೆಯುವುದು, ಗ್ರಾಮದೇವತೆ, ಗಣೇಶ, ಲಕ್ಷ್ಮೀ, ಸರಸ್ವತಿ, ಶಿವಪಾರ್ವತಿ, ನಂದಿ ಇತ್ಯಾದಿಗಳಲ್ಲದೆ ನಾಟಕ ಪರದೆ ದೇವಾಲಯಗಳಿಗೆ ಬಣ್ಣಬಳಿಯುವ ಕಲಾವಿದರಾಗಿದ್ದಾರೆ. ಹಾಗೇ ಆಗೊಂದು ಇಗೊಂದು ದೇವಿಯ ಮೂರ್ತಿಗಳನ್ನು, ತೊಟ್ಟಿಲುಗಳನ್ನು ತಯಾರಿಸಿ ಜೀವನ ನಡೆಸುತ್ತಿದ್ದಾರೆ. ಮೊದಲು ಈ ಕಲಾವಿದರು ಮನೆಯಲ್ಲಿಯೆ ಕುಳಿತು ತೊಟ್ಟಿಲು ತಯಾರಿಸಿ ಮಾರಾಟಮಾಡುತ್ತಿದ್ದರು. ಇಂದು ಆ ಸ್ಥಿತಿಯು ಉಳಿದಿಲ್ಲ ಈ ಕಲಾವಿದರಿಗೆ ಸಿಗಬೇಕಾದ ಸ್ಥಾನಮಾನ, ಸರಕಾರದ ಆಶ್ರಯವೇ ಕಾರಣವಾಗಿದೆ.

**ಅಶೋಕ ಗಂಗಾಧರ ಬಡಿಗೇರ**

ಅಶೋಕ ಬಡಿಗೇರರು ಚಿಕ್ಕವಯಸ್ಸಿನಲ್ಲಿಯೆ ತಂದೆಯಂತೆ ತೊಟ್ಟಿಲು ತಯಾರಿಕೆಯಲ್ಲಿ ಪರಿಣಿತರು ಆಗಿದ್ದರು. ಇಂದಿನ ಆಧುನಿಕ ಯುಗದಲ್ಲಿ ಹಲವಾರು ವಿನ್ಯಾಸಗಳಿಂದ ಕೂಡಿದ ಕಬ್ಬಿಣದ ತೊಟ್ಟಿಲು, ಪ್ಲಾಸ್ಟಿಕ, ಕುರ್ಚಿ, ಟೀಪಾಯಿ, ಇತ್ಯಾದಿಗಳು ಮಾರುಕಟ್ಟೆಯಲ್ಲಿ ದೊರೆಯುತ್ತಿರುವುದರಿಂದ. ಇವರ ಕಲಾಕೃತಿಗೆ ಬೇಡಿಕೆ ಕಡಿಮೆಯಾಗಿ ಇಂದು ದೇವಿಯ ಮೂರ್ತಿ, ದುರುಗಮುರುಗಿಯವರ ಪೆಟ್ಟಿಗೆ, ತೊಟ್ಟಿಲು ಇತ್ಯಾದಿಗಳನ್ನು ರಚಿಸುತ್ತಾ ಜೀವನ ಸಾಗಿಸುತ್ತಿದ್ದಾರೆ. ಮೊದಲು ಕಲಘಟಗಿಯ ತೊಟ್ಟಿಲುಕೊಳ್ಳುವುದೇ ಒಂದು ರೀತಿಯ ಹಿರಿಮೆಯಾಗಿತ್ತು. ಇಂದು ಸಾಗುವಾನಿ ಕಟ್ಟಿಗೆ ಹಾಗೂ ಅರಗಿನ ಬೆಲೆ ಏರಿಕೆಯಿಂದ ತತ್ತರಿಸಿದ ಕಲಾವಿದರು ಹೆಚ್ಚಾಗಿ ಆಯಿಲ್ ಪೇಂಟನ್ನು  ಉಪಯೋಗಿಸುತ್ತಾರೆ. ಅಲ್ಲದೇ ದೇವಾಲಯದಲ್ಲಿ ಗೋಡೆಗೆ ದೇವಿಯ ಚಿತ್ರ ಬಿಡಿಸುವುದು. ಮತ್ತು ಹಳೆಯ ದೇವತೆಯ ಮೂರ್ತಿಗಳಿಗೆ ಬಣ್ಣಬಳಿಯುವುದು, ದೇವರ ಪಲ್ಲಕ್ಕಿ, ವಾಹನ, ಮುಂತಾದವುಗಳನ್ನು ತಯಾರಿಸುತ್ತಾರೆ. ಇವರ ಚಿತ್ರಗಳಲ್ಲಿ ಸೂಕ್ಷ್ಮತೆ ಕಂಡುಬರುವದಿಲ್ಲ. ಒರಟಾದ ರೇಖಾ ವಿನ್ಯಾಸಗಳು ಕಂಡು ಬರುತ್ತವೆ.

**ತಿಪ್ಪಣ್ಣ ಶಿರಸಪ್ಪಾ ಬಡಿಗೇರ**

ಕಲಘಟಗಿಯ ಪ್ರಸಿದ್ಧ ಕಲಾವಿದರಾದ ಶಿರಸಪ್ಪಾ, ಬಡಿಗೇರ ಅವರ ಮಗನಾದ ತಿಪ್ಪಣ್ಣಾ, ಶಿರಸಪ್ಪಾ, ಬಡಿಗೇರ ಅವರು ತಂದೆಯಂತೆಯೇ ಕಲಾವಿದರಾಗಬೇಕೆಂದು ತಿರ್ಮಾನಿಸಿ ತೊಟ್ಟಿಲು ತಯಾರಿಕೆಯನ್ನು ಚಿಕ್ಕವಯಸ್ಸಿನಲ್ಲೇ ಪ್ರಾರಂಭಿಸಿದರು. ಇದಲ್ಲದೇ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ ಕಾಲೇಜಿಗೆ ಸೇರಿದರು ನಂತರದಲ್ಲಿ ಹಲವಾರು ಕಾರಣಗಳಿಂದ ಹೋಗುವುದೆ ನಿಲ್ಲಿಸಿ ಮನೆಯಲ್ಲಿಯೆ ತೊಟ್ಟಿಲು ತಯಾರಿಕೆಯನ್ನು ತಂದೆಯೊಂದಿಗೆ ಜೊತೆಗೂಡಿ ತಯಾರಿಸುವುದನ್ನು ಕಲಿತರು ಇವರ ತಂದೆಯವರು



ಗಂಗಾಧರ ಅವರ ಮನೆ



ಕಲಾವಿದ ಮಲ್ಲೇಶಪ್ಪ ಬಡಿಗೇರ ಅವರ ಮನೆ



ಶಿಪ್ಪಣ್ಣ ಬಡಿಗೇರ ಮತ್ತು ಅಶೋಕ ಬಡಿಗೇರ ಅವರ ಮನೆಗಳು

ಹಲವಾರು ನಾಟಕ ಪರದೆಗಳನ್ನು ಬರೆಯುವುದರೊಂದಿಗೆ ತೊಟ್ಟಿಲು ತಯಾರಿಕೆಯಲ್ಲಿ ಪ್ರಸಿದ್ಧಿ ಪಡೆದವರಾಗಿದ್ದಾರೆ. ತಿಪ್ಪಣ್ಣಾ, ಬಡಿಗೇರ ಕಲಾವಿದರು ಈ ತಂದೆಯ ಮೂಲ ವೃತ್ತಿಯನ್ನೇ ಮುಂದುವರೆಸಿಕೊಂಡು ಬಂದಿದ್ದಾರೆ. ಇಂದು ತೊಟ್ಟಿಲು ತಯಾರಿಕೆಯೊಂದಿಗೆ ದೇವಿಯ ಶಿಲ್ಪ, ಹಾಗೂ ಬ್ಯಾನರ ಬರೆಯುವ ಕಲಾವಿದರಾಗಿ ಮತ್ತು ಮನೆಯಲ್ಲಿ ಒಂದು ಪೋಟೋ ಸ್ಟೂಡಿಯೋ ಒಂದನ್ನು ನೋಡಿಕೊಳ್ಳುತ್ತಾ ಈ ಕಲೆಯ ಬೆಳವಣಿಗೆಗೆ ದಾರಿದೀಪಗಳಾಗಿದ್ದಾರೆ. ಒಟ್ಟಾರೆ ಹೇಳುವುದಾದರೆ ಕಲಘಟಗಿಯ ಕಲೆಯು ನಶಿಸುವ ಕಾಲ ದೂರವಿಲ್ಲ, ಇದಕ್ಕೆ ಸರಕಾರದಿಂದ ಆಶ್ರಯ ದೊರೆಯುವುದು ತುಂಬಾ ಅವಶ್ಯವಾಗಿದೆ, ಬಹಳ ಹಿಂದೆ ಇದ್ದಂತಹ ಸ್ಥಿತಿ – ಗತಿ ಇಂದು ಇಲ್ಲಿ ಉಳಿದು ಬಂದಿಲ್ಲ, ಸರಕಾರ ಇತ್ತಕಡೆ ಗಮನಹರಿಸಿದರೆ ಈ ಕಲೆಯು ಸಂಸ್ಕೃತಿ, ಕಲಾವಿದರ ಗೌರವ, ಸ್ಥಾನಮಾನ, ಪರಂಪರೆಗೆ ಒಳ್ಳೆಯ ಉಪಕಾರ ಮಾಡಿದಂತಾಗುತ್ತದೆ.

**ರಾಜಶೇಖರ ಚನ್ನಬಸಪ್ಪ ಬಡಿಗೇರ**

ಕಲಘಟಗಿಯ ಚನ್ನಬಸಪ್ಪ. ಮ. ಬಡಿಗೇರ ಅವರು ತೊಟ್ಟಿಲು ತಯಾರಿಕೆಯಲ್ಲಿ ಹೆಸರುಗಳಿಸಿದ್ದರಲ್ಲದೆ. ಇಂದು ಅವರ ಮಕ್ಕಳಾದ ರಾಜಶೇಖರ, ಬಡಿಗೇರರು ಮುಂದುವರೆಸಿಕೊಂಡು ಬರುತ್ತಿದ್ದಾರೆ. ತಲೆತಲಾಂತರಗಳಿಂದ ಬಂದ ಈ ಕಲೆಯನ್ನು ರಾಜಶೇಖರ ಮತ್ತು ಅವರ ಮಕ್ಕಳಾದ ಜಗದೀಶ, ಸತೀಶ, ಎಂಬ ಯುವಕಲಾವಿದರು ತಂದೆಯೊಡನೆ ತೊಟ್ಟಿಲು, ದೇವಿಯ ಮೂರ್ತಿಶಿಲ್ಪ, ಪಲ್ಲಕ್ಕಿ, ಪಾಲಿಕೆ, ಗೌರಿ, ಗಣೇಶ, ಇನ್ನೂ ಮುಂತಾದ ಆಟಿಕೆ ಗೊಂಬೆಗಳನ್ನು ತಯಾರಿಸುತ್ತಾರೆ. ಇವರು ಮೊದಲಿನಿಂದಲೂ ಅಂದರೆ ದಿವಂಗತರಾದ ಚನ್ನಬಸಪ್ಪನವರ ಕಾಲದಲ್ಲಿ ಹೆಚ್ಚಾಗಿ ನಾಟಕ ಪರದೆ ಬರೆಯುವುದು ಮಾತ್ರವಲ್ಲ ತೊಟ್ಟಿಲು ತಯಾರಿಕೆಗೆ ಹೆಚ್ಚು ಬೆಲೆಯಿತ್ತು. ಈ ಕಲಾವಿದರೆ ಹೇಳುವ ಹಾಗೆ ಕಲಘಟಗಿಯ ತೊಟ್ಟಿಲುಕೊಳ್ಳುವುದು ಒಂದು ಹೆಮ್ಮೆಯ ವಿಷಯವಾಗಿತ್ತು. ಇದು ಅಂದಿನ ದಿನಮಾನಗಳಲ್ಲಿ ಇಂದಿಗೂ ಸಹ ಹೆಸರು ಅಳಿಸಿಲ್ಲ ತುಂಬಾ ಬೇಡಿಕೆ ಇದೆ. ಆದರೆ ಅದಕ್ಕೆ ಪೂರಕವಾದ ವಸ್ತುಗಳ ಬೆಲೆಯು ಗಗನಕ್ಕೆ ಏರಿದೆ ಎಂದು ಹೇಳುತ್ತಾರೆ. ಇಂದಿನ ಇಲ್ಲಿಯ ಸಂಪ್ರದಾಯ ಬದ್ಧವಾಗಿ ಮೊದಲ ಹೆರಿಗೆಗೆ ಕಲಘಟಗಿಯ ತೊಟ್ಟಿಲನ್ನೆ ಬಳಸುತ್ತಾರೆ, ಇದು ಹಿಂದಿನಿಂದಲೂ ಇವತ್ತಿನವರೆಗೂ ಬೆಳೆದು ಬಂದ ಈ ಪ್ರದೇಶದ ಸಂಪ್ರದಾಯವಾಗಿದೆ.

ಮೊದಲು ಸುಮಾರು ವರ್ಷಗಳಿಂದ ಕಲಘಟಗಿಯಿಂದ ತೊಟ್ಟಿಲುಗಳು ಮೈಸೂರು ಅರಸರ ಅರಮನೆಗಳಿಗೆ ಹೊಗುತ್ತಿದ್ದವು ಎಂದು ತಿಪ್ಪಣ್ಣಾ, ಬಡಿಗೇರ ಹೇಳುವ ಮಾತು ಇಂಥ ಹಲವಾರು ಬೇಡಿಕೆಯಲ್ಲಿ ಕಲಘಟಗಿಯ ತೊಟ್ಟಿಲುಗಳು ಪ್ರಸಿದ್ಧಿ ಪಡೆದಿವೆ. ಮೂಲ ವರ್ಣವನ್ನೇ ಬಳಸುವುದು ಕಂಡು ಬರುತ್ತದೆ. ತಲೆಮಾರುಗಳಿಂದ ಬಂದ ಕಲೆಯನ್ನು ಬೆಳೆಸುತ್ತೇವೆ. ಎಂದು ಹೆಮ್ಮೆಪಡುತ್ತಾರೆ.

**ಪ್ರದರ್ಶನ ಮತ್ತು ಪ್ರೋತ್ಸಾಹ, ಮಾರಾಟ**

ಈ ಕಲಾವಿದರು ನಾಡಿನ ಬೇರೆ ಬೇರೆ ಭಾಗಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶನಗೊಳಿಸಿದ್ದಾರೆ. ೧೯೮೬ ರಲ್ಲಿ ಮೈಸೂರಿನಲ್ಲಿ ನಡೆದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದಲ್ಲಿ, ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ, ಹುಬ್ಬಳ್ಳಿಯ ಪ್ರಕಾಶ ಹೋಟಲದಲ್ಲಿ, ಧಾರವಾಡದ ಎಂ.ಜಿ.ಬ್ಯಾಂಕನಲ್ಲಿ ಲಕ್ಕುಂಡಿ ಉತ್ಸವದಲ್ಲಿ ಪ್ರದರ್ಶನ ಮಾಡಿದ್ದಾರೆ. ನಾಡಿನ ಗಣ್ಯವ್ಯಕ್ತಿಗಳು, ಅಧಿಕಾರಿಗಳು, ಚಿತ್ರನಟರು ಇವರ ಕಲೆಗಾರಿಕೆಯನ್ನು ಮೆಚ್ಚಿ ಮಾರುಹೋಗಿ ಖರೀದಿಸಿ ಪ್ರೋತ್ಸಾಹಿಸಿದ್ದಾರೆ. ಕಲಾಭಿಮಾನಿಗಳು ಪ್ರಮುಖ ಪತ್ರಿಕೆಗಳಲ್ಲಿ ಇವರ ಚಿತ್ರಕಲೆ ಕುರಿತು ಲೇಖನಗಳನ್ನು ಪ್ರಕಟಿಸಿ ಪ್ರಚಾರಗೊಳಿಸಿದ್ದಾರೆ. ರೇಡಿಯೋ ಟಿ.ವಿ ಗಳಲ್ಲಿ ಇವರ ಕಲೆಕುರಿತು ಸಂದರ್ಶನಗಳು ಪ್ರಸಾರವಾಗಿವೆ.[೧೨] ಸ್ಥಳೀಯ ರೋಟರಿಕ್ಲಬ್ ನಿಂದ ಪ್ರಶಸ್ತಿ ಪುರಸ್ಕಾರಗಳು ದೊರೆತಿವೆ. ಎಂ.ವಾಯ್.ಘೋರ್ಪಡೆಯವರಿಂದ ಪ್ರೋತ್ಸಾಹ ಇತ್ಯಾದಿ ಗಣ್ಯವ್ಯಕ್ತಿಗಳಿಂದಲೂ ದೊರೆತಿವೆ.

ಪ್ರಸ್ತುತ ಕಾಲದಲ್ಲಿ ಹಲವು ಪ್ರದೇಶಗಳಲ್ಲಿಯಂತೆಯೇ ಕಲಘಟಗಿಯ ಕರಕುಶಲ ಕಲೆಗಳು ಉಳಿದು ಬಂದಿರಲು ಬಹುಮುಖ್ಯವಾದ ಕಾರಣವೆಂದರೆ ಕೈಗಾರಿಕೆಯ ಉತ್ಪನ್ನ ವಸ್ತುಗಳಿಗೆ ಇವುಗಳನ್ನು ಹೋಲಿಸಲಾಗಿದ್ದರೂ

೧೨. ಡಾ. ಜಿ.ಕೆ. ಹಿರೇಮಠ ( ಸಂ ) ನಿಜದ ನೆಲೆ ಪು. ೧೫೫ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

ಕೌಶಲ್ಯ ದೃಷ್ಟಿಯಿಂದ ಹೊರತಾಗಿರುವ ಕರಕುಶಲ ವಸ್ತುಗಳನ್ನು ಹೊಂದುವುದು ಬಹಳಷ್ಟು ಜನರಿಗೆ ಪ್ರತಿಷ್ಠೆಯ ಘನತೆಯ ವಿಷಯವಾಗಿದೆ. ಇದರ ಪರಿಣಾಮವಾಗಿ ಪ್ರವಾಸಿಗರು ಹೆಚ್ಚು ಬರುವ ಪ್ರವಾಸಿ ತಾಣಗಳಲ್ಲಿ ಕರಕುಶಲ ವಸ್ತುಗಳ ಅಂಗಡಿಗಳು ಉತ್ತಮ ಸ್ಥಿತಿಯಲ್ಲಿವೆ. ಇದರಿಂದ ಅಂಗಡಿಯ ಯಜಮಾನನಿಗೆ ಲಾಭವೇ ಹೊರತು ಸ್ಥಳೀಯ ಕುಶಲ ಕರ್ಮಿಗಳಿಗೆ ಸಿಗುವ ಲಾಭ ಕಡಿಮೆಯೇ ಎಂದು ಹೇಳಬಹುದು, ಮಾರಾಟ ದೃಷ್ಟಿಯಿಂದ ಸರಕಾರದ ಅಧೀನದಲ್ಲಿರುವ ಸಹಕಾರ ಸಂಘಗಳ ಮೂಲಕ ಕುಶಲಕರ್ಮಿ ತಾವು ಸಿದ್ಧಪಡಿಸುವ ವಸ್ತುಗಳನ್ನು ಮಾರಲು ಅವಕಾಶ ಸಿಕ್ಕಾಗ ಅವನಿಗೆ ಪ್ರಯೋಜನವಾಗಬಹುದು ಆಗ ಕುಶಲಕರ್ಮಿಗಳು ತಮ್ಮ ವಸುಗಳಿಗೆ ಒಳ್ಳೇಯ ಪ್ರೋತ್ಸಾಹ ಸಿಕ್ಕ ಅವನು ತನ್ನ ಸಾಂಪ್ರದಾಯಕ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಹೋಗಬಲ್ಲ ಆದರೆ ವಾಣಿಜ್ಯದ ಬೆನ್ನುಹತ್ತಿಹೊದ ಕರಕುಶಲ ಕಲೆಗಳು ಯಾವದೇ ಪರಂಪರೆಯನ್ನು ಗಣನೀಯವಾದ ರೀತಿಯಲ್ಲಿ ಪ್ರತಿನಿಧಿಸುವುದರ ಬಗ್ಗೆ ಅನುಮಾನ ಇರುತ್ತದೆ.[೧೩] ಇಂತಹ ಒಳ್ಳೆಯ ಪ್ರೋತ್ಸಾಹಗಳು ಕಲಘಟಗಿಯ ಕಲಾವಿದರಿಗೆ ದೊರಕಿದರೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಈ ಕಲೆಯನ್ನು ಬೆಳೆಸುವುದಕ್ಕೆ ಸಾಧ್ಯವಾಗುತ್ತದೆ.

### ಸರಕಾರದ ಆಶ್ರಯ

ಕರಕುಶಲ ಕಲೆಗೆ ವ್ಯಾಪಕವಾಗಿ ವ್ಯವಸ್ಥಿತವಾಗಿ ಬೆಲೆ ಬಂದದ್ದು ಸ್ವಾತಂತ್ರ ನಂತರವೇ ೧೯೫೨ರಲ್ಲಿ ಕರಕುಶಲ ಕೈಗಾರಿಕೆಗಳ ಸಮಿತಿಗೆ ಕಮಲಾದೇವಿ ಚಟೋಪಾಧ್ಯಾಯ ಅಧ್ಯಕ್ಷರಾಗಿ ಬಂದರು. ಅವರು ಕಲಾಕೃತಿಗಳನ್ನು ಗುರುತಿಸಿದಷ್ಟೇ ಅಲ್ಲ ಕಲಾವಿದರಿಗೂ ಸ್ಥಾನಮಾನ ಗೌರವಗಳನ್ನು ತಂದುಕೊಡಲು ಶ್ರಮಿಸಿದರು. ಇದರಿಂದ ದೇಶಕ್ಕೂ ಕಲಾವಿದರಿಗೂ ಲಾಭವಾಯಿತು.[೧೪]

ಕಲಾವಿದರ ಕಲೆಯನ್ನು ಅರಸುತ್ತಾ ಕಮಲಾದೇವಿ ಅವರು ರಾಷ್ಟ್ರದ ಮೂಲೆಗಳನ್ನೆಲ್ಲಾ ಶೋಧಿಸಿದರು. ಅಜ್ಞಾನವಾಗಿ ಅಡಗಿದ್ದ ಕಲಾ ಸಂಪತ್ತನ್ನು ಬೆಳಕಿಗೆ ತಂದರು. ಭಾರತೀಯ ಕಲಾಕೃತಿಗಳ ತಂತ್ರಗಾರಿಕೆ, ರಚನೆ, ಕಲಾತ್ಮಕತೆ ಇತ್ಯಾದಿಗಳನ್ನು ಕುರಿತು ದೇಶ ವಿದೇಶಗಳಲ್ಲಿ ಉಪನ್ಯಾಸ ನೀಡಿದರು. ಕಾರ್ಯಾಗಾರಗಳನ್ನು ರೂಪಿಸಿ, ಕಲಾವಿದರಿಂದ ಪ್ರಾತ್ಯಕ್ಷಿಕೆಗಳನ್ನು ಕೊಡಿಸಿದರು. ಕಲಾವಿದರು ನೆಲಸಿದ್ದ ಪ್ರದೇಶ ಎಂತಹ ಗುಡ್ಡಗಾಡಾಗಿರಲಿ, ಹೊಲಸುತುಂಬಿದ ಪ್ರದೇಶವಾಗಿರಲಿ. ಅವರು ಇರುವಲ್ಲಿಗೆ ಹೋಗುತ್ತಿದ್ದರು. ಕಲೆಯ ಬಗ್ಗೆ ಆಳವಾಗಿ ತಿಳಿಯುತ್ತಿದ್ದರು. ಕಲಾವಿದರ ಕೌಟುಂಬಿಕ ಹಿನ್ನೆಲೆ ಸಾಮಾಜಿಕ ಸ್ಥಿತಿ-ಗತಿಗಳನ್ನು ತಿಳಿದು ಸಾಂತ್ವಾನ ಹೇಳಿ ಧೈರ್ಯ ಸ್ವಾಭಿಮಾನ ಹಾಗೂ ಕೃತಿಗಳ ಬಗ್ಗೆ ಹೆಮ್ಮೆ ಪಡುತ್ತಿದ್ದರು, ಕಲೆಗೆ ಕಲಾವಿದರಿಗೆ ಗೌರವ ತಂದು ಕೊಟ್ಟರು. ಕಲಾಕೃತಿ ರಚನೆಯಿಂದಲೂ ಜೀವನ ಸಾಗಿಸಬಹುದೆಂದು ತೋರಿಸಿಕೊಟ್ಟರು. [೧೫] ಇದರಿಂದ ಕಲಘಟಗಿಯ ಕಲಾವಿದರಿಗೆ ಯಾವ ಪ್ರಯೋಜನವು ದೊರಕಿಲ್ಲವಾಗಿದೆ.

ಕಮಲಾದೇವಿ ಅವರ ಪ್ರಯತ್ನದಿಂದಾಗಿ ಕೇಂದ್ರ ಹಾಗೂ ಹಲವಾರು ರಾಜ್ಯಗಳಲ್ಲಿ ಕ್ರಾಫ್ಟ್ ಹಾಗೂ ಡಿಜೈನ್ ಸೆಂಟರ (ಕರಕುಶಲ ಕಲಾ ಕೇಂದ್ರಗಳು) ಆರಂಭವಾದವು. ಇನ್ನಿಲ್ಲದಂತೆ ನಶಿಸಿ ಹೋಗುತ್ತಿದ್ದ ಭಾರತೀಯ ಕರಕುಶಲ ಕಲೆಗೆ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಪುನರುಜ್ಜೀವನ ನೀಡಿದರು ೧೯೬೨ರಲ್ಲಿ ಇವರು ಕುಗ್ರಾಮವಾದ ಹಲವಾರು ಕುಶಲಕರ್ಮಿಗಳ ಪ್ರದೇಶಗಳಿಗೆ ಭೇಟಿ ನೀಡುತ್ತಿದ್ದರು.[೧೬] ಅಲ್ಲಿಯ ಕಲಾವಿದರ ಪ್ರತಿಭೆಗೆ ಮಾರು ಹೋಗುವುದರೊಂದಿಗೆ ಅವರ ಹೀನಾಯ ಸ್ಥಿತಿಕಂಡು ಮರುಗುತ್ತಿದ್ದರು.

ಕಮಲಾದೇವಿಯವರ ಹುಟ್ಟುಹಾಕಿದ ಡಚ್ ಸರಕಾರದ ನೆರವಿನ ಯೋಜನೆಯೊಂದು ಅಖಿಲ ಭಾರತ ಕರಕುಶಲ ಮಂಡಲಿ ೧೯೫೮-೪೯ ರಲ್ಲಿ ಮಂಜೂರಾತಿ ನೀಡಿತ್ತು. ಇದರ ಮುಖ್ಯ ಉದ್ದೇಶ

೧೩. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೪೯ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೧೪. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೩೨ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೧೫. ಡಾ.ಕರೀಗೌಡ ಬೀಚನಹಳ್ಳಿ : ಕರಕುಶಲ ಕಲೆಗಳು ವಿಶ್ವಕೋಶ-೨ ಪು. ೩೨ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೧೬. ರವಿ ನಾಯಕ್ : ಕಿನ್ನಾಳ ಕಲೆ ಪು. ೬೧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬



ಪೋಲೀಸ್ ವರಿಷ್ಠಾಧಿಕಾರಿ ಕೆಂಪಯ್ಯನವರ
ಮನೆಯಲ್ಲಿ ಕಲಘಟಗಿಯ ಕಲಾಕೃತಿಗಳು



ಮೈಸೂರು ವಿಶ್ವಕನ್ನಡ ಸಮ್ಮೇಳನದಲ್ಲಿ
ಕಲಘಟಗಿಯ ಕಲಾವಿದ



ಎಂ.ವೈ ಘೋರ್ಪಡೆ ಇವರಿಂದ
ಕಲಾವಿದರಿಗೆ ಗೌರವ



ಹಿರಿಯ ಅಧಿಕಾರಿಗಳಿಂದ
ಕಲಾವಿದರಿಗೆ ಗೌರವ

ಕಲಾವಿದರಿಗೆ ವೈವಿಧ್ಯಮಯವಾದ ತರಬೇತಿಯನ್ನು ನೀಡುವುದಾಗಿತ್ತು. ಆದರೆ ಈ ಯೋಜನೆ ಜಾರಿಗೆ ಬರಲಿಲ್ಲ. ಈ ಕಲಾವಿದರ ಏಳಿಗೆಗೆ ಇನ್ನೊಂದು ಯತ್ನವಾಗಿ ೧೯೫೮ ರಲ್ಲಿ ಚಿತ್ರಗಾರ ಕೋ ಆಪ್‌ರೇಟಿವ್ ಸೊಸಾಯಿಟಿಯೊಂದು ೨೯ ಸದಸ್ಯರೊಂದಿಗೆ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಅಂದಿನ ಮೈಸೂರು ಸರಕಾರ ೬೮೦೦/- ಸಾಲ ಹಾಗೂ ೭೩೦೦/- ರೂಪಾಯಿಗಳ ನೆರವನ್ನು ನೀಡಿತು.[೧೭] ಆದರೆ ಕಲಘಟಗಿಯ ಕಲಾವಿದರಿಗೆ ಯಾವುದೆ ರೀತಿಯ ಪ್ರೋತ್ಸಾಹ, ಸರಕಾರದ ಆಶ್ರಯ ದೊರಕಿಲ್ಲದ ವಿಷಯವಾಗಿದೆ. ಈ ಕಲಾವಿದರೆ ಸ್ವತಃ ಸ್ಥಳೀಯ ಬ್ಯಾಂಕವೊಂದರಿಂದ ಸಾಲ ಪಡೆದು ಈ ಕಲೆಯನ್ನು ಬೆಳೆಸುತ್ತಿದ್ದಾರೆ. ಇನ್ನೂ ಮುಂದೆಯಾದರು ಸಂಘ ಸಂಸ್ಥೆಗಳು, ಕೈಗಾರಿಕೆಗಳು, ಅಕಾಡೆಮಿಯವರು ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದವರು ಕಲಘಟಗಿಯ ಕಲಾವಿದರಿಗೆ ನೆರವನ್ನು ನೀಡಿದರೆ ಕಲೆಯನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆಸುವದರೊಂದಿಗೆ ನಮ್ಮ ಸಂಸ್ಕೃತಿ ಪರಂಪರೆ, ಸಂಪ್ರದಾಯ, ನಾಡು ಕಲಾವಿದರ ಸ್ಥಾನಮಾನಕ್ಕೆ ಬೆಲೆ ದೊರಕಿದಂತಾಗುತ್ತದೆ.

**ಕಲಘಟಗಿಯ ಕಲೆಯ ಬೆಳವಣಿಗೆಯ ಕೆಲವು ಅಂಶಗಳು**

ಕಲಘಟಗಿಯ ಕಲೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಹಲವಾರು ತಲೆಮಾರು ಕಳೆದರೂ ಇನ್ನೂ ಹೆಚ್ಚಿನ ಬೆಳವಣಿಗೆಯನ್ನು ಇಂದಿನ ಆಧುನಿಕ ದಿನಮಾನಗಳಲ್ಲಿ ಮಾಡಬಹುದಾಗಿದೆ. ಇದಕ್ಕಾಗಿ ಹೆಚ್ಚಾಗಿ ಪ್ರೇಕ್ಷಣಿಯ ಸ್ಥಳವನ್ನು ಆಯ್ದುಕೊಳ್ಳುವುದು ಹೆಚ್ಚು ಉಪಯುಕ್ತ ಇಂತಹ ಪೀಠೋಪಕರಣಗಳನ್ನು ಹೆಚ್ಚಾಗಿ ಎಲ್ಲ ಜನಾಂಗದವರೂ ಮೆಚ್ಚುತಾರೆ. ಕಾರಣ ಇದಕ್ಕೆ ಮೂಲ ವರ್ಣಬಳಕೆ ನೂರುವರ್ಷದವರೆಗೂ ಮಾಸದ ಬಣ್ಣಗಳ ಮೋಡಿ, ಸುಂದರವಾದ ವರ್ಣವಿನ್ಯಾಸದಿಂದ ಕೂಡಿದ ರಾಮಾಯಣ, ಮಹಾಭಾರತ, ಪೌರಾಣಿಕ, ಕೃಷ್ಣಲೀಲೆ, ಇನ್ನೂ ಮುಂತಾದ ವಸ್ತು ವಿಷಯಗಳು ನೋಡುಗರನ್ನು ಮನಸೆಳೆಯುತ್ತವೆ.

ಇಂತಹ ಹತ್ತು ಹಲವು ವಸ್ತು ವಿಷಯಗಳನ್ನಾದರಿಸಿ ತಯಾರಿಸಿದ ಹಲವಾರು ಪೀಠೋಪಕರಣಗಳ ಘಟಕಗಳನ್ನು ಅಳ್ನಾವರದಲ್ಲಿ ಸ್ಥಾಪಿಸಿ ಹಾಗೇ ಮಂಗಳೂರಿನಲ್ಲಿ, ಮೈಸೂರು, ಬೆಂಗಳೂರುಗಳಲ್ಲದೆ ಮುಖ್ಯವಾಗಿ ಬಳ್ಳಾರಿ ಜಿಲ್ಲೆಯ ಹಂಪೆಯು ಇಂತಹ ಪೀಠೋಪಕರಣಗಳಿಗೆ ಸೂಕ್ತವಾದ ಪ್ರದೇಶವಾಗಿದೆ. ಇಲ್ಲಿ ಈ ಘಟಕ ಸ್ಥಾಪಿಸುವುದರಿಂದ ಕಲಾವಿದರ ಜೀವನ ಸುಖಮಯವಾಗಿರುವುದಲ್ಲದೆ ಲಾಭದಾಯಕವು ಆಗಿದೆ. ದೇಶದ ನಾನಾ ಭಾಗಗಳಿಂದ ಬರುವಂತಹ ವಿದೇಶಿಗರು, ಮತ್ತು ಭಾರತದ ನಾನಾ ರಾಜ್ಯದ ವಿವಿಧ ಜನಾಂಗಗಳು ಹಂಪೆಯ ಇತಿಹಾಸವನ್ನು ನೋಡುವುದರೊಂದಿಗೆ ತಿಳಿದುಕೊಳ್ಳುವುದರೊಂದಿಗೆ ಹಾಗೇ ಕಲಘಟಗಿಯ ಕಲೆಯು ಪ್ರಚಾರ ಇತಿಹಾಸವು ಬೆಳೆಯುವುದಾಗಿದೆ. ಮತ್ತು ರಾಮಾಯಣ, ಮಹಾಭಾರತದ ವಿವಿಧ ರೂಪಕಗಳು ಪೀಠೋಪಕರಣಗಳ ಮೇಲೆ ಮೂಡಿರುವುದರಿಂದ ಇನ್ನೂ ಬೇಡಿಕೆ ಹೆಚ್ಚಾಗುವ ಸಂಭವವಿದೆ. ಇಂತಹ ಪ್ರದೇಶದಲ್ಲಿ ಕರಕುಶಲ ಕೇಂದ್ರಗಳು ಸ್ಥಾಪನೆಯ ಅವಶ್ಯಕತೆಯಿದೆ. ಅದರಲ್ಲಿ ಮುಖ್ಯವಾಗಿ ಪೀಠೋಪಕರಣಗಳಾಗಿವೆ.

ಹಾಗೇ ಶೃಂಗೇರಿ, ಹೊರನಾಡು, ಧರ್ಮಸ್ಥಳ, ಗೋಕರ್ಣಗಳಲ್ಲದೇ ಉತ್ತರ ಕರ್ನಾಟಕದ ಪ್ರಸಿದ್ಧ ಸ್ಥಳವಾದ ಬಿಜಾಪುರ, ಗುಲಬುರ್ಗಾ, ಬಾದಾಮಿ, ಬಾಗಲಕೋಟಿ ಮುಂತಾದ ಪ್ರೇಕ್ಷಣಿಯ ಸ್ಥಳವಾಗಿದೆ. ಇಂತಹ ಪ್ರದೇಶದಲ್ಲಿ ನಾಡಿನ ವಿವಿಧ ಭಾಗದ ಜನರು ಬರುವುದರಿಂದ ಕಲೆಗೆ ಬೇಡಿಕೆ ಹೆಚ್ಚಾಗಬಹುದು ಎಂದು ನನ್ನ ಆಭಿಪ್ರಾಯವಾಗಿದೆ.

ವಿವಿಧ ಪ್ರಕಾರದ ಆಟಿಕೆ ಗೊಂಬೆಗಳು, ಸೋಪಾ, ತೂಗುಮಂಚ, ಟೀಪಾಯಿ, ಕುರ್ಚಿ, ಪಲ್ಲಕ್ಕಿ, ಇನ್ನೂ ಮುಂತಾದ ಪೀಠೋಪಕರಣಗಳು ಹಾಗೂ ದೇವಿಯ ವಿವಿಧ ರೂಪಗಳು ಗುಲಬರ್ಗಾ, ಬಿಜಾಪುರ, ಬೆಂಗಳೂರು, ಮೈಸೂರುನಂತಹ ಪ್ರದೇಶಗಳಲ್ಲಿ ಮನೆಯ ಅಂದ ಚಂದದ ಶೋಭೆಗಾಗಿ ನಿತ್ಯ ಬಳಸುವ ವಸ್ತುಗಳಾಗಿರುವುದರಲ್ಲಿ ಸಂದೇಹವಿಲ್ಲ, ಇಂದಿನ ಆಧುನಿಕ ಯುಗದಲ್ಲಿ ಇಂತಹ ವಸ್ತುಗಳು ಬೆಂಗಳೂರು, ಮೈಸೂರಿನಲ್ಲಿ ಇರುವಂತಹ ಆರ್.ಸಿ.ಸಿ ಬಂಗ್ಲೆಗಳಿಗೆ ತುಂಬಾ ಅವಶ್ಯವಾಗಿದೆ. ಉದಾ: ಡಾ. ರಾಜಕುಮಾರರವರ ಮನೆಗಳಲ್ಲಿ ಕಲಘಟಗಿಯ ಪೀಠೋಪಕರಣಗಳನ್ನು ಕಾಣಬಹುದು. ಹಾಗೆ ಪೋಲಿಸ್ ಅಧಿಕಾರಿ, ಕೆಂಪಯ್ಯನವರ

೧೭. ರವಿ ನಾಯಕ್ : ಕಿನ್ನಾಳ ಕಲೆ ಪು. ೬೨ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬

ಮನೆಯಲ್ಲಿ, ಗಿರೀಶ ಕಾಸರವಳ್ಳಿ ಇವರುಗಳಲ್ಲದೆ ಬೆಂಗಳೂರಿನ ಅನೇಕ ಮನೆಯಲ್ಲಿಯೂ ಸಹ ಕಾಣಬಹುದಾಗಿದೆ. ಹಾಗೇ ಹೈದ್ರಾಬಾದ್, ಕೇರಳ, ಮಹಾರಾಷ್ಟ್ರ, ಮುಂಬೈ, ಆಂದ್ರಪ್ರದೇಶ, ತಮಿಳನಾಡು, ದೆಹಲಿ, ಮುಂತಾದ ಪ್ರದೇಶಗಳಲ್ಲಿ ಕಲಘಟಗಿಯ ಪೀಠೋಪಕರಣಗಳು ಹೋಗಿವೆ. ಇಂತಹ ವಿಚಾರಗಳ ಹಿನ್ನೆಲೆಯಲ್ಲಿ ತುರ್ತಾಗಿ ಘಟಕ ಸ್ಥಾಪಿಸುವುದು ಅವಶ್ಯವಾಗಿದೆ.

*****

ಜನಪದ ಸಮೂಹವು ಈ ನಾಡಿಗೆ ನೀಡಿದ ಅಪಾರ ಕೊಡುಗೆಗಳಲ್ಲಿ ಜನಪದ ಕಲೆಯಾದ ಕಲಘಟಗಿಯ ಕಲೆ ಒಂದು ಪ್ರಮುಖ ಕಲೆಯಾಗಿದೆ. ಆಯಾ ನಾಡಿನ ಸಂಸ್ಕೃತಿಯ ಸೌರಭಕ್ಕೆ ಮೂಲ ಜನಪದವೇ ಆಗಿದೆ ಈ ಆಶಯದ ಹಿನ್ನೆಲೆಯಲ್ಲಿ ಕಲಘಟಗಿಯ ಕಲೆ ಕಿರು ಸಂಶೋಧನಾ ಪ್ರಬಂಧವು ಸಿದ್ಧಗೊಂಡಿದ್ದು ತೊಟ್ಟಿಲು, ತೂಗುಮಂಚ, ಉಯ್ಯಾಲೆ ಮೂರ್ತಿಶಿಲ್ಪ ಮತ್ತು ವಿವಿಧ ಮಾಧ್ಯಮದ ವೈವಿಧ್ಯತೆಯ ಹಿನ್ನೆಲೆಯಲ್ಲಿ ಇಲ್ಲಿ ಒಂಬತ್ತು ಅಧ್ಯಾಯಗಳಲ್ಲಿ ವಿಷಯದ ನಿರೂಪಣೆ ಮತ್ತು ವಿಶ್ಲೇಷಣೆ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಜನಪದ ಕಲೆಗಳು ನಮ್ಮ ಗ್ರಾಮೀಣ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿದ್ದು ಜನಪದ ಕಲೆಗಳೇ ಶಿಷ್ಟಪದ ಕಲೆಗಳಿಗೆ ಭದ್ರ ಬುನಾದಿಯನ್ನು ಹಾಕಿವೆ ಎಂಬುದನ್ನು ಸಮರ್ಥಿಸುತ್ತ ಜನಪದ ಕಲೆಯಾದ ಕಲಘಟಗಿಯ ಕಲೆ, ಕಲಾವಿದರ ಬದುಕು ಸಂಸ್ಕೃತಿಗಳ ಚೌಕಟ್ಟಿನಲ್ಲಿಯೇ ಈ ಕಲೆ ರೂಪಗೊಂಡು ಕ್ರಮೇಣ ಧಾರ್ಮಿಕ ಆಚರಣೆಗೆ ಒಳಗಾಗಿ ತನ್ನ ಅಸ್ತಿತ್ವವನ್ನು ಕಂಡುಕೊಂಡು ಬೆಳೆದು ಬಂದಿದೆ ಇದೇ ಅಧ್ಯಾಯದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೂ ನಡೆದ ಅಧ್ಯಯನಗಳ ಬಗ್ಗೆ ಮತ್ತು ಕಲಘಟಗಿಯ ಕಲೆಯ ಕುರಿತು ಇದುವರೆಗೂ ಬಂದ ಬಿಡಿ ಲೇಖನ, ವಾರಪತ್ರಿಕೆ, ಮುಂತಾದವುಗಳ ಅವಲೋಕನ ಮಾಡಲಾಗಿದೆ. ಗ್ರಾಮೀಣ ಜನರ ಎಷ್ಟೋ ಕಲೆಗಳು ಅವರ ಬದುಕಿನ ಭಾಗವೇ ಆಗಿ ಅಸ್ಪಷ್ಟ ನೆಲೆಯಲ್ಲಿ ಅಸ್ತಿತ್ವದಲ್ಲಿದ್ದು ಕಾಲಕ್ರಮೇಣ ನಾಗರಿಕ ವರ್ಗದವರ ಸಂಪರ್ಕದಿಂದ ಶಿಷ್ಟರೂಪ ತಾಳುತ್ತಾ ಬಂದಿರುವುದನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಲಘಟಗಿ ಕಲೆಯ ಐತಿಹಾಸಿಕ ಹಿನ್ನೆಲೆಯಾಗಿದ್ದು ಕಲಘಟಗಿಯ ಪರಿಸರ, ಸಂಸ್ಕೃತಿ, ಸಂಪ್ರದಾಯ, ಆಚರಣೆ ಮುಂತಾದವು ಹಾಗೆ ಈ ಕಲೆ ಬೆಳೆದು ಬಂದ ಬಗೆ, ಧಾರವಾಡ ಜಿಲ್ಲೆಯಾನ್ನಾಧರಿಸಿ ಹಲವಾರು ಮಠಗಳು, ಹಸ್ತಪ್ರತಿ, ಕಾವ್ಯ, ಕನಕದಾಸರ 'ಶೃಂಗಾರ ತರಂಗಿಣಿ' ಅರಮನೆ ಭಿತ್ತಿಚಿತ್ರ, ಅಂಬಿಗರ ಚೌಡಯ್ಯನ ವಚನ, 'ಉದ್ಧರಣೆ ವಚನದ' ಚಿತ್ರಪಟ ಸುರುಳಿಗಳು 'ಚಿತ್ರಕಥೆ' ಪ್ರಸ್ತಾಪ ಹಾಗೂ ೧೭೯೧ ರಲ್ಲಿ ಇ. ಮೂರ್. ಬರೆದ ಮಿಲಿಟರಿ ಆಪರೇಶನ್ಸ್ ಇನ್ ಬ್ರಿಟೀಷ್ ಕರ್ನಾಟಕ' ದಲ್ಲಿ ಚಿತ್ರ ಪಟಸುರುಳಿ. ವೃತ್ತಿಯ ಮೂಲ ಕೈಗಾರಿಕೆಗಳು, ಕಲಘಟಗಿಯ ಹಿನ್ನೆಲೆ, ವಾಣಿಜ್ಯ ವ್ಯಾಪಾರ, ಕಲಾವಿದರ ಹಿನ್ನೆಲೆ, ಸಾರಿಗೆ ಸಂಪರ್ಕ, ಸಾಹಿತ್ಯ ಕಲೆ, ರಂಗಭೂಮಿ ಮತ್ತು ಜನವರ್ಗ ಆರ್ಥಿಕ ಸ್ಥಿತಿ, ಅರಣ್ಯ, ನದಿ, ಬೆಟ್ಟ, ಮರಾಠರ ಆಳ್ವಿಕೆ, ಬ್ರಿಟಿಷರ್ ಆಳ್ವಿಕೆ, ಮುಂತಾದ ಐತಿಹಾಸಿಕ ಅಂಶಗಳನ್ನು ಆಧಾರ ಸಹಿತವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಲಘಟಗಿ ಕಲೆಯ ಸಿದ್ಧತಾ ಪರಿಕರ ಮತ್ತು ರಚನಾ ವಿಧಿ ವಿಧಾನಗಳ ಕುರಿತು. ಇಲ್ಲಿ ಪ್ರಮುಖವಾಗಿ ಕಾಷ್ಠ ಮಾಧ್ಯಮದ ಹಿನ್ನೆಲೆ, ಸಂಸ್ಕರಣ ಬಣ್ಣ ತಯಾರಿಕೆ, ಕುಂಚ ತಯಾರಿಕೆ, ತೊಟ್ಟಿಲು, ದೇಪಿಯ ಮೂರ್ತಿಶಿಲ್ಪಗಳನ್ನು ತಯಾರಿಸುವುದು. ಅಂಟು, ರಾಳ, ರೋಗಂಧ, ಎಣ್ಣೆ, ಕೇದಗಿ,

ಸಮುದ್ರಕಲ್ಲು, ಒಪ್ಪಹಾಕುವುದು, ಜಲವರ್ಣ, ಅರಗಿನ ಬಣ್ಣ, ಮಣ್ಣು, ಬಟ್ಟೆ, ಗಾಢ, ಉಳಿಗಳು, ಇನ್ನೂ ಮುಂತಾದ ಪರಿಕರಗಳಿಂದ ತೊಟ್ಟಿಲು, ಮೂರ್ತಿಶಿಲ್ಪ ರಚಿಸುವುದಕ್ಕೆ ಪ್ರಮುಖ ಆಧಾರಗಳಾಗಿವೆ. ಎಂಬ ಚರ್ಚೆಯನ್ನು ಈ ಅಧ್ಯಾಯದಲ್ಲಿ ವಿಶೇಷವಾಗಿ ನಡೆಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮಣ್ಣಿನ ಮಾಧ್ಯಮದ ಹಿನ್ನೆಲೆ ಹೇಳುತ್ತಾ ಈ ಮಾಧ್ಯಮದಲ್ಲಿ ರಚನೆಗೊಂಡ ಶಿಲ್ಪಗಳ ಸೌಂದರ್ಯ ಪ್ರಜ್ಞೆ, ಧಾರ್ಮಿಕ ಹಿನ್ನೆಲೆ, ಹಾಗೂ ವೃತ್ತಿಯ ಹಿನ್ನೆಲೆಯಲ್ಲಿ ಬೆಳೆದು ಬಂದಿವೆ. ಎಂಬುದನ್ನು ಸಮರ್ಥಿಸುತ್ತಾ ಜೊತೆಗೆ ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಶಿಲ್ಪಗಳ ಛಾಯಾಚಿತ್ರಗಳನ್ನು ಇಟ್ಟುಕೊಂಡು ಶಿಲ್ಪಗಳನ್ನು ವಿವಿಧ ಪ್ರಕಾರಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಕಲಘಟಗಿಯ ಕಲಾವಿದರು, ಮಣ್ಣಿನ ಮಾಧ್ಯಮದ ಶಿಲ್ಪಗಳಲ್ಲಿ ದೇವತಾ ಶಿಲ್ಪಗಳು, ಅಲಂಕಾರಿಕ ಶಿಲ್ಪಗಳು, ಪ್ರಾಣಿ ಪಕ್ಷಿಗಳು, ಗಣೇಶ ಶಿಲ್ಪಗಳು ಪ್ರಮುಖವಾಗಿದ್ದು ಅವುಗಳನ್ನು ಹಲವಾರು ರೀತಿಯಲ್ಲಿ ವಿಂಗಡಿಸಿ ಅಧ್ಯಯನ ಮಾಡಿರುವುದು ಈ ಅಧ್ಯಾಯದ ವಿಶೇಷತೆಯಾಗಿದೆ.

ಐದನೆಯ ಅಧ್ಯಾಯದಲ್ಲಿ ಕಾಷ್ಠ ಮಾಧ್ಯಮದ ಮಹತ್ವವನ್ನು ತಿಳಿಸುತ್ತಾ, ಸಂಸ್ಕರಣ ಹಂತ, ಮೂರ್ತಿಶಿಲ್ಪಗಳ ಹಿನ್ನೆಲೆ, ತೊಟ್ಟಿಲುಗಳ ಹಿನ್ನೆಲೆ, ಹೇಳಿ. ಹಾಗೆ ವಿವಿಧ ರೀತಿಯ ಪೀಠೋಪಕರಣ ಆಟಿಕೆ ಗೊಂಬೆ ಮುಂತಾದ ವಸ್ತುವಿಷಯಗಳ ಆಳಕ್ಕೆ ಇಳಿದು ನೋಡುವುದಾಗಿದೆ. ತೊಟ್ಟಿಲು, ದೇವಿಯಮೂರ್ತಿ, ಪ್ರಭಾವಳಿ, ಇತ್ಯಾದಿ ಛಾಯಾಚಿತ್ರಗಳನ್ನು, ಅದರಲ್ಲಿ ರಚನಾ ಹಂತದ ಕಲಾಕೃತಿ ಇದರಲ್ಲಿ ತೊಟ್ಟಿಲು ಪ್ರಮುಖವಾಗಿದ್ದು ಅವುಗಳನ್ನು ಹಲವಾರು ರೀತಿಯಲ್ಲಿ ವಿಂಗಡಿಸಿ ಅಧ್ಯಯನ ಮಾಡಿದೆ. ಜೊತೆಗೆ ಚಿತ್ರಗಳ ಹಾವ ಭಾವ ರಸೋತ್ಪತ್ತಿ ಭಂಗಿ, ವರ್ಣಗಳ ಮಿಶ್ರಣ ತುಂಬಾ ಕುತೂಹಲವಾಗಿದ್ದು ಇದರ ಕುರಿತು ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಮಣ್ಣು, ಕಟ್ಟಿಗೆ ಪುಡಿ, ಹುಣಸೇ ಸರಿ, ಥರ್ಮೋಕೊಲ್ ಶಿಟ್, ಚಿಂದಿ ಬಟ್ಟೆ, ಗೋಣಿಚೀಲ, ರಟ್ಟು, ತೇಳುವಾದ ತಗಡು, ಮರದ ತುಂಡು, ಇತ್ಯಾದಿಗಳು ತೀರಾ ಶಾಶ್ವತವಲ್ಲದಂತಹ ಮಾಧ್ಯಮಗಳಲ್ಲಿ ಕಲಘಟಗಿಯ ಶಿಲ್ಪಗಳು ರಚನೆಯಾಗಿದ್ದು ಅವುಗಳನ್ನು ಸಂಕೀರ್ಣ ಮಾಧ್ಯಮದ ಶಿಲ್ಪಗಳೆಂದು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಂಕೀರ್ಣ ಮಾಧ್ಯಮಗಳಲ್ಲಿ ಕಲಘಟಗಿಯ ಕಲಾವಿದರು ಹಲವಾರು ಬಗೆಯ ಶಿಲ್ಪಗಳನ್ನು ರಚಿಸಿದ್ದು ಇಲ್ಲಿ ವಿಶೇಷವಾಗಿ ಗುರುತಿಸಲಾಗಿದೆ. ಹೀಗೆ ರಚನೆಗೊಂಡು ವೈವಿಧ್ಯಮಯವಾಗಿ ಗಮನ ಸೆಳೆಯುವ ಈ ಶಿಲ್ಪಗಳು ಇಂದಿನ ಆಧುನಿಕ ಶಿಲ್ಪಗಳಿಗೆ ಸ್ಫೂರ್ತಿಯನ್ನು ಹಾಗೂ ಪ್ರೇರಣೆಯನ್ನು ನೀಡುವಂಥವುಗಳಾಗಿವೆ. ಅವು ಜನಪದರ ಆಚರಣೆಯ ನಂಬಿಕೆಯಲ್ಲಿ ಮರು ಹುಟ್ಟು ಪಡೆಯುತ್ತಾ ಬೆಳೆದು ಉಳಿದುಕೊಂಡು ಬಂದ ರೋಚಕ ಇತಿಹಾಸ ಈ ಅಧ್ಯಾಯದಲ್ಲಿ ಅನಾವರಣಗೊಂಡಿದೆ.

ಏಳನೆಯ ಅಧ್ಯಾಯದಲ್ಲಿ ಕಲಘಟಗಿಯಲ್ಲಿ ತಯಾರಾಗುವ ತೊಟ್ಟಿಲು, ಮೂರ್ತಿಶಿಲ್ಪ ಇತ್ಯಾದಿಗಳಲ್ಲಿ ಇವರದೇ ಆದ ಪ್ರತ್ಯಕ ಶೈಲಿ ನೋಡಬಹುದಾಗಿದೆ. ಮೂರು-ನಾಲ್ಕು ತಲೆಮಾರುಗಳ ಹಿಂದೆ ಇವರ ಕಲೆಯಲ್ಲಿ ಧಾರವಾಡ ಜಿಲ್ಲೆಯನ್ನು ಆಳಿದ ಅನೇಕಾನೇಕ ಅರಸರ ಪ್ರಭಾವ ಮತ್ತು ಪ್ರೇರಣೆ ಶೈಲಿ, ಇದ್ದಿರಬಹುದು ಅಲ್ಲದೆ ಈ ಜಿಲ್ಲೆಯಲ್ಲಿ ಮರಾಠರ ಆಳ್ವಿಕೆಯು ಹೆಚ್ಚಾಗಿರುವುದರಿಂದ ಮರಾಠರ ಪ್ರಭಾವವು ಹೆಚ್ಚಾಗಿರಬಹುದು. ಇಂದಿನ ಸ್ಪರ್ಧಾತ್ಮಕ ದಿನಮಾನಕ್ಕೆ ತಕ್ಕಂತೆ ಬದಲಾವಣೆಯನ್ನು ಕಂಡಿರುವುದು ಸತ್ಯ. ಹಾಗಾಗಿ ಇಂದು ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಛಾಯಾಚಿತ್ರಗಳು ಮತ್ತು ಕಲಾವಿದರೆ ಹೇಳುವ ಹಾಗೆ ಮುಖ್ಯವಾಗಿ ಛಾಯಾಚಿತ್ರಗಳಲ್ಲಿ ಯಾವುದೇ ರೀತಿಯ ಶೈಲಿ ಕಂಡು ಬಂದಿಲ್ಲ ಹಾಗಾಗಿ ಇದು ಕಲಘಟಗಿಯ ಶೈಲಿ ಎಂದು ತಿಳಿದು ತಂತ್ರ ಪ್ರಭಾವ ಶೈಲಿ ಪ್ರೇರಣೆ ಬಗ್ಗೆ ವಿವರವಾದ ಅಧ್ಯಯನ ಇಲ್ಲಿ ನಡೆಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಕಲಾವಿದರ ಪ್ರಸ್ತುತ ಸ್ಥಿತಿ-ಗತಿ ಸರಕಾರದ ಆಶ್ರಯವಾಗಿದ್ದು ಇಲ್ಲಿ ಕಲಾವಿದರ ಇಂದಿನ ಪರಿಸ್ಥಿತಿ, ಕುರಿತು ಸಂಪೂರ್ಣವಾಗಿ ಚರ್ಚಿಸಿ ಮತ್ತು ಸರಕಾರದಿಂದ ಕಲಾವಿದರಿಗೆ ದೊರೆತ ಸೌಲಭ್ಯದ ಕುರಿತು ವಿವರಣೆ ಹಾಗೂ ಪ್ರಶಸ್ತಿ ಪಡೆದ ಪ್ರಮುಖ ಕಲಾವಿದರು ಇನ್ನೂ ಇತ್ಯಾದಿ ಕಲಾವಿದರ ಕುರಿತು ಅಧ್ಯಯನ ನಡೆಸಲಾಗಿದೆ.

ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು ಎಂಟೂ ಅಧ್ಯಾಯಗಳಲ್ಲಿ ಹೊರಹೊಮ್ಮುವ ಪ್ರಮುಖ ಫಲಿತಗಳನ್ನು ಇಲ್ಲಿ ಬಿಂಬಿತಗೊಂಡಿವೆ.

ದೃಶ್ಯಕಲಾ ಕ್ಷೇತ್ರದಲ್ಲಿ ಕೈಯಾಡಿಸಿ ಅನುಭವ ಹೊಂದಿರುವ ಕಲಾವಿದರು ಕಲಾ ಸಂಶೋಧನಾಸಕ್ತರು ಈ ಬಗೆಯ ಅಧ್ಯಯನ ಕೈಗೊಳ್ಳಲು ಗ್ರಾಮೀಣ ಜನಪದ ಕಲಾಲೋಕದಲ್ಲಿ ಇನ್ನೂ ಸಾಕಷ್ಟು ವಿಷಯಗಳು ಅಡಗಿವೆ. ಅವುಗಳ ಅಧ್ಯಯನದ ಜೊತೆಗೆ ಅವು ದೃಶ್ಯ ಪ್ರಪಂಚದಿಂದ ಮಾಯವಾಗದಂತೆ, ಮರೆತುಹೋಗದಂತೆ ಅವುಗಳ ಸಂಗ್ರಹದ ಕಾರ್ಯವು ಅಗತ್ಯವಾಗಿದೆ. ಈ ಕಾರ್ಯ ಇನ್ನಷ್ಟು ತೀವ್ರಗೊಳ್ಳಬೇಕಿದೆ. ಈ ಹಿನ್ನೆಲೆಯಲ್ಲಿ ಜನಪದ ಕಲೆಯಾದ ಕಲಘಟಗಿ ಕಲೆಯ ಕುರಿತು ಈ ಸಂಶೋಧನೆ ಪ್ರಾತಿನಿಧಿಕವಾದ ಮತ್ತು ಅಧ್ಯಯನದ ಪರಿಮಿತಿಯಲ್ಲಿ ಅತ್ಯಂತ ಸ್ಥೂಲವಾದ ಮಾದರಿಗಳ ಅಧ್ಯಯನವಾಗಿದೆ. ಇನ್ನೂ ಈ ಕಲೆಯನ್ನು ವ್ಯಾಪಕವಾಗಿ ತೌಲನಿಕವಾಗಿ, ಸಾಂಸ್ಕೃತಿಕವಾಗಿ, ಜನಪದೀಯವಾಗಿ ಹೀಗೆ ಹಲವಾರು ನೆಲೆಗಳಿಂದ ಅಧ್ಯಯನ ಮಾಡಲು ಈ ಕಿರು ಪ್ರಬಂಧ ಒಂದು ಕಿರು ಆಕರ ಸಾಮಗ್ರಿಯಾದರೆ ನಮ್ಮ ಶ್ರಮ ಸಾರ್ಥಕವೆಂದುಕೊಳ್ಳಲಾಗಿದೆ.

**ಪ್ರಸ್ತುತ ಅಧ್ಯಯನದಿಂದ ಹಲವು ಹೊಸ ಅಂಶಗಳು, ಫಲಿತಗಳು ಹೊರಬಂದಿವೆ.**

೧. ಕಲಘಟಗಿಯ ಕಲೆಯ ವೈಶಿಷ್ಟ್ಯಗಳಲ್ಲಿ ವರ್ಣಗಾರಿಕೆಯು ಅತ್ಯಂತ ಮಹತ್ವದಾಗಿದೆ. ಕಲಾವಿದರೆ ನೈಸರ್ಗಿಕವಾಗಿ ದೇಶಿಯವಾಗಿ ತಯಾರಿಸುವ ಬಣ್ಣಕ್ಕೆ ಅರಗಿನ ಬಣ್ಣವೆನ್ನುತ್ತಾರೆ. ಇದನ್ನು ಲಾಕ್ ವರ್ಣವೆಂದು ಕರೆಯುತ್ತಾರೆ.

೨. ಶಿಷ್ಟ ಶಿಲ್ಪಗಳಲ್ಲಿಯ ಸೂಕ್ಷ್ಮಗಾರಿಕೆ, ಪ್ರಮಾಣ ಬದ್ಧತೆಯ ಸೌಂದರ್ಯ ನಿಷ್ಪತೆ ಕಂಡುಬಂದರೆ ಕಲಘಟಗಿಯ ಕಲಾವಿದೆಯರ ಮಣ್ಣಿನ ಗೊಂಬೆಗಳಲ್ಲಿ ಸಹಜತೆ, ಮುಗ್ಧತೆಗಳು ವಿಶೇಷ ವಿನ್ಯಾಸದಿಂದ ಮೂಡಿಬಂದಿವೆ.

೩. ಕಲಘಟಗಿಯ ಚಿತ್ರಗಾರರು ತಮ್ಮ ಚಿತ್ರ ಶಿಲ್ಪಗಳಲ್ಲಿ ಸ್ಥಳೀಯ ಪ್ರಾದೇಶಿಕ ಹಿನ್ನೆಲೆಯ ಜಾನಪದ ಅಂಶಗಳನ್ನು ಮೈಗೂಡಿಸಿಕೊಂಡಿರುವ ಅಂಶ ಅವರ ಕಲಾಕೃತಿಗಳಲ್ಲಿ ಪ್ರಮುಖವಾಗಿ ಗುರುತಿಸಬಹುದು. ಉದಾಹರಣೆಗೆ ಉಡುಗೆ, ತೊಡುಗೆ, ಹಬ್ಬ-ಹರಿದಿನ, ಉತ್ಸವ, ಸಂಪ್ರದಾಯ ಮುಂತಾದವುಗಳು.

೪. ಯಾವುದೇ ಪ್ರತಿಷ್ಠಿತ ತರಬೇತಿಯ ಕಲಾಸಂಸ್ಥೆಯ ಪದವಿಧರರಿಗೂ ಕಡಿಮೆ ಇಲ್ಲದಂತೆ ತಮ್ಮ ಕಲಾ ಪ್ರಾವಿಣ್ಯತೆಯನ್ನು ಗ್ರಾಮೀಣ ಪ್ರದೇಶದ ಈ ಕಲಾವಿದರು ಹೊಂದಿದ್ದಾರೆ.

೫. ಕಲಘಟಗಿಯ ತೊಟ್ಟಿಲು, ಶಿಲ್ಪಕಲಾಕೃತಿಗಳು ಮುಖ್ಯವಾಗಿ ಧಾರ್ಮಿಕ ಹಾಗೂ ವೃತ್ತಿಯ ಮೂಲದ ಹಿನ್ನೆಲೆಯಲ್ಲಿ ಬೆಳೆದು ಬಂದು ಮುಂದೆ ಸೌಂದರ್ಯ ಮೂಲದ ಕಲೆಗಳಾಗಿ ಆಕಾರ ಪಡೆದಿವೆ.

೬. ಇತರ ಕಲಾ ಪ್ರಕಾರಗಳ ಜೊತೆಗೆ ಚಿತ್ರಕಲೆಯನ್ನು ಹಾಗೂ ಬಣ್ಣದ ತೊಟ್ಟಿಲುಗಳನ್ನು ಈ ಭಾಗದ ಜನತೆ ಪ್ರಮುಖವಾಗಿ ಪೋಷಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

೭. ದೇವಿಯ ಮುಖ್ಯ ಶಿಲ್ಪಗಳೊಂದಿಗೆ ವಿಷ್ಣುವಿನ ದಶಾವತಾರಗಳನ್ನು ರಚಿಸಿದ್ದಾರೆ.

೮. ಮುಖ್ಯ ಚಿತ್ರಗಳ ಹಿನ್ನೆಲೆಯಲ್ಲಿ ಕಾಲಿ ಇರುವ ಜಾಗೆಯನ್ನು ತುಂಬಲು ನೀಲಿ ಆಕಾಶ, ಸಮುದ್ರ, ಗಿಡ, ಮರ ಬಳ್ಳಿಗಳೊಂದಿಗೆ ಕಂಬಗಳು ಕಮಾನುಗಳನ್ನು ರಚಿಸಿದ್ದಾರೆ.

೯. ಕಲಘಟಗಿಯ ಪ್ರದೇಶವು ಸಂಗೀತ ನಾಟಕ ಸಾಂಸ್ಕೃತಿ, ಸಂಪ್ರದಾಯ, ಆಚರಣೆ, ಧಾರ್ಮಿಕ, ಓಸ್ನೆಲೆ ಮತ್ತು ಮಡಿಕೆ ತಯಾರಿಕೆ, ಹಣತೆ, ಬುಟ್ಟಿ ತಯಾರಿಕೆ, ಒಲೆಯು ತಯಾರಿಸುವುದು ಇಟ್ಟಿಗೆ ತಯಾರಿಕೆ ಪೀಠೋಪಕರಣ ತಯಾರಿಕೆ ಮುಂತಾದ ಪ್ರಕಾರಗಳ ಕಲೆಗಳ ಘಟ್ಟವಾಗಿ ಬೆಳೆದು ಬಂದಿದೆ.

೧೦. ಚಿತ್ರಗಳಲ್ಲಿ ಪ್ರಮುಖವಾಗಿ ತೊಟ್ಟಿಲಿಗೆ ಕೆಂಪು, ಹಳದಿ, ವರ್ಣಗಳನ್ನೇ ಬಳಸಲಾಗಿದೆ.

೧೧. ಮಹಿಳೆಯರ ಉಡುಪುಗಳಿಗೆ ಕೆಂಪು, ಹಸಿರು, ನೀಲಿ, ಹಳದಿ, ಹಸಿರು, ಜಾಂಬಳಿ, ಕೇಸರಿ, ವರ್ಣಗಳನ್ನು ಪ್ರಮುಖವಾಗಿ ಬಳಸಿದ್ದಾರೆ.

೧೨. ಚಿತ್ರಗಳು ರೇಖಾ ಪ್ರಧಾನವಾಗಿದ್ದು ಶಕ್ತಿಶಾಲಿ ಹೊರರೇಖೆಗಳನ್ನು ಹೊಂದಿವೆ. ಹೊರರೇಖೆಯನ್ನು ಕೆಂಪು ಮಿಶ್ರಿತ ಕಪ್ಪು ವರ್ಣದಿಂದ ಎಳೆಯಲಾಗಿದೆ.

೧೩. ಚಿತ್ರಗಳ ಹಿನ್ನೆಲೆಯಲ್ಲಿ ಹೆಚ್ಚಾಗಿ ನಿಸರ್ಗಚಿತ್ರಗಳನ್ನೇ ಬಳಸಿದ್ದು ಕಂಡುಬರುತ್ತದೆ. ಅಲ್ಲದೆ ಪ್ರಾಣಿ, ಪಕ್ಷಿಗಳು, ನದಿಬೆಟ್ಟ, ಗಿಡಮರ ಬಳ್ಳಿಗಳು, ಹೂಬಳ್ಳಿಯ ನಕ್ಷಾವಿನ್ಯಾಸಗಳು ಕಂಡುಬರುತ್ತವೆ.

೧೪. ದೇವತೆಗಳ ಚಿತ್ರಗಳಲ್ಲಿನ ಕಿರೀಟಗಳಲ್ಲಿ ವೈವಿಧ್ಯತೆ ಇದ್ದು ೩ ರಿಂದ ೪ ಬಗೆಯ ಕಿರೀಟಗಳನ್ನು ಕಾಣಬಹುದಾಗಿದೆ.

೧೫. ಚಿತ್ರಗಳಲ್ಲಿ ಹಲವಾರು ಅರಸರ ಪ್ರಭಾವ ಪ್ರೇರಣೆಗೆ ಕಲಘಟಗಿ ಕಲೆಯು ಅಂದು ಒಳಗಾದರು ಇಂದು ಇವರದೆಯಾದ ಶೈಲಿಯಲ್ಲಿ ಗುರುತಿಸಿಕೊಂಡಿದ್ದಾರೆ.

ಹೀಗೆ ವಿವಿಧ ಮಾಧ್ಯಮಗಳಲ್ಲಿ ರೂಪತಳೆದ ಈ ಕಲೆಯನ್ನು ಕುರಿತು ಸ್ಥೂಲವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ನೂರಾರು ವರ್ಷಗಳಿಂದ ಒಂದಿಲ್ಲಾ ಒಂದು ಬಗೆಯಲ್ಲಿ ನಮ್ಮ ಜನಪದ ಆಚರಣೆ, ನಂಬಿಕೆಗಳ ಹಿನ್ನೆಲೆಯಲ್ಲಿ ಈ ಕಲೆ ಇಂದಿಗೂ ಉಳಿದುಕೊಂಡು ಬಂದಿದೆ. ಈ ಮೂಲಕ ಇದುವರೆಗೆ ಅಲಕ್ಷಿತವಾಗಿದ್ದ ಈ ಕ್ಷೇತ್ರದ ಅಧ್ಯಯನವನ್ನು ಇಲ್ಲಿ ನಡೆಸಲಾಗಿದೆ. ವಿಶೇಷವಾಗಿ ಕಲಘಟಗಿಯ ಚಿತ್ರ, ಶಿಲ್ಪಗಳು, ತೊಟ್ಟಿಲು, ಪೀಠೋಪಕರಣಗಳು ಬೆಳೆದು ಬಂದ ಮಾಧ್ಯಮಗಳು ಹಾಗೂ ಅವುಗಳ ರಚನೆಗೆ ಸಂಬಂಧಿಸಿದಂತೆ ವಿವಿಧ ಮಾಧ್ಯಮಗಳ ಸಾಧ್ಯತೆಗಳನ್ನು, ತಂತ್ರಗಾರಿಕೆಗಳನ್ನು ಮತ್ತು ಅವುಗಳನ್ನು ರಚಿಸುವ ಕಲಾವಿದರನ್ನು ಕುರಿತು ಇಲ್ಲಿ ಪ್ರಥಮ ಬಾರಿಗೆ ಚರ್ಚೆಗೆ ಒಳಪಡಿಸಲಾಗಿದೆ.

ಶಿಷ್ಟ ಶಿಲ್ಪಗಳಂತೆ ಅಧ್ಯಯನಕ್ಕೆ ಗ್ರಾಸವಾಗದೇ ಬಹು ಕಾಲದಿಂದ ಅಲಕ್ಷಿತವಾಗಿಯೇ ಉಳಿದು ಬಂದಿರುವ ನೂರಾರು ವೈವಿಧ್ಯಮಯ ಜನಪದ ಚಿತ್ರ, ಶಿಲ್ಪಗಳು ಕಲಾತ್ಮಕ ನೆಲೆಯಿಂದಲೂ ಪ್ರಸ್ತುತವಾದವುಗಳೆಂದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಜನಪದ ಮೂಲದ ಕಲಘಟಗಿ ಕಲೆಯನ್ನು ಅಧ್ಯಯನ ಮಾಡಲಾಗಿದೆ. ಅಧ್ಯಯನಾಸಕ್ತರು ಈ ಕ್ಷೇತ್ರದ ಕಡೆಗೆ ಗಮನಹರಿಸಿದಲ್ಲಿ ಕಲಘಟಗಿಯ ಕಲೆಯ ಸಾಕಷ್ಟು ಕಲಾ ಪ್ರಕಾರಗಳು ಇನ್ನೂ ಬೆಳಕಿಗೆ ಬರುವುದರಲ್ಲಿ ಅನುಮಾನವಿಲ್ಲ ಎಂದು ಹೇಳುತ್ತಾ ಪ್ರಸ್ತುತ ಸಂಪ್ರಬಂಧವನ್ನು ಸಮಾರೋಪಿಸಲಾಗಿದೆ.

*****


ಉತ್ತರ
ಬೀದರ್
ಗುಲಬರ್ಗಾ
ಬಿಜಾಪುರ
ಬೆಳಗಾವಿ
ಬಾಗಲಕೋಟ
ರಾಯಚೂರು
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಚಿಕ್ಕಮಗಳೂರು
ತುಮಕೂರು
ಉಡುಪಿ
ಬೆಂಗಳೂರು ನಗರ
ಹಾಸನ
ದಕ್ಷಿಣ ಕನ್ನಡ
ಬೆಂಗಳೂರು ಗ್ರಾಮೀಣ
ಮಂಡ್ಯ
ಕೊಡಗು
ಮೈಸೂರು
ಚಾಮರಾಜನಗರ

## ಗ್ರಂಥಋಣ


೧. ಅರಣ್ಯ ಶಾಸ್ತ್ರ — ಅಜ್ಜಂಪುರ ಕೃಷ್ಣಸ್ವಾಮಿ
ಸ್ವರ್ಣಾಂಬ ಪ್ರಕಾಶನ್ ಬೆಂಗಳೂರು ೧೯೯೧

೨. ಆಚರಣೆಯಲ್ಲಿ ಜನಪದ ವಾಸ್ತು ಶಿಲ್ಪಗಳು — ಡಾ. ಎಸ್.ಸಿ. ಪಾಟೀಲ
ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೬

೩. ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ — ಡಾ. ಯಾದಪ್ಪ. ಪರದೇಶಿ
ಅ.ಪ್ರ. ಪಿಹೆಚ್.ಡಿ ಮ.ಪ್ರ. ಕನ್ನಡ ವಿಶ್ವವಿದ್ಯಾಲಯ,
ಹಂಪಿ ೨೦೦೧

೪. ಕರ್ನಾಟಕ ಜನಪದ ಚಿತ್ರಕಲೆ — ಡಾ. ಎಸ್.ಸಿ.ಪಾಟೀಲ
ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

೫. ಕಲಾಸಂವೇದನೆಯ ಒಳನೋಟಗಳು — ಕೆ.ವಿ. ಸುಬ್ರಹ್ಮಣ್ಯಂ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರ ೧೯೯೭

೬. ಕರ್ನಾಟಕದ ಜನಪದ ಶಿಲ್ಪಕಲೆ — ಡಾ. ಶಿವಾನಂದ ಬಂಟನೂರು
ಅ.ಪ್ರ. ಪಿಹೆಚ್.ಡಿ ಮ.ಪ್ರ. ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೨

೭. ಕರ್ನಾಟಕ ಭಿತ್ತಿಚಿತ್ರ ಪರಂಪರೆ — ಡಾ. ಅ.ಲ.ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರ ೧೯೯೮

೮. ಕರಕುಶಲ ಕಲೆಗಳು ವಿಶ್ವಕೋಶ-೨ — ಸಂ.ಡಾ. ಕರೀಗೌಡ. ಬೀಚನಹಳ್ಳಿ
ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೯. ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ — ಕೆ.ವಿ. ಕಾಳೆ.
ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೧೦. ಕರ್ನಾಟಕದ ರಥ ಶಿಲ್ಪಕಲೆ — ಡಾ. ಶಿವಪ್ರಕಾಶ. ತುಕ್ಕಣ್ಣವರ
ಅ.ಪ್ರ. ಪಿಹೆಚ್.ಡಿ ಮ.ಪ್ರ. ಕನ್ನಡ ವಿಶ್ವವಿದ್ಯಾಲಯ
ಹಂಪಿ ೨೦೦೪

೧೧. ಕರ್ನಾಟಕ ಚರಿತ್ರೆ ಸಂಪುಟ ೧ — ಪ್ರೊ. ಬಿ. ಷೇಕ್ ಅಲಿ
ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭

೧೨. ಕರ್ನಾಟಕ ಪ್ರಾಗಿತಿಹಾಸ ಕಾಲದಕಲೆ — ಅ.ಸುಂದರ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರ ೧೯೯೪

೧೩. ಕರ್ನಾಟಕ ರಾಜ್ಯ ಗ್ಯಾಸೆಟಿಯರ ಧಾರವಾಡ ಜಿಲ್ಲೆ — ಸೂರ್ಯನಾಥ ಕಾಮತ
ಮೆ॥ ಪರಿಶ್ರೀ ಪ್ರಿಂಟರ್ಸ ಬೆಂಗಳೂರು ೧೯೯೫

೧೪. ಕಲಾವಾರ್ತೆ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರ ೨೦೦೨ — ಟಿ.ಎನ್. ಕೃಷ್ಣಮೂರ್ತಿ

೧೫. ಕನ್ನಡ ಜಾನಪದ ವಿಶ್ವಕೋಶ ಸಂಪುಟ ೨
ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫ — ಡಾ. ಚಂದ್ರಶೇಖರ ಕಂಬಾರ

೧೬. ಕನ್ನಡ ಜಾನಪದ ವಿಶ್ವಕೋಶ ಸಂಪುಟ-೧
ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫ — ಡಾ. ಚಂದ್ರಶೇಖರ ಕಂಬಾರ

೧೭. ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ
ಪ್ರಭಾ ಪ್ರಿಂಟರ್ಸ್ ಬೆಂಗಳೂರು ೧೯೯೫ — ಆರ್. ಎ. ಶಾಂತರಾಜ್

೧೮. ಕೈಗಾರಿಕಾ ಸಮಾಜಶಾಸ್ತ್ರ
ಸ್ವಪ್ನಾ ಬುಕ್‌ಹೌಸ್ ಬೆಂಗಳೂರು ೨೦೦೩ — ಪ್ರೊ. ಜಿ.ಸುಬ್ರಮಣ್ಯ

೧೯. ಕರ್ನಾಟಕ ಚರಿತ್ರೆ ಸಂಪುಟ ೩
ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭ — ಪ್ರೊ. ಬಿ. ಷೇಕ್ ಅಲಿ

೨೦. ಕರ್ನಾಟಕ ಚರಿತ್ರೆ ಸಂಪುಟ ೬
ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭ — ಪ್ರೊ. ಬಿ. ಷೇಕ್ ಅಲಿ

೨೧. ಕರ್ನಾಟಕದ ಕರಕುಶಲ ಕಲೆಗಳು
ಆಯ್. ಬಿ.ಹೆಚ್ ಪ್ರಕಾಶನ್ ಬೆಂಗಳೂರು ೧೯೮ — ಬಿ.ಎಂ. ಚಂದ್ರಶೇಖರಯ್ಯ

೨೨. ಕಿನ್ನಾಳ ಕಲೆ
ಅ.ಪ್ರ. ಎಂ.ಫಿಲ್. ಕಿ.ಪ್ರ. ಕನ್ನಡ ವಿಶ್ವವಿದ್ಯಾಲಯ
ಹಂಪಿ ೨೦೦೬ — ರವಿ. ನಾಯಕ್

೨೩. ಕಿನ್ನಾಳ ಗೊಂಬೆಗಳು
ಪ್ರಸಾರಾಂಗ ಗುಲಬರ್ಗಾ ವಿ.ವಿ. ಗುಲಬರ್ಗಾ ೧೯೯೬ — ಗವಿಸಿದ್ಧ. ಎನ್. ಬಳ್ಳಾರಿ

೨೪. ಚಿತ್ರಕಲಾ ಪ್ರಪಂಚ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರ ೧೯೯೩ — ಪಿ.ಆರ್. ತಿಪ್ಪೇಸ್ವಾಮಿ.

೨೫. ಚಿತ್ರಕಲಾ ಚಿಂತನೆ
ಪ್ರಗತಿ ಪ್ರಕಾಶನ್ ದಾವಣಗೆರೆ. ೧೯೯೫ — ಶಂಕರ. ಪಾಟೀಲ

೨೬. ಚರಿತ್ರೆ ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ -೪
ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦ — ತಂಬಡ ವಿಜಯ ಮೊಣಚ್ಚ

೨೭. ದೃಶ್ಯಕಲೆ ಎಂದರೇನು ?
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರ ೧೯೯೫ — ಚಿ. ಸು. ಕೃಷ್ಣಶೆಟ್ಟಿ

೨೮. ನಿಜದ ನೆಲೆ (ಬಿ.ಕೆ.ಹೀರೆಮಠ ಅಭಿನಂದನ ಗ್ರಂಥ) — ಸಂ.ಡಾ.ಎಸ್.ಸಿ.ಪಾಟೀಲ
ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟೆ. ೨೦೦೩ — ಸತ್ಯಾನಂದ. ಪಾತ್ರೋಟ

೨೯. ನೂತನ ಗ್ರಹ ವಾಸ್ತು ದರ್ಪಣ — ಶ್ರೀಮತಿ ವಿಶಾಲಾಕ್ಷಾಂಬಾತಾಯಿ
ಪಂಡಿತ, ವೇ, ತೋಟಪ್ಪಯ್ಯ
ಶಾಸ್ತ್ರಿಗಳು, ಹಿರೇಮಠ
ಬಸವೇಶ್ವರ ಪಂಚಾಂಗ ಕರ್ತರು
ಗದಗ

೩೦. ಪಾಪ್ ಕಲೆ — ರವಿಕುಮಾರ. ಕಾಶಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ೧೯೯೭

೩೧. ಪೋಸ್ಟ್ ಮಾಡರ್ನಿಸಂ — ನೇಮಿರಾಜ. ಶೆಟ್ಟಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ೧೯೯೫

೩೨. ಪ್ರಾಚೀನ ಭಾರತದ ಇತಿಹಾಸ — ಟಿ.ಬಿ. ಚಂದ್ರಶೇಖರಪ್ಪ
ಪೂರ್ಣ ಪ್ರಕಾಶನ್ ಶಿವಮೊಗ್ಗ ೨೦೦೧

೩೩. ಬಳ್ಳಾರಿ ಜಿಲ್ಲೆಯ ಮರದ ವಾಸ್ತು — ಡಾ. ಸಿ. ಮಹಾದೇವ
ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೩೪. ಬುಡಕಟ್ಟು ಸಮಾಜ-ಹುಟ್ಟು ಸಾವಿನ ನಡುವೆ — ಗಂಗಾಧರ. ದೈವಜ್ಞ
ಅಧ್ಯಯನ ಮಾಲೆ-೨
ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

೩೫. ಭಾರತದ ಇತಿಹಾಸ -೧ — ಪ್ರೋ ಎಚ್.ರಾಮಲಿಂಗಪ್ಪ
ಕಲಾಪ್ರಕಾಶನ್ ಬೆಂಗಳೂರು ೨೦೦೪

೩೬. ಮಹಾರಾಷ್ಟ್ರದ ಜನಪದ ಸಾಹಿತ್ಯ — ಸರೋಜಿನಿ ಬಾಬರ್
ನ್ಯಾಷನಲ್ ಟ್ರಸ್ಟ್ ಆಫ್ ಇಂಡಿಯಾ ದೆಹಲಿ ೧೯೭೨

೩೭. ವಿಜಯನಗರ ಭಿತ್ತಿ ಚಿತ್ರಕಲೆ — ಸುಚಿತ್ರಾ ಲಿಂಗದಳ್ಳಿ
ಅ.ಪ್ರ. ಎಂ.ಫಿಲ್ ಕಿ.ಪ್ರ. ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೬

೩೮. ವಿಜಯನಗರದ ಗಾರೆಶಿಲ್ಪ — ಡಾ. ಸಿ.ಮಹಾದೇವ
ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦

೩೯. ಶಿವಶರಣ ಕಥಾರತ್ನಕೋಶ — ತ.ಸು. ಶಾಮರಾಯ
ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ ಮೈಸೂರು ೧೯೬೭

೪೦. ಶಿಲ್ಪಕಲೆ — ವಿಜಯಾರಾವ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು ೧೯೯೫

೪೧. ಶಿಲ್ಪಕಲಾ ಪ್ರಪಂಚ — ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ೧೯೯೪

೪೨. ಶ್ರೀರಾಮ ಕಥಾಸಾರ — ಮತ್ತೂರು. ಕೃಷ್ಣಮೂರ್ತಿ
ಗುರುಗೃಹ ಗಾನನಿಲಯ ಬೆಂಗಳೂರು ೧೯೮೦

೪೩. ಹುಬ್ಬಳ್ಳಿ ತಾಲ್ಲೂಕು ದರ್ಶನ — ಎಂ. ಬಿ. ಪಾಟೀಲ
ಆಯ್. ಬಿ. ಹೆಚ್ ಪ್ರಕಾಶನ್ ಬೆಂಗಳೂರು ೧೯೮೬

೪೪. ಜ್ಞಾನಗಂಗೋತ್ರಿ ಕಿರಿಯರ ವಿಶ್ವಕೋಶ ಸಂ,೫ ಕಲಾಸಾಹಿತ್ಯ — ರಂಜನ
ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೩

೪೫. ಜ್ಞಾನಗಂಗೋತ್ರಿ ಕಿರಿಯರ ವಿಶ್ವಕೋಶ ಸಂ,೪ ಯಂತ್ರಜಗತ್ತು — ನಿರಂಜನ
ಕರ್ನಾಟಕ ಸಹಕಾರಿ ಪ್ರಕಾಶನ್ ಮಂದಿರ ಬೆಂಗಳೂರು ೧೯೭೨

## ಬಿಡಿ ಲೇಖನಗಳು

| | | |
|---|---|---|
| ೧. | ಕಂದನಿಗೊಂದು ಅಂದದ ತೊಟ್ಟಿಲು<br>ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಸೌರಭ ೧೫-೪-೧೯೯೦ | ಆರೂರು ಲಕ್ಷ್ಮಣ ಶೇಟ್ |
| ೨. | ತೊಟ್ಟಿಲು ತಯಾರಿ ತುಂಬಾ ಕಷ್ಟಾರಿ!<br>ಸಂಯುಕ್ತ ಕರ್ನಾಟಕ ಕಾಮನ ಬಿಲ್ಲು ೨೯-೭-೧೯೯೦ | ಶ್ರೀದೇವಿ ಇಟಗಿ |
| ೩. | ಮರೆಯಾಗುತ್ತಿರುವ ಕಲಘಟಗಿಯ ಮೋಹಕ ತೊಟ್ಟಿಲು<br>ಪ್ರಜಾವಾಣಿ ಸಾಪ್ತಾಹಿಕ ಪುರವಣಿ ೮-೯-೧೯೮೫ | ಡಿ.ವಿ. ರಾಜಶೇಖರ |
| ೪. | ಕಲಾತ್ಮಕ ಕುಸುರಿ ಕೆತ್ತನೆಯ ಕಲಘಟಗಿಯ ತೊಟ್ಟಿಲು<br>ಸುಧಾ ೨೭ ಮಾರ್ಚ ೧೯೯೪ | ರಮೇಶ ದೇಶಪಾಂಡೆ |
| ೫. | ಕಲಘಟಗಿಯ ಬಣ್ಣದ ತೊಟ್ಟಿಲು<br>ಜನಪದ ಜನೆವರಿ ೧೯೯೬ | ಮೋಹನ ಭದ್ರಾಪೂರ |
| ೬. | ಚಿಣ್ಣರಿಗಿದೋ ಬಣ್ಣದ ತೊಟ್ಟಿಲು<br>ಉದಯವಾಣಿ ಸಾಪ್ತಾಹಿಕ ೧೭-೭-೧೯೮೮ | ಆರೂರು ಲಕ್ಷ್ಮಣ ಶೇಟ್ |
| ೭. | ಕಣ್ಮನ ಸೆಳೆವ 'ಕಲಾವೈಭವ'<br>ಸಂಯುಕ್ತ ಕರ್ನಾಟಕ ೧೫-೯- ೨೦೦೫ | ಬಸವರಾಜ |
| ೮. | ಕಾಡುಕುಸುಮ ಆಗುತ್ತಿರುವ ಕಲಾವಂತಿಕೆ<br>ಕನ್ನಡಪ್ರಭ ಸಾಪ್ತಾಹಿಕ ಸೌರಭ ೨೬-೮-೧೯೯೦ | ಆರೂರು ಲಕ್ಷ್ಮಣ ಶೇಟ್ |

## ಸಂಕ್ಷೇಪಗಳು

.......

| | |
|---|---|
| ೧. ಪ್ರ.ಸಂ. | ಪ್ರಧಾನ ಸಂಪಾದಕರು |
| ೨. ಕ.ಲ.ಲ.ಅ. | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ೩. ಕ.ವಿ.ವಿ, ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪. ಪು.ಸಂ. | ಪುಟ ಸಂಖ್ಯೆ |
| ೫. ಗು.ವಿ.ವಿ. | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ |
| ೬. ಮ.ಪ್ರ. | ಮಹಾಪ್ರಬಂಧ |
| ೭. ಮೈ.ವಿ.ವಿ. | ಮೈಸೂರ ವಿಶ್ವವಿದ್ಯಾಲಯ, ಮೈಸೂರು |
| ೮. ಸಂ. | ಸಂಪಾದಕ |
| ೯. ಕಿ.ಪ್ರ. | ಕಿರು ಪ್ರಬಂಧ |

